# ಜನಪದ ಜೀವನ

( ಏಳು ಸಣ್ಣ ಕತೆಗಳು )

ಲೇಖಕರು :

ಶ್ರೀ. ಬೆಟಗೇರಿ ಕೃಷ್ಣಶರ್ಮಾ

ಧಾರವಾಡ



ಪ್ರಥಮ ಪುಷ್ಪ

ಜೂನ ೧೯೫೫  ಬೆಲೆ ೧-೮-೦

# ಕರ್ನಾಟಕ ಸಹಕಾರಿ ಸಾಹಿತ್ಯ ಸಂಘ, ಲಿ., ಧಾರವಾಡ

## ಸಂಪಾದಕರ ಸಮಿತಿ

೧. ಮಾನ್ಯ ಶ್ರೀ. ಮಲ್ಲನಗೌಡರು ಪಾಟೀಲ, ಬಿ. ಎ., ಎಲ್‌ಎಲ್. ಬಿ.
ಸಹಕಾರಿ ಮಂತ್ರಿಗಳು, ಮುಂಬಯಿ.

೨. ಡಾ. ಎಸ್. ಸಿ. ನಂದಿಮಠ, ಎಮ್. ಎ, ಪಿಎಚ್. ಡಿ. ( ಲಂಡನ್ ),
ಪ್ರಿನ್ಸಿಪಾಲ, ಬಸವೇಶ್ವರ ಕಾಲೇಜ, ಬಾಗಲಕೋಟ ( ಚೇರಮನ್ )

೩. ಪ್ರಿ. ವ್ಹಿ. ಕೆ. ಗೋಕಾಕ, ಎಮ್. ಎ. ( ಆಕ್ಸಫರ್ಡ ),
ಪ್ರಿನ್ಸಿಪಾಲ, ಕರ್ನಾಟಕ ಕಾಲೇಜ, ಧಾರವಾಡ.

೪. ಪ್ರೊ. ಎಸ್. ಎಸ್. ಮಾಳವಾಡ, ಡಾಯರೆಕ್ಟರ, ಕನ್ನಡ ರಿಸರ್ಚ
ಇನ್‌ಸ್ಟಿಟ್ಯೂಟ, ಧಾರವಾಡ.

೫. ಶ್ರೀ. ವ್ಹಿ. ಎಸ್. ಬಸವನಾಳ, ಬಿ. ಎ., ಎಲೆಲ್. ಬಿ.,
ಸಂಪಾದಕರು, "ಜಯಕರ್ನಾಟಕ", ಧಾರವಾಡ.

## ಚಾಲಕರ ಸಮಿತಿ

ಚೇರಮನ್ :

೧. ಶ್ರೀ. ವ್ಹಿ. ಎಸ್. ಬಸವನಾಳ, ಚೇರಮನ್, ಕೆ. ಸಿ. ಸಿ. ಬ್ಯಾಂಕ, ಲಿ. ಧಾ.

ಸದಸ್ಯರು :

೨. ಡಾ. ಎಸ್. ಸಿ. ನಂದೀಮಠ, ಎಮ್. ಎ., ಪಿಎಚ್. ಡಿ. (ಲಂಡನ್).

೩. ಶ್ರೀ. ಪಿ. ಬಿ. ಉಗರಗೋಳ, ಬಿ. ಎ., ಎಲೆಲ್. ಬಿ.,
ಚೇರಮನ್, ಡಿ. ಸಿ. ಸಿ. ಬ್ಯಾಂಕ, ಲಿ. ಬೆಳಗಾಂವ.

೪. ಶ್ರೀ. ಎಸ್. ಪಿ. ಪಂಡಿತ, ಬಿ. ಎ., ಎಲೆಲ್. ಬಿ.,
ಚೇರಮನ್, ಡಿ. ಸಿ. ಸಿ. ಬ್ಯಾಂಕ, ಲಿ. ಶಿರಸಿ (N. K.).

೫. ರಜಿಸ್ಟ್ರಾರ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೬. ಶ್ರೀ. ಎಸ್. ಬಿ. ಹುಬಳಿ, ಆಯ್. ಎ. ಎಸ್. (Retd.) ಬೆಳಗಾಂವ.

೭. ಶ್ರೀ. ಎಂ. ಪಿ. ನಾಡಗೌಡ, ಬಿ. ಎ., ಎಲೆಲ್. ಬಿ.,
ಚೇರಮನ್, ಡಿ. ಸಿ. ಸಿ. ಬ್ಯಾಂಕ, ಲಿ. ವಿಜಾಪೂರ

೮. ಶ್ರೀ. ಎಸ್. ಎಂ. ಮಲ್ಲನಗೌಡರ, ಗೌ. ಕಾರ್ಯದರ್ಶಿ,
ಕರ್ನಾಟಕ ಡಿವಿಜನಲ್ ಕೋ-ಆಪ್. ಬೋರ್ಡ, ಧಾರವಾಡ.

೯. ಅಸಿಸ್ಟಂಟ ರಜಿಸ್ಟ್ರಾರ, ಸಿ. ಎಸ್., ಧಾರವಾಡ.

ಶ್ರೀ. ಎಸ್. ವ್ಹಿ. ಕಡೂರ, ಎಮ್. ಎ., ಎಫ್. ಆರ್. ಇ. ಎಸ್.
ಸೆಕ್ರೆಟರಿ, ಕ. ಸ. ಸಾಹಿತ್ಯ ಸಂಘ, ಲಿ. ಧಾರವಾಡ.

# ಪರಿವಿಡಿ

# ಪ್ರಕಾಶಕರ ಮಾತು

ಕನ್ನಡವು ಪುರಾತನ ಭಾಷೆಗಳಲ್ಲೊಂದಾಗಿದೆ. ಆದರೆ ಇತ್ತೀಚೆಗೆ ಅದರ ಪ್ರಗತಿಯು ತೃಪ್ತಿಕರವಾಗಿ ಸಾಗಿಲ್ಲವೆಂದು ಹಿರಿಯ ಕನ್ನಡಿಗರು ಮರುಗ ತೊಡಗಿದ್ದಾರೆ. ಉತ್ತಮ ಸಾಹಿತ್ಯ ಕೃತಿಗಳು ಹೊರಬರುತ್ತಿಲ್ಲ. ಜನರಲ್ಲಿ ವಾಚನಾಭಿರುಚಿಯು ಬೆಳೆದುಬರುತ್ತಿಲ್ಲ. ಲೇಖಕರಿಗೆ ಪ್ರೋತ್ಸಾಹನೆ ಇಲ್ಲ. ವ್ಯಕ್ತಿಗಳಾಗಲೀ ಪುಸ್ತಕ ವ್ಯಾಪಾರಿಗಳಾಗಲೀ ಸಾಹಿತ್ಯ ಸೇವೆಗಾಗಿ ನಡಕಟ್ಟಿ ನಿಂತ ಉದಾಹರಣೆಗಳು ನಮ್ಮಲ್ಲಿ ತೀರ ಕಡಿಮೆ. ಹೀಗಾಗಿ, ಉತ್ತಮ ಬರೆಹ ಗಾರರಿಗೆ ಉತ್ತೇಜನವನ್ನು ಕೊಡುವ, ಜನತೆಯಲ್ಲಿ ಓದುವ ಅಭಿರುಚಿಯನ್ನು ಹುಟ್ಟಿಸುವ, ಹಳ್ಳಿಗಳಲ್ಲಿಯೂ ಕೂಡ ವಾಚನಾಲಯ ಅಭಿರುಚಿಯನ್ನು ಬೆಳೆ ಯಿಸುವ ಉದ್ದೇಶಗಳನ್ನೊಳಗೊಂಡ ಒಂದು ಸಂಸ್ಥೆಯನ್ನು ಸಹಕಾರೀ ತತ್ವದ ಮೇರೆಗೆ ಸಂಘಟಿಸಬೇಕೆಂದು ಮುಂಬಯಿ ರಾಜ್ಯದ ಸಹಕಾರೀ ಮಂತ್ರಿ ಗಳಾದ ಮಾನ್ಯ ಶ್ರೀ. ಮಲ್ಲನಗೌಡರು ಪಾಟೀಲ ಅವರು ಮುಂದಾದರು. ಅವರ ಪ್ರಯತ್ನವೇ ಈಗ ಪೂರ್ತಸ್ವರೂಪವನ್ನು ತಾಳಿ 'ಕರ್ನಾಟಕ ಸಹಕಾರಿ ಸಾಹಿತ್ಯ ಸಂಘ ಲಿ. ಧಾರವಾಡ' ಎಂಬ ಅಭಿಧಾನವಲ್ಲಿ ಕಾರ್ಯ ಮಾಡುತ್ತಲಿದೆ. ಲೇಖಕರಿಗೆ ಹಣದ ರೂಪದಲ್ಲಿ ಪ್ರೋತ್ಸಾಹಿಸುವ ಉದ್ದೇಶ ವುಳ್ಳ ಸಂಸ್ಥೆಗಳಲ್ಲಿ ಇದೇ ಮೊದಲನೆಯದು.

ವಿವಿಧ ವಿಷಯಗಳ ಮೇಲೆ ಕೃತಿಗಳನ್ನು ಬರೆಯಿಸಿ ಸದ್ಯಕ್ಕೆ ೧೫೦ ಪುಟ ಗಳ ನಾಲ್ಕು ಪುಸ್ತಕಗಳನ್ನು ಪ್ರತಿವರ್ಷ ಒದಗಿಸಲಾಗುವದು. ಪರಿಸ್ಥಿತಿಯು ಹೆಚ್ಚು ಅನುಕೂಲವಾದಂತೆ ಹೆಚ್ಚೆಚ್ಚು ಪುಸ್ತಕಗಳನ್ನು ಕೊಡಬಹುದು. ಈಗ ಕನ್ನಡನಾಡಿನ ಸಾಹಿತ್ಯ, ಸಂಸ್ಕೃತಿ, ವಿಜ್ಞಾನ, ಸಮಾಜಶಾಸ್ತ್ರಗಳನ್ನು ಮುಖ್ಯ ವಾಗಿಟ್ಟುಕೊಂಡು ಗ್ರಂಥಗಳನ್ನು ಬರೆಯಿಸಲಾಗುವದು.

ಪ್ರತಿವರುಷ ಯಾವ ಯಾವ ವಿಷಯಗಳ ಬಗೆಗೆ ಪುಸ್ತಕಗಳನ್ನು ಪ್ರಕ ಟಿಸಬೇಕೆಂಬುದನ್ನು ನಿರ್ಣಯಿಸಿ, ಹೆಸರಾದ ಲೇಖಕರಿಂದ ಬರೆಯಿಸಿ, ಅಂತಹ ಲೇಖಕರಿಗೆ ಸಂಭಾವನೆಯನ್ನು ಕೊಡಲಾಗುವದು. ಗ್ರಂಥಪ್ರಕಟನೆಯ ಬಗೆಗೆ

ಬರಬಹುದಾದ ಆವಶ್ಯಕ ಎಲ್ಲ ವೆಚ್ಚವನ್ನು, ಸಂಘದ ನಿಯಮಗಳಿಗೆ ಅನುಸರಿಸಿ ಒಟ್ಟಿನ ಆದಾಯದಲ್ಲಿ ಕಳೆದು, ಉಳಿದ ನಿಕ್ಕಿ ಲಾಭದಲ್ಲಿ ಅರ್ಧದಷ್ಟನ್ನು ಲೇಖಕರಿಗೆ ಕೊಡಲಾಗುವದು. ಅವಶ್ಯಕತೆಯ ಮೇರೆಗೆ ಅವುಗಳ ಎರಡನೆಯ ಹಾಗು ಮುಂದಿನ ಮುದ್ರಣಗಳನ್ನು ಪ್ರಕಟಿಸಲಾಗುವದು. ಆಗಲೂ ಸಹಿತ ಇದೇ ನಿಯಮವು ಅನ್ವಯಿಸುತ್ತದೆ. ಆದರೆ, ಪ್ರಾರಂಭಕ್ಕೆ ಲೇಖಕರಿಗೆ, ಕೈಬರೆಹದ ಪ್ರತಿಯು ತಲುಪಿ ಸಂಘದಿಂದ ಸ್ವೀಕರಿಸಲ್ಪಟ್ಟ ಮೇಲೆ, ಕೆಲವೊಂದು ಹಣವನ್ನು ನಿಯಮಗಳಿಗನುಸರಿಸಿ ಮುಂಗಡವಾಗಿ ಕೊಡಲಾಗುವದು.

ಈ ಯೋಜನೆಯ ಮೇರೆಗೆ ಈಗ ಸಂಘದ ಮಾಲೆಯ ಮೊದಲನೆಯ ಪುಷ್ಪವಾಗಿ " ಜನಪದ ಜೀವನ "ವು ಓದುಗರ ಕೈಸೇರಿದೆ. ಸಂಘದ ಈ ಮೊದಲನೆಯ ಪುಷ್ಪವು ಎಷ್ಟೋ ದಿನಗಳ ಹಿಂದೆ ಹೊರಡಬೇಕಾಗಿತ್ತು. ಆದರೆ ಕಾರಣಾಂತರಗಳಿಂದ ಅದು ಸಾಧ್ಯವಾಗಲಿಲ್ಲ. ಸಣ್ಣ ಕತೆಗಳು ಜನ-ಮನವನ್ನು ಸುಲಭವಾಗಿ ಸೆಳೆಯಬಲ್ಲವು ಎಂಬ ಉದ್ದೇಶದಿಂದ ಈ ಪುಸ್ತಕವನ್ನು ಪ್ರಥಮತಃ ಪ್ರಕಟಿಸಲಾಗಿದೆ. ಅದರಲ್ಲೂ ಕನ್ನಡ ಕತೆಗಳ ಪ್ರಪಂಚದಲ್ಲಿ ತಮ್ಮದೇ ಆದ ಸ್ಥಾನವನ್ನು ಪಡೆದುಕೊಂಡಿರುವ ಶ್ರೀ. ಬೆಟಗೇರಿ ಕೃಷ್ಣಶರ್ಮರು ಹಳ್ಳಿಯ ಜನಜೀವನವನ್ನು ಚಿತ್ರಿಸುವ " ಜನಪದ ಜೀವನ " ವೆಂಬ ಈ ಪುಸ್ತಕದಲ್ಲಿ ಕಥೆಗಳನ್ನು ಮಾರ್ಮಿಕವಾಗಿ ಮೂಡಿಸಿದ್ದಾರೆ.

ನಮ್ಮ ಮಾಲೆಯ ಎರಡನೆಯ ಪುಷ್ಪವು ಈಗಾಗಲೇ ಪ್ರಕಟನೆಗೆ ಸಿದ್ಧವಾಗಿದೆ. ಹೆಸರಾಂತ ಜನಪದ ಸಾಹಿತ್ಯಿಕರಾದ ಶ್ರೀ. ಸಿಂಪಿ ಲಿಂಗಣ್ಣನವರು ಬರೆದಿರುವ " ಬಾಳ ಬಟ್ಟೆ " ನಮ್ಮ ಎರಡನೆಯ ಪುಷ್ಪ. ಕನ್ನಡನಾಡಿನ ಮಹಾನುಭಾವಿಗಳಾದ ಶಿವಶರಣರ ವಚನಗಳನ್ನು ಆಧರಿಸಿ ಬರೆದ ಉನ್ನತ ಜೀವನದ ಮಾರ್ಗನಿರೂಪಣೆಯು ಈ ಹೊತ್ತಗೆಯಲ್ಲಿ ಕಂಡುಬರುತ್ತಿದೆ.

ಇಂಥ ಸಂಸ್ಥೆಗಳ ಘನವಾದ ಉದ್ದೇಶಗಳು ಸಫಲವಾಗಬೇಕಾದರೆ ಲೇಖಕರ ಮತ್ತು ಸಂಘ-ಸಂಸ್ಥೆಗಳ ವಿಶೇಷವಾಗಿ ಸಹಕಾರಿ ಸಂಸ್ಥೆಗಳ ಸಹಕಾರವು ಅತ್ಯವಶ್ಯ. ಕನ್ನಡಿಗರೆಲ್ಲರೂ ಚಂದಾದಾರರಾಗಿ, ಶೇರುದಾರರಾಗಿ, ಓದುಗರಾಗಿ ಪ್ರೋತ್ಸಾಹಿಸಬೇಕು. ಈ ಸಂಘದ ಶೇರುದಾರರಾಗಬೇಕಾದರೆ ಕನಿಷ್ಟ ೨೫ ರೂ. ಗಳ ಒಂದು ಶೇರನ್ನು ಕೊಳ್ಳಬೇಕಾಗುವದು ಮತ್ತು ಒಂದು ರೂಪಾಯಿ ಪ್ರವೇಶ ಧನವನ್ನು ಕಳಿಸಬೇಕಾಗುವದು. ಸದಸ್ಯರಾಗಿದ್ದು ಚಂದಾ

ದಾರರಾಗ ಬಯಸುವವರು ೫ ರೂ. ಗಳನ್ನು ಪ್ರತಿವರ್ಷ ಕೊಡಬೇಕಾಗುವದು. ಸದಸ್ಯತ್ವವಿಲ್ಲದೆ ಚಂದಾದಾರರಾಗ ಬಯಸುವವರು ಪ್ರತಿವರ್ಷ ಆರು ರೂ. ಗಳನ್ನು ಚಂದಾಹಣವೆಂದು ಕೊಡಬೇಕಾಗುವದು. ಕನ್ನಡಿಗರೆಲ್ಲರೂ ಸಹಕರಿಸಬೇಕೆಂದು ಬಿನ್ನಹ.

ನಮ್ಮ ಕರೆಗೆ ಓಗೊಟ್ಟು, ನಮ್ಮ ಮೊದಲನೆಯ ಪುಷ್ಪಕ್ಕೆ ಕತೆಗಳನ್ನು ಬರೆದುಕೊಟ್ಟ ಶ್ರೀ. ಬೆಟಗೇರಿ ಕೃಷ್ಣಶರ್ಮರಿಗೆ ನಾವು ತುಂಬಾ ಋಣಿಯಾಗಿದ್ದೇವೆ. ಈ ಪುಸ್ತಕವನ್ನು ಅಲ್ಪ ವೇಳೆಯಲ್ಲಿ ಅಂದವಾಗಿ ಮುದ್ರಿಸಿಕೊಟ್ಟ ರವೀಂದ್ರ ಮುದ್ರಣಾಲಯ, ಧಾರವಾಡ ಅವರಿಗೂ ನಾವು ಋಣಿಯಾಗಿದ್ದೇವೆ.

ಅಲ್ಪ ಬೆಲೆಯಲ್ಲಿ, ಗುಣ ಮತ್ತು ಗಾತ್ರದಲ್ಲಿ ಉತ್ತಮ ಸಾಹಿತ್ಯ ಕೃತಿಗಳನ್ನು ಪ್ರಕಟಿಸುವ ಉದ್ದೇಶವುಳ್ಳ ನಮ್ಮ ಸಂಸ್ಥೆಗೆ, ಈಗಾಗಲೇ ಚಂದಾದಾರರಾಗಿ, ಶೇರದಾರರಾಗಿ ಮಹನೀಯರು ಮತ್ತು ಸಂಘ-ಸಂಸ್ಥೆಗಳು ನೀಡಿರುವ ನೆರವನ್ನು ನಾವು ಮರೆಯುವಂತಿಲ್ಲ. ಕನ್ನಡಿಗರು ಈ ಪ್ರಕಟನೆಯನ್ನು ಹೃತ್ಪೂರ್ವಕವಾಗಿ ಸ್ವಾಗತಿಸುವರೆಂದು ಆಶಿಸುತ್ತೇವೆ.

ಧಾರವಾಡ
೧೦-೬-೧೯೫೫

ವ್ಹಿ. ಎಸ್. ಬಸವನಾಳ,
ಅಧ್ಯಕ್ಷರು, ಸಂಚಾಲಕ ಸಮಿತಿ.

# ನಿವೇದನೆ

ಪ್ರಸಿದ್ಧ ಕನ್ನಡ ಸಾಹಿತಿಗಳಿಗೆ ಸಹಾಯ ಮಾಡಿ, ಅವರ ಉತ್ತಮ ಗ್ರಂಥಗಳನ್ನು ಪ್ರಕಟಿಸುವ ಹೊಣೆಯನ್ನು ಕರ್ನಾಟಕ ಸಹಕಾರೀ ಸಾಹಿತ್ಯ ಸಂಘದವರು ಹೊತ್ತುಕೊಂಡು, ಕನ್ನಡ ನುಡಿಯ ಬೆಳವಣಿಗೆಗಾಗಿ ಯತ್ನಿಸುತ್ತಿರುವರು. ಅದಕ್ಕಾಗಿ ಈ ಸಂಘವು ಜನ್ಮವೆತ್ತಿದೆ. ಈ ಸಂಘವು ಮುಂಬಯಿ ಸಹಕಾರ ಶಾಖೆಯ ಮಂತ್ರಿಗಳಾದ ಮಾನ್ಯ ಶ್ರೀ. ಮ. ಪು. ಪಾಟೀಲರವರ ಪ್ರೋತ್ಸಾಹ ಮತ್ತು ನೇತೃತ್ವದಲ್ಲಿ, ಸಾಹಿತ್ಯಕ್ಷೇತ್ರದಲ್ಲಿ ಹೆಸರಾಂತ ವಿದ್ವಜ್ಜನರ ಸಹಕಾರವನ್ನು ಪಡೆದು, ವಿವಿಧ ವಿಷಯಗಳನ್ನೊಳಗೊಂಡ ಗ್ರಂಥ ಮಾಲೆಯನ್ನು ಪ್ರಾರಂಭಿಸಿದೆ. ಈ ಮಾಲೆಯಲ್ಲಿ ಶ್ರೀ. ಬೆಟಗೇರಿ ಕೃಷ್ಣ ಶರ್ಮರವರ 'ಜನಪದ ಜೀವನ'ವು ಪ್ರಥಮ ಪುಷ್ಪವಾಗಿ ಪ್ರಕಟವಾಗಿದೆ.

ಜನಪದ ಜೀವನದಲ್ಲಿ ಏಳು ಕತೆಗಳಿವೆ. ಅವುಗಳಲ್ಲಿ ಈಗಿನ ಹಳ್ಳಿಯ ಜೀವನವನ್ನು ಮಾರ್ಮಿಕವಾಗಿ ಚಿತ್ರಿಸಲಾಗಿದೆ. ಹಳ್ಳಿಯ ಜೀವನವನ್ನು ಅರಿಯಲು ಆತುರಪಡುವ ಜನತೆಗೆ ಈ ಪುಸ್ತಕವು ಕೈಗನ್ನಡಿಯಾಗಿದೆ. ಈ ಗ್ರಂಥದ ಶೈಲಿ ಮತ್ತು ವಿಷಯ ನಿರೂಪಣೆ ಪ್ರೌಢವಾಗಿದ್ದರೂ ಕೂಡ ಸಾಮಾನ್ಯ ಜನರ ಮನವನ್ನು ಆಕರ್ಷಿಸುವಂತಿದೆ.

ಕನ್ನಡಿಗರಿಗೆ ನಮ್ಮ ಪ್ರಥಮ ಪ್ರಯತ್ನದ ಈ ಫಲವನ್ನು ನೀಡಲಾಗಿದೆ. ಅವರು ಇದನ್ನು ಉದಾರ ಮನಸ್ಸಿನಿಂದ ಸ್ವೀಕರಿಸಿ ಇದಕ್ಕೂ ಹೆಚ್ಚಿನ ಸೇವೆ ನಮ್ಮಿಂದ ಸಲ್ಲುವಂತೆ ಪ್ರೋತ್ಸಾಹಿಸಬೇಕೆಂದು ಪ್ರಾರ್ಥನೆ.

ತಮ್ಮ

ಶಿ. ಚೆ. ನಂದೀಮಠ,
ಸಂಪಾದಕ ಮಂಡಲದ ಪರವಾಗಿ.

ಧಾರವಾಡ
೧೦–೬–೧೯೫೫

# ಮೊದಲ ನುಡಿ

— ೦ —

ನನ್ನ ಈ ಐದನೆಯ ಕಥಾಸಂಕಲನವನ್ನು ಕನ್ನಡ ಜನತೆಯ ಕೈಯಲ್ಲಿ ಇರಿಸಲು ತುಂಬ ಸಂತೋಷವೆನಿಸುತ್ತಲಿದೆ. ಧಾರವಾಡದ ಸಹಕಾರಿ ಸಾಹಿತ್ಯ ಸಂಘದ ಪ್ರಚೋದನೆಯಿಲ್ಲದೆ ಹೋಗಿದ್ದರೆ, ಇಷ್ಟರಲ್ಲಿಯೆ ಈ ಸಂಕಲನವು ಬೆಳಕಿಗೆ ಬರುತ್ತಿದ್ದಿತೊ ಇಲ್ಲವೊ! ಆದುದರಿಂದ ನಾನು ಆ ಸಂಘದ ಸಂಚಾಲಕ ಮಹನೀಯರಿಗೆ ಪ್ರಾರಂಭದಲ್ಲಿಯೆ ನನ್ನ ಕೃತಜ್ಞತೆಯ ಅಭಿವಂದನೆಗಳನ್ನು ಸಲ್ಲಿಸುವೆನು.

ಇದರಲ್ಲಿಯ ಕತೆಗಳೆಲ್ಲ ನಮ್ಮ ಸುತ್ತು-ಮುತ್ತಣ ಜಾನಪದಜೀವನದಿಂದ ಎತ್ತಿಕೊಂಡುವುಗಳಾಗಿವೆ. ನಮ್ಮ ಕಥೆ, ಕಾದಂಬರಿ, ನಾಟಕಗಳು ನಮ್ಮ ಜನಪದದ ಜೀವನಚಿತ್ರಗಳಾಗಿರಬೇಕೇ ಹೊರತು, ಪರಭಾಷಾಸಾಹಿತ್ಯಕೃತಿಗಳ ಪ್ರತಿಬಿಂಬವಾಗಿ ಬರಬಾರದೆಂದು ಮೊದಲಿನಿಂದಲೂ ನನ್ನ ಹಾರಯಿಕೆ. ಈ ಸಂಕಲನದಲ್ಲಿಯ ಯಾವ ಸಣ್ಣಕಥೆಯೂ ನನ್ನ ಹಾರಯಿಕೆಗೆ ಹೊರತಾಗಿ ಇಲ್ಲ. ಕನ್ನಡಜನಪದದ ಜೀವನವು ಇಂದು-ನಿನ್ನೆಯದಲ್ಲ. ಅದಕ್ಕೆ ಎರಡು ಸಾವಿರ ವರುಷಗಳ ದಿವ್ಯ-ಭವ್ಯವಾದ ಚರಿತ್ರೆಯಿದೆ. ಕನ್ನಡ ಜನತೆ ಸಾಮಾನ್ಯವಾದುದಲ್ಲ. 'ಸುಭಟರ್ಕಳ್, ಕವಿಗಳ್, ಸುಪ್ರಭುಗಳ್, ಚೆಲ್ವರ್ಕಳ್, ಅಭಿಜನರ್ಕಳ್, ಗುಣಿಗಳ್, ಅತ್ಯುಗ್ರರ್, ಗಭೀರಚಿತ್ತರ್, ವಿವೇಕಿಗಳ್' ಎಂದು ರಸಿಕ ರಾಜಕವಿಯಿಂದ ಹೊಗಳಿಸಿಕೊಂಡುದು. ಅಂತಹ ಜನತೆಯ ಸಂತಾನವಾದ ಇಂದಿನ ಕನ್ನಡಿಗರಲ್ಲಿ, ಆನುವಂಶಿಕವಾಗಿ ಹಿಂದಿನ ಹಿರಿಯರ ಗುಣಗಳು ಇಳಿದು ಬಂದಿರಲಾರವೆ ? ಪರಿಸ್ಥಿತಿಯ ಪ್ರಭಾವದಿಂದ ಆ ಗುಣಗಳು ಸುಪ್ತವಾಗಿರಬಹುದು. ಅವುಗಳನ್ನು ಹೊಡೆದು ಎಬ್ಬಿಸಿ ಎಚ್ಚರಿಸುವ ಕಾರ್ಯವನ್ನು ನಮ್ಮ ನಾಡಿನ ಸಾಹಿತ್ಯಿಕರು ಅವಶ್ಯವಾಗಿ ಮಾಡಬೇಕಾಗಿದೆ. ಆದರೆ ಒಂದು ನಡೆದುಕೊಂಡು ಬಂದಿರುವ ನಿಯಮ : ಸಾಹಿತ್ಯಿಕ ಬರಿಗೈಯ ಬಂಟ. ಶ್ರೀಯುತರ ಔದಾರ್ಯದ ಬೆಂಬಲ ದೊರೆಯದೆ ಹೋದರೆ, ಸಾಹಿತ್ಯಿಕನ

ಕೃತಿ ಕರ್ತೃಗಳಲ್ಲಿಯೆ ಬಿದ್ದುಕೊಳ್ಳಬೇಕಾಗುವುದು. ಹಣದ ಬೆಂಬಲವಿಲ್ಲದುದರಿಂದ, ನಮ್ಮ ನಾಡಿನಲ್ಲಿಯ ನಿಜವಾದ ಸಾಹಿತ್ಯಿಕಶಕ್ತಿ ಎಷ್ಟೊಂದು ನಿರರ್ಥಕವಾಗಿ ನಿಷ್ಪ್ರಯೋಜಕವಾಗಿ ಹೋಗಿದೆಯೇನೋ! ಆದರೆ ಇಂದು ಕನ್ನಡ ಸಾಹಿತ್ಯಿಕರ ಕಡೆಗೆ ಅನುಕೂಲದೈವ ಕಣ್ಣು ತೆರೆದಿದೆ. ಸಹಕಾರಿ ಸಾಹಿತ್ಯ-ಸಂಘದಂತಹ ಹಣದ ಸಂಸ್ಥೆ ಒಳ್ಳೆಯ ಸಾಹಿತ್ಯಿಕರಿಗೆ ಬೆಂಬಲ ಕೊಡಲು ಸಿದ್ಧವಾಗಿ ಮುಂದೆ ಬಂದಿದೆ. ನಾಡಿನ ಸುವಿವೇಕದ ಪ್ರಗತಿಯ ಲಕ್ಷಣವಿದು. ಇದರ ಪ್ರಯೋಜನವನ್ನು ನಮ್ಮ ಸಾಹಿತ್ಯಿಕರು ಅವಶ್ಯವಾಗಿ ಪಡೆದುಕೊಳ್ಳಬೇಕು. ನಾಡಿನ ಜನರಲ್ಲಿ ಸದಭಿರುಚಿಯೂ ಸುಸಂಸ್ಕೃತಿಯೂ ಬೆಳೆಯುವಂತಹ ಒಳ್ಳೊಳ್ಳೆಯ ಸಾಹಿತ್ಯಕೃತಿಗಳನ್ನು ಬೆಳಕಿಗೆ ತಂದುತೋರಿಸಬೇಕು.

ಸಹಕಾರೀ ಸಾಹಿತ್ಯಸಂಘದ ಸಂಪಾದಕ ಮಂಡಲಿಯು ನನ್ನಿಂದ ಸಣ್ಣ-ಕಥೆಗಳ ಸಂಕಲನವನ್ನೇ ಅಪೇಕ್ಷಿಸಿತು; ಅಲ್ಲದೆ ಅವೆಲ್ಲ ಕನ್ನಡ ಜನಪದದ ಜೀವನದಿಂದ ಕೂಡಿರಬೇಕೆಂಬುದನ್ನು ಸೂಚಿಸಿತು. ರೋಗಿ ಬಯಸಿದುದೂ ಹಾಲೋಗರ; ವೈದ್ಯ ಹೇಳಿದುದೂ ಹಾಲೋಗರ! ಸಂಪಾದಕಮಂಡಲಿಯ ಅಪೇಕ್ಷೆ-ಸೂಚನೆಗಳು ನನಗೆ ತುಂಬ ಸಮಾಧಾನವನ್ನು ಉಂಟುಮಾಡಿದುವು. ಏಕೆಂದರೆ, ನನ್ನ ಕನ್ನಡ ಜನತೆಯ ಜೀವನವು ನನಗೆ ತುಂಬ ಪ್ರೀತಿಯ ವಿಷಯ. ಪರಂಪರಾಗತವಾದ ಅದರ ಹಿರಿಯ ಗುಣಗಳಿಗಾಗಿ ನಾನು ಹೆಮ್ಮೆಯಿಂದ ಹಿರಿಹಿರಿ ಹಿಗ್ಗುವುದೂ ಉಂಟು; ಪರಿಸ್ಥಿತಿಯ ಪ್ರಭಾವಕ್ಕೊಳಗಾಗಿ ಸ್ವಸ್ವರೂಪವನ್ನು ಮರೆತು ನಡೆದಿರುವ ಅದರ ಇಂದಿನ ಇರುವಿಗಾಗಿ ಮರ-ಮರ ಮರುಗುವುದೂ ಉಂಟು. ಒಂದೆಡೆ ಮಾನವತೆಯ ಸಂಪೂರ್ಣ ವಿಕಾಸವು ಕಣ್ಣಿಗೆ ಬೀಳುತ್ತಿದ್ದರೆ, ಇನ್ನೊಂದೆಡೆ ದಾನವತೆಯ ದಾಳಿದಲ್ಲಣ ಕಣ್ಣು-ಮನಗಳನ್ನು ಚುಚ್ಚುತ್ತಿದೆ. ವ್ಯಕ್ತಿಸ್ವಾತಂತ್ರ್ಯ-ಸಮಾಜಕಲ್ಯಾಣಗಳು ಬಾಳಿನ ಉಸಿರಾಗಿದ್ದ ನಮ್ಮ ಜನಪದದಲ್ಲಿ, ಇಂದು ಅವುಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳುವ ವ್ಯಕ್ತಿಗಳ ಸಂಖ್ಯೆ ತೀರ ಕಡಿಮೆಯಾಗಿದೆ. ಇದೆಲ್ಲ ಪರಿಸ್ಥಿತಿಯ ಪ್ರಭಾವವೇ ಹೊರತು ನಮ್ಮ ಜನತೆ ಕೆಟ್ಟುದಲ್ಲ. ಒಳ್ಳೆಯ ಪರಿಸ್ಥಿತಿಯನ್ನು ಒದಗಿಸಿದಲ್ಲಿ ಎಲ್ಲರೂ ಮಾನವತೆಯ ಗುರಿಯನ್ನು ಸರಿಯಾಗಿ ಕಂಡುಕೊಳ್ಳಬಹುದು. ಅಂತಹ ಪರಿಸ್ಥಿತಿಯನ್ನು ಒದಗಿಸಲಿಕ್ಕೆ ಸರಕಾರದ ಕಟ್ಟು-ಕಟ್ಟಳೆಗಳು ಸಮರ್ಥವಾಗಲಾರವು. ಬರಿ ಹೊಟ್ಟೆತುಂಬ ಅನ್ನ, ಮೈತುಂಬ ಬಟ್ಟೆ

ಒದಗಿಸಿಕೊಡಬಲ್ಲ ಆರ್ಥಿಕಸಮತೆಯೂ ಸಮರ್ಥವಾಗಲಾರದು. ವ್ಯಕ್ತಿಯ ಹೃದಯದ ಅರಳಿಕೆಯು ಇಲ್ಲದಲ್ಲಿ ಯಾವ ಉಪಾಯವೂ ಸಮಾಜಕಲ್ಯಾಣ ವನ್ನು ಸಾಧಿಸಲಾರದು.

ವ್ಯಕ್ತಿ-ವ್ಯಕ್ತಿಗಳ ಹೃದಯಗಳನ್ನು ಅರಳಿಸಿ ಅಲ್ಲಿ ಸಂಸ್ಕಾರದ ಸುಗಂಧ ವನ್ನು ನೀಡುವುದಕ್ಕೆ ಮುಖ್ಯ ಸಾಧನವೆಂದರೆ ಸಾಹಿತ್ಯ. ಎಂತಲೇ ಇಂದು ಪ್ರತಿಯೊಂದು ರಾಷ್ಟ್ರವೂ ದೇಶ-ಕಾಲೋಚಿತವಾದ ಒಳ್ಳೆಯ ಸಾಹಿತ್ಯವನ್ನು ನಿರ್ಮಿಸುವುದರ ಕಡೆಗೆ ವಿಶೇಷವಾಗಿ ಲಕ್ಷ್ಯಕೊಡುತ್ತಲಿದೆ. ಇದುವರೆಗಿನ ನಮ್ಮ ಪರಾಧೀನಜೀವನದಲ್ಲಿ, ಭಾರತದಲ್ಲಿಯ ಯಾವ ಭಾಷಾಸಾಹಿತ್ಯದ ಕಡೆಗೂ ಯಾರೂ ಲಕ್ಷ್ಯಕೊಡುತ್ತಿರಲಿಲ್ಲ. ಆದರೂ ಅದು ತಕ್ಕಮಟ್ಟಿಗೆ ತನ್ನಿಂದ ತಾನೇ ಬೆಳೆದುಕೊಂಡು ಬಂದುದು ನಮ್ಮ ರಾಷ್ಟ್ರದ ಅಂತಃಶಕ್ತಿಯ ಚಿಹ್ನವಾಗಿದೆ. ಇಂದು ನಾವು ಸ್ವತಂತ್ರರು. ನಾವೇ ನಮ್ಮನ್ನು ಆಳುವವರು. ಒಳ್ಳೆಯ ಕಾರ್ಯಗಳನ್ನು ಮಾಡಬೇಕೆಂದರೆ ನಮಗೆ ಸಂಪೂರ್ಣ ಸ್ವಾತಂತ್ರ್ಯ ವಿದೆ. ಮೊದಲನೆಯದಾಗಿ ನಾವು ಮಾಡಬೇಕಾದ ಮುಖ್ಯಕಾರ್ಯವೆಂದರೆ, ನಮ್ಮ ರಾಷ್ಟ್ರದಲ್ಲಿಯ ವ್ಯಕ್ತಿ-ವ್ಯಕ್ತಿಗಳ ಹೃದಯ-ಮನಗಳನ್ನು ತಿದ್ದುವುದು. ಪರಾಧೀನ ಜೀವನದ ಕಾರಣದಿಂದ ಮುಸುಕಿದ ಅಜ್ಞಾನ, ಸ್ವಾರ್ಥ, ಒಡಕುತನ ಗಳ ತೆರೆಗಳನ್ನು ಹರಿದುಹಾಕುವುದು. ಈ ಮಹತ್ತ್ವದ ಕಾರ್ಯವನ್ನು ನೆರವೇರಿ ಸುವ ಸಾಮರ್ಥ್ಯ ಸಾಹಿತ್ಯದೇವತೆಯೊಬ್ಬಳಲ್ಲಿಯೇ ಇದೆ. ವಿವೇಕಿಗಳಾದ ಸಾಹಿತ್ಯಿಕರು ತಮ್ಮ ಸಾಧನೆಯಿಂದ ಆ ದೇವತೆಯನ್ನು ವಶಪಡಿಸಿಕೊಂಡು, ಜನಮಂಗಲದ ಕಾರ್ಯದಲ್ಲಿ ಜಯಶಾಲಿಗಳಾಗಬೇಕು.

ಸಾಹಿತ್ಯದೇವಿಯ ವಿವಿಧರೂಪಗಳಲ್ಲಿ ಸಣ್ಣಕಥೆಗಳದೂ ಒಂದು ವಿಶೇಷ-ರೂಪ. ಯಾವುದೇ ಒಂದು ವಿಚಾರವನ್ನಾಗಲಿ ಭಾವನೆಯನ್ನಾಗಲಿ ಜನತೆ ಯಲ್ಲಿ ಹರಡುವುದಕ್ಕೆ ಸಣ್ಣಕಥೆಯ ಸಾಹಿತ್ಯರೂಪ ಉತ್ತಮವಾಹಕವಾಗಿ ನಿಲ್ಲಬಲ್ಲದು. ಇದರ ಮಹತ್ತ್ವವನ್ನು ಅರಿತೇ ಇಂದಿನ ಪ್ರಪಂಚದಲ್ಲಿ,ಪ್ರತಿ ಯೊಂದು ನಾಗರಿಕಭಾಷೆಯೂ–ಪ್ರತಿದಿನವೂ–ಅಸಂಖ್ಯ ಸಣ್ಣಕಥೆಗಳನ್ನು ಸೃಷ್ಟಿಸುತ್ತಲಿದೆ.

ನಮಗಾದರೂ ಇಂದು ಸಣ್ಣಕತೆಯೆಂಬುದು ಹೊಸಮಾತಾಗಿ ಉಳಿ ದಿಲ್ಲ. ತಾಂತ್ರಿಕ ದೃಷ್ಟಿಯಿಂದ ಆಧುನಿಕ ಸಣ್ಣಕತೆ, ಇಂಗ್ಲಿಷ್ ಸಾಹಿತ್ಯದ

ಅಭ್ಯಾಸದ ಫಲವಾಗಿ ಭಾರತದಲ್ಲಿ ಪ್ರವೇಶಮಾಡಿತೆಂದು ಸಣ್ಣಕತೆಯ ಚರಿತ್ರಕಾರರು ಹೇಳುವರಾದರೂ, ಇಂದು ಭಾರತದ ಎಲ್ಲ ಭಾಗದ ಸಾಹಿತ್ಯಗಳಲ್ಲಿಯೂ ಸಣ್ಣಕತೆಯೆಂಬುದು ಪ್ರಶಸ್ತವಾದ ಮತ್ತು ಪ್ರಭಾವಿಯಾದ ಸ್ಥಾನವನ್ನು ಗಳಿಸಿಕೊಂಡುಬಿಟ್ಟಿದೆ. ಕರ್ನಾಟಕದ ನೂತನಸಾಹಿತ್ಯವೂ ಈ ಮಾತಿಗೆ ಹೊರತಾಗಿಯೇನೂ ಇಲ್ಲ. ದಿನದಿನಕ್ಕೂ ಹೊಸ ಹೊಸ ಕತೆಗಾರರು ಉದಯಿಸಿ, ನಮ್ಮ ಸಾಹಿತ್ಯರಂಗದ ಮೇಲೆ ಕಾಣಿಸಿಕೊಳ್ಳುತ್ತಿದ್ದಾರೆ. ಇಂದು ಪ್ರಕಟವಾಗುವ ಗ್ರಂಥಗಳಲ್ಲಿ ಸಣ್ಣಕತೆಗಳ ಸಂಕಲನಗಳೇ ಬಹುಸಂಖ್ಯಾತವಾಗಿ ಕಾಣುತ್ತಿವೆ. ದಿನಪತ್ರಿಕೆ, ವಾರಪತ್ರಿಕೆ, ಪಕ್ಷಪತ್ರಿಕೆ, ಮಾಸಪತ್ರಿಕೆ ಮೊದಲಾಗಿ ಎಲ್ಲ ನಿಯತಕಾಲಿಕಗಳಲ್ಲಿಯೂ ಸಣ್ಣಕತೆಗಳು ಪ್ರಾಮುಖ್ಯವಾದ ಸ್ಥಳವನ್ನು ವ್ಯಾಪಿಸಿ ಕುಳಿತಿರುತ್ತವೆ. ಇಂತಹ ಪತ್ರಿಕೆಗಳ ವಾಚಕರಲ್ಲಿ ಬಹುಸಂಖ್ಯಾತರು, ಮೊತ್ತಮೊದಲಿಗೆ ಪ್ರೀತಿಯಿಂದ ಓದುತ್ತಿರುವುದೆಂದರೆ ಸಣ್ಣಕತೆಗಳನ್ನೇ. ಹೀಗಾಗಿ 'ಸಣ್ಣಕತೆ' ಎಂಬ ಸಾಹಿತ್ಯಜಾತಿಯಿಂದು, ನಾಡಿನ ಹಿರಿಯರಿಗೂ ಕಿರಿಯರಿಗೂ ಪರಿಚಿತ ವಿಷಯವಾಗಿದೆ.

ಕನ್ನಡಿಗರಿಗೆ ಕಥಾಸಾಹಿತ್ಯ ಹೊಸದಲ್ಲವಾದರೂ ಆಧುನಿಕ ಸಣ್ಣಕತೆಗಳ ಸಾಹಿತ್ಯತಂತ್ರದ ಪ್ರಜ್ಞೆ ಹೊಸದಾಗಿಯೇ ಮೂಡಿದುದು. ಈಗ ೩೫–೪೦ ವರ್ಷಗಳ ಹಿಂದೆ 'ಸಣ್ಣಕತೆ' ಎಂಬ ಮಾತು ಬಳಕೆಯಲ್ಲಿ ಇದ್ದಿತಾದರೂ, ಅದು ಇದ್ದುದು ಕತೆಯ ಕಿರಿಯಾಕಾರವನ್ನು ಮಾತ್ರ ಸೂಚಿಸುವುದಕ್ಕಾಗಿ. ಇಂದು 'ಸಣ್ಣಕತೆ' ಎಂಬ ಪದವು, ಕೆಲವೊಂದು ಸಾಹಿತ್ಯಲಕ್ಷಣವಿಶೇಷವನ್ನು ಕೂಡಿಕೊಂಡುದಾಗಿ ನಮ್ಮ ಕಣ್ಣೆದುರಿಗೆ ನಿಲ್ಲುವಂತೆ, ಅಂದಿನವರ ಕಣ್ಣೆದುರು ನಿಲ್ಲುತ್ತಿರಲಿಲ್ಲ. ಹೆಚ್ಚು ಕಾಲ ಹೇಳಬಹುದಾದ ಕತೆ ದೊಡ್ಡ ಕತೆ; ಕಡಮೆ ವೇಳೆಯಲ್ಲಿ ಮುಗಿಯಬಹುದಾದುದು ಸಣ್ಣಕತೆ ಇಷ್ಟೆ. ಅಂತಹ ಎಲ್ಲ ಕತೆಗಳ ಗುರಿ ನೀತಿತತ್ತ್ವಬೋಧನೆ ಇಲ್ಲವೆ ಕೇವಲ ಮನೋರಂಜನೆ ಆಗಿರುತ್ತಿದ್ದಿತು. ಸ್ವಾಭಾವಿಕವಿರಲಿ, ಅಸ್ವಾಭಾವಿಕವಿರಲಿ, ವಿಸ್ಮಯಕಾರಕವಾದ ಚಮತ್ಕೃತಿಯಿಂದ ಕೂಡಿದ ಘಟನೆಯನ್ನೋ, ಘಟನಾವಳಿಯನ್ನೋ ಕಥಿಸುತ್ತಿದ್ದರಾಯಿತು; ಅದೊಂದು ಕಥೆಯೆಂದು ನಮ್ಮವರ ತಿಳಿವಳಿಕೆ. ಅಂತಹ ಕತೆಗಳನ್ನೂ ಪ್ರೀತಿಯಿಂದ ಕೇಳುವವರು ಅಂದಿನ ಕಾಲದಲ್ಲಿ ಸಾಕಷ್ಟು ಜನರು ಇದ್ದರು. ಯಾವ ವಿಶಿಷ್ಟ ಲಕ್ಷಣಗಳ ಒರೆಗಲ್ಲಿಗೂ ಅಂದಿನ ಕತೆಗಳನ್ನು ತಿಕ್ಕಿ

ನೋಡುವ ಕಾರಣವಿರಲಿಲ್ಲ. ಜನರಲ್ಲಿ ಹಾಗೆ ಒರೆಗೆ ಹಚ್ಚಿ ನೋಡಬೇಕೆಂಬ ಅರಿವೂ ಇರಲಿಲ್ಲ. ಬರೆಹದಲ್ಲಿ ಮೂಡಿನಿಂತಿರುವ ನಮ್ಮ ಹಿಂದಿನ ಕತೆಗಳೆಲ್ಲ ಮಾನವನೀತಿಯ ಪ್ರಚಾರಕ್ಕಾಗಿಯೋ ಮತಧರ್ಮದ ಪ್ರಸಾರಕ್ಕಾಗಿಯೋ ನಿರ್ಮಿತವಾದುವು. ಅವುಗಳ ಓಟ ಗುರಿಯ ಕಡೆಗೇ ಇದ್ದುದರಿಂದ, ಜನ-ಜೀವನದ ಸ್ವಾಭಾವಿಕತೆ, ಅಸ್ವಾಭಾವಿಕತೆಗಳ ಕಡೆಗೆ ಅಷ್ಟೊಂದು ಲಕ್ಷ್ಯವನ್ನು ಹರಿಸಿದಂತೆ ಕಾಣುವುದಿಲ್ಲ. ಇನ್ನೊಂದು ವಿಶೇಷವೆಂದರೆ : ನಮ್ಮ ಹಿಂದಿನ ಸಾಹಿತ್ಯದಲ್ಲಿ ಕಥೆಗೆ ಸ್ಥಾನದೊರೆತಿವೆಯಾದರೂ, ಲಕ್ಷಣಶಾಸ್ತ್ರದ ಗ್ರಂಥಗಳಲ್ಲಿ ಅದರ ಸ್ವರೂಪ–ಗುಣವಿಶೇಷಗಳನ್ನು ವಿವರಿಸಿ ಹೇಳುವಂತಹ ಮಾತುಗಳಾವುವೂ ಕಾಣಿಸುವುದಿಲ್ಲ. ನಮ್ಮ ಸಾಹಿತ್ಯಲಕ್ಷಣ ಗ್ರಂಥಗಳಲ್ಲಿ ಮಹಾಕಾವ್ಯ–ಖಂಡಕಾವ್ಯಗಳ ಸ್ವರೂಪಪರಿಚಯದ ವಿವರಣೆ ದೊರೆಯುತ್ತದೆ. ಕೀರ್ತನ–ಪ್ರಬಂಧಗಳ ಲಕ್ಷಣವಿಚಾರ ದೊರೆಯುತ್ತದೆ. ರೂಪಕವಿಭಾಗಗಳ ಅಂಗಾಂಗದ ಸೂಕ್ಷ್ಮಪರಿಚಯ ದೊರೆಯುತ್ತದೆ; ಆದರೆ ಕಥೆ–ಸಣ್ಣಕಥೆಗಳ ಸ್ವರೂಪದ ಲಕ್ಷಣವೇನೆಂಬುದನ್ನು ಹೇಳಿದ ಮಾತುಗಳು ಎಲ್ಲಿಯೂ ಸಿಕ್ಕುವುದಿಲ್ಲ. ಇದಕ್ಕೆ ಕಾರಣವಿಲ್ಲದೆ ಇಲ್ಲ. ಕಥೆಯೆಂಬುದು ಹೇಳುವುದಕ್ಕಲ್ಲದೆ ಬರೆದಿರಿಸುವ ಪ್ರೌಢ-ಸಾಹಿತ್ಯಜಾತಿಯಲ್ಲವೆಂದು ಲಕ್ಷಣಕಾರರ ಭಾವನೆಯಿದ್ದಿತು. ಕಥೆ ಕ್ಷುದ್ರ-ಸಾಹಿತ್ಯ. ಕೇವಲ ಜಾನಪದರ ಬಳಕೆಯಲ್ಲಿರುವ ಬಾಯಬುರುಡೆ. ಹೇಳುವ ವ್ಯಕ್ತಿಯ ಯೋಗ್ಯತೆಯಂತೆ ಅವನು ಹೇಳಬೇಕು; ಕಿವಿಗಳಿದ್ದವರೆಲ್ಲ ಕೇಳಬೇಕು—ಎಂಬ ಉಪೇಕ್ಷಾಭಾವನೆ. ಕೆಲವೊಂದು ಸಾಹಿತ್ಯಿಕರು, ಈ ಕಥೆಗಳ ಕಥನದ ಪ್ರಭಾವವನ್ನರಿತು, ಸಾಹಿತ್ಯದಲ್ಲಿ ತಂದರಾದರೂ, ಲಾಕ್ಷಣಿಕರು ಅವುಗಳ ಕಡೆಗೆ ಉಪೇಕ್ಷೆಯನ್ನೇ ತೋರಿಸಿದರು :

ಪಂಡಿತರುಂ ವಿವಿಧಕಲಾ-
ಮಂಡಿತರುಂ ಕೇಳೆ ತಕ್ಕ ಕೃತಿಯಂ ಧರೆಯೊಳ್
ಕಂಡರ್ ಕೇಳ್ವೊಡೆ ಗೊರವರ
ಡುಂಡುಚಿಯೇ ಬೀದಿವರಿಯ ಬೀರನ ಕತೆಯೆ?॥

ಎಂದು ನುಡಿದ ಮಧುರಕವಿಯ ಮಾತುಗಳನ್ನು ನೋಡಿದರೆ, ಅಂದಿನ ಸಾಂಪ್ರದಾಯಿಕ ಮನೋಭಾವದ ಸಾಹಿತ್ಯಿಕರು ಜಾನಪದ ಸಾಹಿತ್ಯಪರಂ-ಪರೆಯದಾದ ಕಥಾಕಥನವನ್ನು ಯಾವ ದೃಷ್ಟಿಯಿಂದ ನೋಡುತ್ತಿದ್ದರೆಂಬುದು

ಸ್ಪಷ್ಟವಾಗಿ ಗೊತ್ತಾಗುವಂತಿದೆ. 'ಕತೆಗೆ ಕಾಲಿಲ್ಲ, ಮನುಷ್ಯನಿಗೆ ಬಾಲಿಲ್ಲ' ಎಂಬ ನಾಡನುಡಿಯೂ ಸಾಂಪ್ರದಾಯಿಕ ಭಾವನೆಯುವರ ಉಪೇಕ್ಷೆಯ ಉಸಿರಿನಿಂದಲೇ ಹೊರಬಂದದ್ದಾಗಿದೆ.

ನಮ್ಮ ಜಾನಪದ ಪರಂಪರೆಯಲ್ಲಿ ಕಥೆಯ ಸಾಹಿತ್ಯ ರಾಶಿರಾಶಿಯಾಗಿ ಸಿಕ್ಕುವುದು. ಅಜ್ಜಿ ಹೇಳುವ ಮಕ್ಕಳ ಕತೆಗಳನ್ನು ಮೊದಲುಮಾಡಿ, ವೇದಾಂತತತ್ತ್ವವನ್ನು ಬೋಧಿಸುವ ಪೌರಾಣಿಕ ಕಥೆಗಳವರೆಗೆ—ಕಥಾಜಾತಿಯ ವಿವಿಧ ಸ್ವರೂಪಗಳು—ಅದರಲ್ಲಿ ನೋಡಲು ದೊರೆಯುವುವು. ವ್ಯಕ್ತಿ-ವ್ಯಕ್ತಿಗಳ ಸ್ವಭಾವಗಳನ್ನೂ ಸಾಮಾನ್ಯ ಸಮಾಜಜೀವನವನ್ನೂ ಅಣಕಿಸಿ ತೋರಿಸುವ ಚುಟುಕುಕತೆಗಳಿರುವುವು. ತ್ಯಾಗವೀರರನ್ನೂ, ಧರ್ಮವೀರರನ್ನೂ, ಯುದ್ಧವೀರರನ್ನೂ ಬಣ್ಣಿಸಿದ ಪವಾಡದ ಕತೆಗಳಿರುವುವು. ಶೃಂಗಾರ-ಸರಸಿಗಳಾದ ರಾಜ ರಾಣಿಯರ ಸರಸ—ರಂಜಕ ಕತೆಗಳೂ ಇರುವುವು. ಕೋಟೆ-ಕೊತ್ತಳ, ಗುಡಿ-ಗೋಪುರ, ಕೆರೆ-ಕೊಳಗಳಿಗೆ ಸಂಬಂಧಿಸಿದ ಕತೆಗಳೂ ಇರುವುವು. ವೀರಗಲ್ಲು—ಮಾಸ್ತಿಕಲ್ಲುಗಳನ್ನು ಕುರಿತ ಕತೆಗಳೂ ಇರುವುವು. ಇವುಗಳಲ್ಲಿಯ ಹಲವು ಕತೆಗಳು, ಅರಳಿಕೆಯಲ್ಲಿ ಅಲ್ಲದೆ ಹೋದರೂ, ಮೂಲಸ್ವರೂಪದಲ್ಲಿ ಆಧುನಿಕ ಸಣ್ಣಕತೆಗಳ ತಂತ್ರಕ್ಕೆ ಹೊಂದುವಂತಹವೇ ಇರುತ್ತವೆ. ಆದರೆ ಈ ಕತೆಗಳನ್ನು ನಿರ್ಮಿಸಿದ ಅಜ್ಞಾತವ್ಯಕ್ತಿಗಳಿಗೆ ಇಲ್ಲವೆ ಪರಿಸ್ಥಿತಿಗೆ ಸಣ್ಣಕತೆಯ ಸಾಹಿತ್ಯತಂತ್ರದ ಪ್ರಜ್ಞೆಯೇನೋ ಇರಲಿಲ್ಲ. ಇಂದಿನವರು, ಆ ಕಥಾವಸ್ತುಗಳನ್ನು ತೆಗೆದುಕೊಂಡು, ಸುಲಭವಾಗಿ ಸುಂದರವಾದ ಸಣ್ಣಕತೆಗಳನ್ನು ಅರಳಿಸಿ ತೋರಿಸಬಹುದು.

ಆಧುನಿಕ ಕನ್ನಡಸಾಹಿತ್ಯದ ಆರಂಭಕಾಲದಲ್ಲಿ, ಸಣ್ಣಕತೆಯ ಸಾಹಿತ್ಯ-ತಂತ್ರದ ತಿಳಿವಳಿಕೆಯಿರದೆ ಹೋದರೂ, ಅಲ್ಲಲ್ಲಿ ಕೆಲವು ಸಣ್ಣಕತೆಗಳು ಮುಖ ತೋರಿಸಿದುದುಂಟು. ಉಡುಪಿಯಲ್ಲಿ ಹಿಂದೆ ಪ್ರಕಟವಾಗುತ್ತಲಿದ್ದ 'ಶ್ರೀಕೃಷ್ಣಸೂಕ್ತಿ', ಮಂಗಳೂರಲ್ಲಿ ಹೊರಡುತ್ತಲಿದ್ದ 'ಸುವಾಸಿನಿ", ಧಾರವಾಡದ ವಿದ್ಯಾ-ವರ್ಧಕ ಸಂಘದ 'ವಾಗ್ಭೂಷಣ', ಹುಬ್ಬಳ್ಳಿಯಲ್ಲಿ ಪ್ರಕಟವಾಗುತ್ತಲಿದ್ದ 'ಸಚಿತ್ರ ಭಾರತ' ಮೊದಲಾದ ಮಾಸಪತ್ರಿಕೆಗಳಲ್ಲಿ ಕೆಲವೊಂದು ಸಣ್ಣಕತೆಗಳು ಅಚ್ಚಾದುದುಂಟು. ಅಂದಿನ ಕಥಾಲೇಖಕರಲ್ಲಿ ಹೆಚ್ಚುಸಂಖ್ಯೆಯಲ್ಲಿ ಕತೆಯನ್ನು ಬರೆದವರೆಂದರೆ ದಿವಂಗತ ಎಂ. ಎನ್. ಕಾಮತರು; ದಿವಂಗತ

ಪಂಜೇ ಮಂಗೇಶರಾಯರು; ದಿವಂಗತ ಕೆರೂರ ವಾಸುದೇವಾಚಾರ್ಯರು. ದಿವಂಗತ ಎಂ. ಎನ್ ಕಾಮತರಿಗೆ ಕಥಾಲೇಖನಕ್ಕೆ ಸ್ಫೂರ್ತಿಯನ್ನು ಕೊಟ್ಟುದು ಅಂದಿನ ಬಂಗಾಲಿ ಕಥಾಸಾಹಿತ್ಯ; ಎಂತಲೆ ದಿವಂಗತ ಕಾಮತರ ಕತೆಗಳು ಹೆಚ್ಚಾಗಿ ಬಂಗಾಲಿ ಕತೆಗಳ ಭಾಷಾಂತರಗಳಾಗಿರುವುವು. ಅವರು ಸ್ವತಂತ್ರವಾಗಿ ಬರೆದ ಕತೆಗಳೇ ಕಡಮೆ; ಬರೆದಿದ್ದರೆ ಆವು ಕೂಡ ಬಂಗಾಲಿ ಕತೆಗಳ ರೀತಿಯ ಅನುಕರಣೆಗಳಾಗಿರುವುವು. ದಿವಂಗತ ಪಂಜೇ ಮಂಗೇಶ ರಾಯರು ಬರೆದ ಕತೆಗಳ ಸಂಖ್ಯೆಯೂ ಕಡಮೆ. ಅವರ ಸಾಹಿತ್ಯನಿರ್ಮಿತಿಗೆ ಅವರ ಇಂಗ್ಲಿಷ್ ಸಾಹಿತ್ಯದ ಅಭ್ಯಾಸವೇ ಪ್ರಚೋದಕವಾಗಿದೆ. ಅವರು ರಚಿಸಿದ ಕವಿತೆಗಳೂ ಕತೆಗಳೂ—ಕೋಟಿ ಚೆನ್ನಯ್ಯ, ಒಂದನ್ನುಳಿದು—ಇಂಗ್ಲಿಷ್ ಸಾಹಿತ್ಯದ ಪ್ರಭಾವದಿಂದಲೆ ಹೊರಟುವುಗಳಾಗಿವೆ. ಹುಬ್ಬಳ್ಳಿಯ 'ಸಚಿತ್ರ ಭಾರತ' ಪತ್ರಿಕೆಯಲ್ಲಿ ಹಲವಾರು ಕತೆಗಳನ್ನು ಪ್ರಕಟಿಸಿದ ದಿವಂಗತ ವಾಸು-ದೇವಾಚಾರ್ಯ ಕೆರೂರ ಅವರೂ ಒಳ್ಳೆಯ ಕತೆಗಳನ್ನು ಬರೆದಿದ್ದಾರೇನೋ ಸರಿಯೆ ! ಆದರೆ ಅವರು ಮಾದರಿಯನ್ನಾಗಿಟ್ಟುಕೊಂಡುದು, ಅಂದಿನ ಮಹಾ-ರಾಷ್ಟ್ರದ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಲಿದ್ದ 'ಸಂಪೂರ್ಣಗೋಷ್ಟ' ಎಂದರೆ ಸಂಪೂರ್ಣಕತೆಗಳನ್ನು. 'ಸಚಿತ್ರ ಭಾರತ' ಪತ್ರಿಕೆ ಹೊರಟದ್ದೇ ಮಹಾ-ರಾಷ್ಟ್ರದಲ್ಲಿ ಪ್ರಕಟವಾಗುತ್ತಲಿದ್ದ 'ಚಿತ್ರಮಯ ಜಗತ್' ಎಂಬ ಮಾಸ-ಪತ್ರಿಕೆಯ ಮಾದರಿಯನ್ನು ಇಟ್ಟುಕೊಂಡು. ಮೊದಲಿನ ಒಂದೆರಡು ವರ್ಷ ಆದು ಅಂತರಂಗದಲ್ಲಿಯೂ ಬಹಿರಂಗದಲ್ಲಿಯೂ 'ಚಿತ್ರಮಯ ಜಗತ್' ಮಾಸಪತ್ರಿಕೆಯ ಪ್ರತಿರೂಪವಾಗಿಯೆ ಹೊರಡುತ್ತಲಿತ್ತು. ಎಂತಲೇ ಅದರಲ್ಲಿ ಪ್ರಕಟವಾಗುತ್ತಿದ್ದಂತಹ 'ಸಂಪೂರ್ಣಕತೆ"ಗಳನ್ನು—ಸಣ್ಣಕತೆಗಳನ್ನಲ್ಲ—ದಿವಂಗತ ವಾಸುದೇವಾಚಾರ್ಯರು ಬರೆಯಲು ತೊಡಗಿದರು. ಆದರೆ ಸ್ವತಂತ್ರ ಪ್ರತಿಭೆಯ ಸತ್ತ್ವವಿದ್ದ ಅವರು, ಮಹಾರಾಷ್ಟ್ರದ ಕತೆಗಳ ಅನುಕರಣವೆನಿಸದಂತಹ ಹಲವು ಬೇರೆ ಕತೆಗಳನ್ನೂ ಬರೆದು ಪ್ರಕಟಿಸಿದರು. ಈ ಮೂವರು ಹಿರಿಯ ಕತೆಗಾರರಲ್ಲಿ ಯಾರೂ, ಆಧುನಿಕ ಸಣ್ಣಕತೆಯ ಸಾಹಿತ್ಯತಂತ್ರದ ಪ್ರಜ್ಞೆಯನ್ನು ಹುಟ್ಟಿಸಲಿಲ್ಲ; ಆಧುನಿಕ ಸಾಹಿತ್ಯದಲ್ಲಿ ಸಣ್ಣಕತೆಯು ಸಾಹಿತ್ಯವೊಂದು ವಿಶೇಷಸ್ಥಾನವನ್ನು ಹಿಡಿದು ನಿಲ್ಲುವಂತಹದೆಂಬ ಅರಿವನ್ನು ಹುಟ್ಟಿಸುವ ಕಾರ್ಯವನ್ನೂ ಮಾಡಿದಂತಿಲ್ಲ.

ಸಣ್ಣಕತೆಗಳ ಲಕ್ಷಣವೈಶಿಷ್ಟ್ಯವನ್ನು ಸೂಕ್ಷ್ಮವಾಗಿ ಅರಿತುಕೊಂಡು, ಆಧುನಿಕ ಕನ್ನಡದ ಸಾಹಿತ್ಯನಿರ್ಮಿತಿಯಲ್ಲಿ ಆ ಸಾಹಿತ್ಯಜಾತಿಗೂ ಒಂದು ಮಹತ್ತ್ವದ ಸ್ಥಾನವನ್ನು ಕಲ್ಪಿಸಿಕೊಡಬೇಕೆಂಬ ಪ್ರಜ್ಞೆಯಿಂದಲೇ ಕನ್ನಡ ದಲ್ಲಿ 'ಸಣ್ಣಕತೆ'ಗಳನ್ನು ಬರೆಯಲು ಪ್ರಾರಂಭಿಸಿದವರು, ಹಿರಿಯರಾದ ಶ್ರೀಮಾನ್ ಮಾಸ್ತೀ ವೆಂಕಟೇಶ ಅಯ್ಯಂಗಾರ್ಯರು. ಎಂತಲೆ ಇವರನ್ನು 'ಸಣ್ಣಕತೆಯ ಜನಕರು" ಎಂದು ನಾಡಿಗರು ಹೇಳುತ್ತಿರುವುದು. ಚಾರಿತ್ರ್ಯಕ ನಿಷ್ಪಕ್ಷಪಾತ ಬುದ್ಧಿಗೆ 'ಶ್ರೀ. ಮಾಸ್ತಿಯವರು ಸಣ್ಣಕತೆಯ ಜನಕರು' ಎಂದು ಹೇಳುವ ಮಾತು, ಅಸತ್ಯವಾಗಿ ತೋರುವ ಕಾರಣವೇನೂ ಇಲ್ಲ.

ಇದೆಲ್ಲ ಚರಿತ್ರದ ವಿಷಯವೇನ್' ಇರಲಿ; ಇಂದು 'ಸಣ್ಣಕತೆ' ಎಲ್ಲರ ಮನಸ್ಸಿನಲ್ಲಿಯೂ ನೆಲೆಯೂರಿ ನಿಂತುದು ಕರತಲಾಮಲಕದಂತೆ ಸ್ಪಷ್ಟವಾಗಿ ಕಾಣುವ ಸಂಗತಿ. ಹಿಂದಿನ ಕಾಲದಲ್ಲಿ ಸಾಹಿತ್ಯಿಕರಾಗಬೇಕೆನ್ನುವ ಪ್ರಾರಂಭ-ಲೇಖಕರು, ತಮ್ಮ ನಿರ್ಮಿತಿಯನ್ನು ಪದ್ಯರಚನೆಯಿಂದ ಮೊದಲುಮಾಡುತ್ತಿದ್ದರು; ಕಂದಪದ್ಯ—ಅಕ್ಷರವೃತ್ತಗಳನ್ನೊ, ಭಾಮಿನಿ-ವಾರ್ಧಕ ಷಟ್ಪದಿಗಳನ್ನೊ, ದ್ವಿಪದಿ-ಚೌಪದಿಗಳನ್ನೊ ಬರೆದು ಬೆಳಕಿಗೆ ತರಲು ಹಾರಯಿಸುತ್ತಲಿದ್ದರು; ಈಗ ಅದು ಹೋಗಿ, ಇಂದಿನ ತರುಣಲೇಖಕರು ನಿರ್ಮಿತಿಯ ಕಾರ್ಯವನ್ನು ಪ್ರಾರಂಭಿಸುವುದೆಂದರೆ ಸಣ್ಣಕತೆಗಳ ಬರೆಹದಿಂದ. ಎಂತಲೇ ನಾಡಿನ ಮೂಲೆ-ಮೂಲೆಗಳಲ್ಲಿಯೂ ಇಂದು ಹೊಸ ಹೊಸ ಸಣ್ಣಕತೆಗಾರರು ಮುಂದೆಬರಲು ತೊಡಗಿದುದು ಸಂತೋಷದ ಸಂಗತಿಯಾಗಿದೆ.

ಸಣ್ಣಕತೆ ಹೆಸರಿಗೆ 'ಸಣ್ಣಕತೆ' ಎನಿಸಿಕೊಂಡರೂ ಇದೊಂದು ದೊಡ್ಡ ಕಲಾವಿಲಾಸವಾಗಿದೆ. ಈ ಕಲೆಯ ಸಿದ್ಧಿಗಾಗಿ ಕತೆಗಾರ ತುಂಬ ಸಾಧನೆ ಮಾಡಬೇಕಾಗುವುದು. ಮೊದಲನೆಯದಾಗಿ ಕತೆಗಾರನಿಗೆ ಲೋಕ. ವನ್ನು ನೋಡುವ ಹದವಾದ ದೃಷ್ಟಿಬೇಕು. ವ್ಯಕ್ತಿಯ ಮತ್ತು ಸಮಾಜಜೀವನ ದಲ್ಲಿ ಸಂಭವಿಸುವ ಘಟನಾವಿಶೇಷಗಳನ್ನು ವಿಶ್ಲೇಷಣಮಾಡಿ ನೋಡುವ ಹದ ನಾದ ಬುದ್ಧಿಯ ವೈಭವಬೇಕು. ಘಟನೆಗಳಿಗೆ ಸಂಬಂಧಿಸಿದ ವ್ಯಕ್ತಿಗಳ ಸ್ವಭಾವಗಳನ್ನು ಕೂಲಂಕಷವಾಗಿ ತಿಳಿದುಕೊಳ್ಳುವ ಪರೇಂಗಿತಜ್ಞತೆಯ ಪ್ರಾವೀಣ್ಯ ಸಂಪಾದಿಸಬೇಕು. ಇತಿಹಾಸ-ಮನಶ್ಶಾಸ್ತ್ರ-ಸಮಾಜಶಾಸ್ತ್ರಗಳನ್ನು ಚೆನ್ನಾಗಿ ಪರಿಚಯಮಾಡಿಕೊಳ್ಳಬೇಕು. ನಿಸರ್ಗಶಕ್ತಿಯ ಆಗು-ಹೋಗು-

ಗಳನ್ನು ಕಣ್ಣಿಟ್ಟು ಕಂಡವರಾಗಬೇಕು. ಕತೆಗಾಗಿ ಆಯ್ದುಕೊಂಡ ಘಟನೆಯಲ್ಲಿಯ ಸತ್ಯ-ಸೌಂದರ್ಯಗಳನ್ನು ಆವಿಷ್ಕರಿಸಿ ತೋರಿಸುವಂತಹ, ಅವುಗಳಲ್ಲಿ ರಸ-ಭಾವಗಳನ್ನು ತುಂಬಿ ಕಲಾಸ್ವರೂಪವನ್ನಾಗಿ ಸಿದ್ಧಗೊಳಿಸುವ ಹೃದಯದ ಪರಿಪಕ್ವತೆಯನ್ನು ಪಡೆದವರಾಗಬೇಕು. ವೈಯಕ್ತಿಕ ಜೀವನದ ಅರಳಿಕೆಯೂ ಸಮಾಜದ ಪ್ರಗತಿ-ಪ್ರಕರ್ಷಗಳೂ ಹೇಗೆ ಆಗುವುವೆಂಬುದರ ಕಡೆಗೆ ದೃಷ್ಟಿಯಿರಿಸಿ, ಜೀವನದ ಗುರಿಯಾವುದೆಂಬುದನ್ನು ನಿರ್ಧರಿಸಿ ಹೇಳಬಲ್ಲಂತಹ ಆಧ್ಯಾತ್ಮಿಕವ್ಯಕ್ತಿತ್ವವನ್ನು ಸಾಧಿಸಿದವರಾಗಬೇಕು. ಒಳಗೆ ಕಂಡ ದರ್ಶನವನ್ನು ಹೊರಹೊಮ್ಮಿಸಿ ತೋರಿಸುವಂತಹ ಪ್ರತಿಭಾಶಕ್ತಿಯನ್ನೂ ಮಾತಿನಲ್ಲಿ ಮೂಡಿಸಿ ತೋರಿಸುವಂತಹ ಭಾಷಾಪ್ರಭುತ್ವವನ್ನೂ ಕುರಿತು ಅನುಷ್ಠಾನ ಮಾಡಿದವರಾಗಿರಬೇಕು. ನಾಡ ಜನತೆಯ ಸಂಸ್ಕೃತಿ-ಸ್ವಭಾವಗಳಲ್ಲಿ ನಿಷ್ಣಾತರಿರಬೇಕು. ಕತೆಗಾರ ಇವೆಲ್ಲ ಸಾಧನೆಗಳನ್ನು ಸಾಧಿಸದೆ ಹೋದರೆ, ಅವನಿಂದ ಒಳ್ಳೆಯ ಕತೆಯ ನಿರ್ಮಿತಿಯಾಗುವುದು ಸಾಧ್ಯವೇ ಇಲ್ಲವೆಂದು, ಇಂದು ಗಟ್ಟಿಮುಟ್ಟಾಗಿ ಹೇಳುವ ಸಂದರ್ಭ ಬಂದಿದೆ.

ಏಕೆಂದರೆ: ಇಂದು ಬರೆಯಬೇಕೆಂದು ಹಾರಯಿಸುವ ಹೊಸಬರೆಲ್ಲ ಸಣ್ಣಕತೆಯ ಲೇಖನಕ್ಕೆ ಕೈಹಾಕುತ್ತಿದ್ದುದರಿಂದ, ಒಳ್ಳೆಯ ಸಣ್ಣಕತೆಗಳ ಸಂಖ್ಯೆ ಕಡಮೆಯಾಗುತ್ತ ಹೊರಟಿದೆ. ಅವುಗಳನ್ನು ಬೆಳಕಿಗೆ ತರುವುದರಲ್ಲಿಯೂ ಒಂದು ವಿವೇಚನೆ ಕಾಣುತ್ತಿಲ್ಲ. ಎಂತೆಂತಹ ಕತೆಗಳೂ ಅಚ್ಚಾಗಿ ಇಂದು ಕನ್ನಡ ಓದುಗರ ಕೈಯಲ್ಲಿ ಬಂದುಬೀಳುತ್ತಲಿವೆ. ಇದಕ್ಕೆ ಕಾರಣವೆಂದರೆ, ಹೊಸ ಲೇಖಕರಲ್ಲಿರುವ ಪ್ರಕಾಶನಾತುರ; ವ್ಯಾಪಾರೀದೃಷ್ಟಿಯ ಪ್ರಕಾಶಕರ ವಿವೇಚನಾರಹಿತ ವ್ಯವಹಾರ. ತಮ್ಮ ಕೃತಿಗಳು ಬೇಗನೆ ಬೆಳಕಿಗೆ ಬರಬೇಕೆಂಬ ಆತುರ ಹೊಸ ಲೇಖಕರಲ್ಲಿ ಇರುವುದೇನೋ ಸಹಜವೆ; ಆದರೆ ಅವರು ಸಿಕ್ಕ ಕೃತಿಗಳನ್ನೆಲ್ಲ ಹೊರಕ್ಕೆ ಹಾಕಿ ಹೆಸರನ್ನು ಕೆಡಿಸಿಕೊಳ್ಳುವುದಕ್ಕಿಂತ, ಒಳ್ಳೆಯ ಕೃತಿಗಳನ್ನೆ ಹೊರಕ್ಕೆ ಹಾಕಬೇಕೆಂಬ ಹಟದಿಂದ, ತಮ್ಮ ಅಭ್ಯಾಸ, ಅನುಭವ, ಬಹುಶ್ರುತತೆ ವಿಮರ್ಶಕದೃಷ್ಟಿಗಳನ್ನು ಬೆಳೆಯಿಸಿಕೊಳ್ಳುವುದಕ್ಕೆ ದುಡಿಯಬೇಕಾದ ಅಗತ್ಯವಿದೆ. ಅದುವರೆಗೆ ಅವರು ಬರೆಯುವ ವ್ಯವಸಾಯ ಮಾಡಬಾರದೆಂದಲ್ಲ; ಬರೆದುದನ್ನೆಲ್ಲ ಕೂಡಲೆ ಪ್ರಕಟಿಸಬೇಕೆಂಬ ಆತುರಕ್ಕೆ ಮಾತ್ರ ಬಲಿಬೀಳಬಾರದು. ಪ್ರಾರಂಭದ ಕಥಾಲೇಖಕರು ಕಥೆಗಳನ್ನು ಬರೆದು ಬರೆದು, ಮತ್ತೆ

ಮತ್ತೆ ತಮ್ಮ ಕತೆಯನ್ನು ತಾವೇ ಓದಿಕೊಳ್ಳುತ್ತಿರಬೇಕು. ಕಾಲಾವಧಿ ಬಿಟ್ಟು ಬಿಟ್ಟು ಓದಲು ತೊಡಗಿದಂತೆ, ತಮ್ಮ ಕೃತಿಗಳಲ್ಲಿಯ ಕೊರತೆಗಳೆಷ್ಟೋ ತಮಗೇ ತಿಳಿಯುತ್ತ ಹೋಗುವುವು. ಅಲ್ಲದೆ ವಿಮರ್ಶಕಶಕ್ತಿಯಿರುವ ಗೆಳೆಯರ ಎದುರೂ ಹಿರಿಯರ ಎದುರೂ ತಮ್ಮ ಕೃತಿಗಳನ್ನು ಓದಿತೋರಿಸಿ, ಅವರಿಂದ ನಿರ್ದಾಕ್ಷಿಣ್ಯವಾದ ಅಭಿಪ್ರಾಯಗಳನ್ನು ಪಡೆದು, ಕೊರತೆಯನ್ನು ತೋರಿಸಿದರೆ ನೊಂದುಕೊಳ್ಳದೆ, ಕೃತಿಯನ್ನು ನಿರ್ದೋಷಗೊಳಿಸಲು ಪ್ರಯತ್ನಿಸಬೇಕು. ಪ್ರಾರಂಭದ ಬಹುಜನ ಲೇಖಕರನ್ನು ಭಾವನೆಯ ಆವೇಶವೊಂದೇ ಮುಂದೆ ನೂಕುತ್ತಿರುವುದು ಹೊರತು, ಅವರಲ್ಲಿ ತಾರ್ಕಿಕ ಬುದ್ಧಿಯೂ ವಿಮರ್ಶೆಯ ಸುತ್ತುನೋಟವೂ ಇನ್ನೂ ಸುಪ್ತಾವಸ್ಥೆಯಲ್ಲಿರುವುವು. ಅವುಗಳನ್ನು ಬಡಿದು ಎಬ್ಬಿಸದ ಕತೆಗಾರನ ಕಲಾಕೃತಿಯು ಸೌಂದರ್ಯಸಂಪೂರ್ತಿಯನ್ನು ಹೊಂದುವುದು ಅಶಕ್ಯವಾದ ಮಾತಾಗಿದೆ. ನಮ್ಮ ತರುಣಕತೆಗಾರರು ತಮ್ಮ ಕೃತಿಗಳ ಪ್ರಕಾಶನಕ್ಕೆ ಆತುರಪಡದೆ ಇದ್ದರೆ, ಅವರ ಕಲೆಯ ಪ್ರಗತಿಗೂ ಒಳ್ಳೆಯದು; ಕನ್ನಡ ಸಾಹಿತ್ಯಕ್ಕೂ ಒಳ್ಳೆಯದು. ಎಲ್ಲರಂತೆ ತಾನೂ ಬೇಸಾಯ ಮಾಡಬೇಕೆಂಬ ಆಶೆಯನ್ನಿಟ್ಟುಕೊಂಡ ಅವಸರದ ಒಕ್ಕಲಿಗ, ಭೂಮಿಯನ್ನು ಕೃಷಿಮಾಡದೆ, ಕೈಗೆ ದೊರೆತ ಕಾಡುಹುಲ್ಲುಗಳ ಬೀಜವನ್ನೇ ಬಿತ್ತಿಬಿಟ್ಟರೆ, ಬೆಳೆಯೇನೋ ಬಂದೀತು; ಆದರೆ ಸತ್ತ್ವಯುಕ್ತವಾದ ಸವಿಯಾದ ಆಹಾರಧಾನ್ಯ ಹೇಗೆ ಸಿಕ್ಕಬೇಕು ?

ಇನ್ನು ಪ್ರಕಾಶಕರ ವಿಚಾರ: ಬರು-ಬರುತ್ತ ನಮ್ಮ ನಾಡಿನಲ್ಲಿ ಸಾಹಿತ್ಯ-ಪ್ರಕಾಶನ ಕಾರ್ಯವೂ ಒಂದು ಧನಾರ್ಜನೆಯ ವ್ಯವಹಾರವಾಗಿ ರೂಪುಗೊಳ್ಳುತ್ತ ಹೊರಟಿದೆ. ಇದು ನಮಗೆ ಅನಿಷ್ಟವಾದ ಸಂಗತಿಯೇನೂ ಅಲ್ಲ. ಬೇಕಾದ ಮಾತೇ ಆಗಿದೆ. ನಮ್ಮಲ್ಲಿ ಈಗ ಅರ್ಥಾರ್ಜನೆಯ ಉದ್ದೇಶದಿಂದ ಹೊರಟ ಅನೇಕ ಪ್ರಕಾಶನಾಲಯಗಳೂ ಪತ್ರಿಕಾಪ್ರಕಟನಾಲಯಗಳೂ ಕೆಲಸ ಮಾಡುತ್ತಲಿವೆ. ಸಾಕ್ಷರಿಗಳ ಸಂಖ್ಯೆ ಇನ್ನೂ ಸಾಕಷ್ಟು ಬೆಳೆಯದುದರಿಂದಲೂ ಒಡೆದು ಹೋಗಿರುವ ಕನ್ನಡನಾಡಿನ ವಿಶಿಷ್ಟಪರಿಸ್ಥಿತಿಯ ಕಾರಣವಾಗಿಯೂ ಈ ಮೊದಲು ಹೇಳಿದ ಗ್ರಂಥಪ್ರಕಾಶನಾಲಯ, ಪತ್ರಿಕಾಪ್ರಕಟನಾಲಯಗಳ ವ್ಯವಹಾರ ಅಷ್ಟೊಂದು ಲಾಭಕರವಾಗಿ ನಡೆದಿಲ್ಲವೆಂಬುದು ಸತ್ಯಸಂಗತಿ. ಆದುದರಿಂದ ಹೆಚ್ಚು ಪ್ರತಿಫಲವನ್ನು ಕೊಟ್ಟು ಒಳ್ಳೆಯ ಜನರಿಂದ ಒಳ್ಳೆಯ

ಕೃತಿಗಳನ್ನು ಬರೆಯಿಸಿ ಪ್ರಕಟಿಸುವ ಕೆಲಸವನ್ನವರು ಮಾಡುತ್ತಿಲ್ಲ. ಆದರೆ ಕೈಕೊಂಡ ವ್ಯವಹಾರವನ್ನು ನಿಲ್ಲಿಸಿಬಿಡುವುದಕ್ಕೆ ಸಾಧ್ಯವಿರುವುದಿಲ್ಲ. ಆದುದರಿಂದ ಈ ಪ್ರಕಾಶನಾಲಯ-ಪ್ರಕಟನಾಲಯಗಳನ್ನು ಇರಿಸಿಕೊಂಡ ವ್ಯಾಪಾರಿಗಳು, ಅಗ್ಗವಾಗಿಯೊ ಪುಕ್ಕಟೆಯಾಗಿಯೊ ತಮ್ಮ ಕೃತಿಗಳನ್ನು ಕೊಡುವ ಲೇಖಕರನ್ನು ಹಿಡಿಯುವರು. ಬೇಗನೆ ತಮ್ಮ ಕೃತಿಗಳನ್ನು ಬೆಳಕಿಗೆ ಹಾಕಬೇಕೆಂಬ ಆತುರದ ಹೊಸ ಲೇಖಕರೇ ಅವರಿಗೆ ಸಿಕ್ಕಬೇಕಲ್ಲದೆ ಇನ್ನಾರು ಸಿಕ್ಕುವರು ? ಇದರಿಂದ ನಮ್ಮ ಪೇಟೆಯಲ್ಲಿ ಪುಸ್ತಕಗಳ ಸಂಖ್ಯೆಯೇನೋ ದಿನ-ದಿನಕ್ಕೆ ಹೆಚ್ಚಾಗುವುದು ಕಾಣುತ್ತಲಿದೆ. ಆದರೆ ವಿಮರ್ಶೆಯ ಒರೆಗೆ ಹತ್ತಿ ನಿಲ್ಲುವ ಕತೆಯಾಗಲಿ, ಕತೆಗಳ ಸಂಕಲನವಾಗಲಿ ಸಿಕ್ಕುವುದು ಅಪೂರ್ವ. ಇಂದು ಪತ್ರಿಕೆಯ ಅಂಕಣಗಳಲ್ಲಿ ತುಂಬಿಬರುತ್ತಿರುವ ಕತೆಗಳನ್ನು ನೋಡೋಣ. ಅವುಗಳಲ್ಲಿ ಕಲೆಯ ಸೌಂದರ್ಯದಿಂದಲೂ ಅನುಭವದ ಸತ್ತ್ವದಿಂದಲೂ ತುಂಬಿದ ಕತೆಗಳು ಎಷ್ಟು ದೊರೆಯುವುವು ? ಪತ್ರಿಕಾಕರ್ತರಿಗೆ ಅಂಕಣದ ಅವಕಾಶ ತುಂಬಲು 'ಸಣ್ಣಕತೆ' ಎಂಬ ಹೆಸರಿನ ವಿಷಯಬೇಕು; ಹೊಸ ಲೇಖಕರಿಗೆ ತಮ್ಮ ಕತೆ ಪ್ರಕಟವಾಗಲು ಎಡೆಬೇಕು. ಇಂತಹ ರೀತಿಯನ್ನು ಅಣಕಿಸಲು ನಮ್ಮ ಜಾನಪದ ಗಾದೆಯ ವೇದವೊಂದು ರೂಢಿಯಲ್ಲಿದೆ : 'ನಾಯಿ ಹಸಿದಿತ್ತು; ಅನ್ನ ಹಳಸಿತ್ತು' ಎಂದು. ಈ ಮಾತು ನಿಷ್ಠುರವಾಗಿ ಕಂಡು, ಅನೇಕರ ಮನಸ್ಸು ಕೆರಳಬಹುದು; ಆದರೆ ಈ ವಾಸ್ತವಸಂಗತಿಯನ್ನು ಎತ್ತಿಹೇಳಬೇಕಾದುದು ಅನಿವಾರ್ಯವಾಗಿದೆ. ಕೆರಳಿದವರು ದಯೆಯಿಟ್ಟು ನನ್ನನ್ನು ಕ್ಷಮಿಸಿ, ವಿಚಾರಮಾಡಿ ನೋಡಬೇಕು.

ನಮ್ಮ ಪ್ರಕಾಶನಾಲಯ-ಪ್ರಕಟನಾಲಯಗಳು ಈ ವಿಷಯವನ್ನು ಸಾಕಷ್ಟು ವಿವೇಕಬುದ್ಧಿಯಿಂದ ನೋಡಬೇಕೆಂದು ನನ್ನ ಹಾರಯಿಕೆ. ಅವರು ಒಳ್ಳೆಯ ಕಾಗದಕ್ಕಾಗಿ ಹಣ ಸುರಿಯುವರು; ಮುದ್ರಣಕಾರ್ಯಕ್ಕೆ ಹಣ ವೆಚ್ಚ ಮಾಡುವರು; ಅದರಂತೇ ಒಳ್ಳೆಯ ಕೃತಿಗಳಿಗಾಗಿಯೂ ಅವರು ವೆಚ್ಚಮಾಡಲು ಸಿದ್ಧರಾದರೆ, ವ್ಯವಹಾರದೊಂದಿಗೆ ದೇಶದ ಒಂದು ಮಹತ್ತ್ವದ ಸತ್ಕಾರ್ಯವನ್ನೂ ಮಾಡಿದ ಶ್ರೇಯಸ್ಸು ಸಿಕ್ಕುವುದು. ಒಳ್ಳೆಯ ಲೇಖಕರನ್ನು ಅವರು ತಮ್ಮ ವ್ಯವಹಾರಕ್ಕಾಗಿ ಸ್ವಾಗತಿಸಬೇಕಲ್ಲದೆ, ಹೊಸ ಲೇಖಕರ ಲೇಖನಕೃತಿಗಳನ್ನು ಪರೀಕ್ಷಿಸಲು ಸಮರ್ಥವಾದ ವಿಮರ್ಶಕಮಂಡಲಿಯನ್ನು ನಿಯಮಿಸಿ-

ಕೊಳ್ಳಬೇಕು. ಕಥಾಸಾಹಿತ್ಯಕ್ಕೂ ಎಡೆಕೊಡಬೇಕೆನ್ನುವ ಪತ್ರಿಕಾಸಂಪಾದಕರೂ ಆ ವಿಭಾಗಕ್ಕಾಗಿ ತಜ್ಞವಿಮರ್ಶಕರ ಸಲಹೆಯನ್ನು ಪಡೆದುಕೊಳ್ಳಬೇಕು. ಹೀಗೆ ಮಾಡದೆ ಹೋದರೆ, ಸಣ್ಣಕತೆಗಳ ಜೊಳ್ಳುತನದ ವಿಷಯವಾಗಿ ವಾಚಕರಲ್ಲಿ ಹುಟ್ಟಿಕೊಂಡಿರುವ ಅತೃಪ್ತಿ-ಅಸಮಾಧಾನಗಳು ಇನ್ನೂ ಹೆಚ್ಚುತ್ತಹೋಗಿ, ಒಳ್ಳೆಯ ಸಣ್ಣಕತೆಗಾರರ ಕೃತಿಗಳೂ ಜನರ ಉಪೇಕ್ಷೆ-ಔದಾಸೀನ್ಯಗಳಿಗೆ ಪಾತ್ರವಾಗುವ ಸಂಭವವುಂಟು.

ಇನ್ನೊಂದು ಮುಖ್ಯ ವಿಚಾರವೆಂದರೆ, ಲಲಿತಸಾಹಿತ್ಯದ ಮಿಕ್ಕವಿಭಾಗಗಳಲ್ಲಿ ಎದ್ದಿರುವಂತೆ, ಸಣ್ಣಕತೆಯ ವಿಭಾಗದಲ್ಲಿಯೂ ಆದರ್ಶ-ವಾಸ್ತವಗಳ ವಾದವು ಎದ್ದು, ವಾತಾವರಣವನ್ನು ಆಗಾಗ ಕಲಕುಮಾಡುತ್ತಲಿರುವುದು. ಇದೇ ವಾದವೇ ಸೌಂದರ್ಯ ಮತ್ತು ಜೀವನ ಎಂಬ ದ್ವಂದ್ವದ ಹೆಸರಿನಿಂದಲೂ ನಡೆಯುತ್ತಲಿದೆ. ಇತ್ತೀಚೆಗೆ ಇದೇ ಜಗಳ ಸಂಪ್ರದಾಯ, ಪ್ರಗತಿಶೀಲತೆ—ಎಂಬ ದ್ವಂದ್ವವನ್ನು ನಿರ್ಮಿಸಿ, ಬೇರೆ ಬೇರೆ ಜನರ ಮನಸ್ಸಿನಲ್ಲಿ ಗೊಂದಲವನ್ನು ಎಬ್ಬಿಸಿಬಿಟ್ಟಿದೆ. ಆದರೆ ಅಧ್ಯಾತ್ಮ-ಅಧಿಭೂತಗಳ ಸಮನ್ವಯದಲ್ಲಿಯೆ ಸುಖಜೀವನವಿದೆಯೆಂದು ನಮ್ಮ ಅನುಭಾವಿಗಳು ಹೇಳಿರುವಂತೆ, ಆದರ್ಶ-ವಾಸ್ತವ, ಸೌಂದರ್ಯ-ಜೀವನ, ಸಂಪ್ರದಾಯ-ಪ್ರಗತಿಶೀಲತೆ ಈ ದ್ವಂದ್ವಗಳ ಸಮನ್ವಯದಿಂದಲೇ ಒಳ್ಳೆಯ ಕೃತಿಯ ನಿರ್ಮಿತಿಯಾಗುವುದೆಂಬುದನ್ನು ನಾವೆಲ್ಲ ಮನವರಿಕೆ ಮಾಡಿಕೊಂಡು ಬದುಕಬೇಕಾಗಿದೆ. ಲೋಕದಲ್ಲಿ ಹುಟ್ಟಿಬಂದ ಪ್ರತಿಯೊಂದು ಅಪೂರ್ಣಜೀವಿಗೂ ಸ್ವಂತದ ವಿಕಾಸ, ಆನಂದದ ಪರಾಕಾಷ್ಠತೆಗಳ ಆದರ್ಶ ಇದ್ದೇ ಇರುವುದು. ಆ ದೂರದ ಆದರ್ಶವನ್ನು ಸಾಧಿಸಲು ವಾಸ್ತವದ ದಾರಿಯಲ್ಲಿಯೇ ನಡೆಯಬೇಕಾಗುವುದು. ವಾಸ್ತವದಲ್ಲಿ ಮಾರ್ಗಕ್ರಮಿಸದೆ ಹೋದರೆ ನಮಗೆ ಆದರ್ಶದ ದರ್ಶನವಾಗುವುದಿಲ್ಲ. ಆದರ್ಶದ ಸಿದ್ಧಿಯಿಲ್ಲದೆ ನಮ್ಮ ವಾಸ್ತವಜೀವನಕ್ಕೆ ಪರಿಪೂರ್ಣತೆಯಿಲ್ಲ. ಆದರ್ಶವೆಂಬುದು ಅವಾಸ್ತವವಲ್ಲ; 'ನಿಂತನೆಲೆಯಿಂದ ದೂರದಲ್ಲಿರುವ ವಾಸ್ತವ' ಎಂದಿಷ್ಟೇ ಅದರ ಅರ್ಥ. ಅವಾಸ್ತವವಾದ ಆದರ್ಶ, ಜೀವನವನ್ನು ಅಭಾಸಗೊಳಿಸದೆ ಬಿಡದು. ಆದುದರಿಂದಲೇ ವಾಸ್ತವ ಮತ್ತು ಆದರ್ಶಗಳನ್ನು ಸಮನ್ವಯಗೊಳಿಸುವ ಜೀವನಾನುಭವವೇ ಒಳ್ಳೆಯ ಸಾಹಿತ್ಯದ ನಿರ್ಮಿತಿಗೆ ಕಾರಣವಾಗುವುದೆಂಬುದನ್ನು ನಾವು ಚೆನ್ನಾಗಿ ಅರಿತುಕೊಳ್ಳಬೇಕು. ಹಿಗೆಯೇ

ಸೌಂದರ್ಯ-ಜೀವನಗಳ ದ್ವಂದ್ವವನ್ನೂ ಕುರಿತು ವಿವೇಚಿಸಿ ನೋಡಬಹುದು: ಸೌಂದರ್ಯವೆಂಬುದು ಸಮಯೋಗ; ಜೀವನದ ಒಂದು ರಸಾವಸ್ಥೆ. ಜೀವನವೆಂಬುದು ಆ ರಸಾವಸ್ಥೆಯನ್ನು ಹುಡುಕುತ್ತಲಿರುವ ವಿಕ್ಷೇಪಭಾವದ ಅವಸ್ಥೆ. ವೈದ್ಯ ರಸೌಷಧಿಯನ್ನು ಸಿದ್ಧಗೊಳಿಸಲು ಹವಣಿಸಿ, ಬೇರೆ ಬೇರೆ ವನಸ್ಪತಿಗಳನ್ನೂ ರಸಪದಾರ್ಥಗಳನ್ನೂ ಶೇಖರಿಸುತ್ತಾನೆ. ಅವುಗಳನ್ನು ಖಲನೆಯಿಂದಲೂ ಉಷ್ಣತೆಯಿಂಡಲೂ ಸಂಯೋಗಗೊಳಿಸಿ, ರಸಯೋಗವನ್ನು ಪಾಕಕ್ಕೆ ಇಳಿಸುತ್ತಾನೆ. ಈ ಯೋಗದ ಸಲಕರಣೆಗಳನ್ನು ಕೂಡಿಸುವ ಕಾರ್ಯವೂ ಖಲನ-ಜ್ವಲನ ಕಾರ್ಯಗಳೂ ಜೀವನವೆನಿಸುವುವು. ಪಾಕದಿಂದಾದ ರಸಸಿದ್ಧಿ ಸೌಂದರ್ಯವೆನಿಸುವುದು. ನಾವು ಜೀವನಸಾಧನೆಯಿಂದ ಸೌಂದರ್ಯವನ್ನು ಸಿದ್ಧಿಸಿಕೊಳ್ಳಬೇಕಾಗುವುದು. ಸೌಂದರ್ಯಸಿದ್ಧಿಯಿಂದ ಜೀವನದ ಅಪಕ್ವತೆಯನ್ನು ಪರಿಪಕ್ವಗೊಳಿಸಿಕೊಳ್ಳಬಹುದು. ಇವು ಒಂದಕ್ಕೊಂದು ಸಾಧಕವಾಗಿವೆ ಹೊರತು ಬಾಧಕವಾಗಿಲ್ಲವೆಂಬ ಅನುಭವಸತ್ಯವನ್ನು ನಮ್ಮ ಜನ ಮನಗಾಣಿಸಿಕೊಳ್ಳಬೇಕು.

ಸಂಪ್ರದಾಯ- ಪ್ರಗತಿಶೀಲತೆಗಳ ವಾದವೂ ಹುರುಳಿಲ್ಲದುದೆಂಬ ಅರಿವು ನಮ್ಮಲ್ಲಿ ಮೂಡಬೇಕಾದುದರ ಅಗತ್ಯ ತುಂಬ ಇದೆ. ಪೂರ್ವಜರ ಪ್ರಗತಿಯು ಸಾಧನೆಯ ಮಾರ್ಗಕ್ರಮಣಪದ್ಧತಿಯು ಇಂದಿನವರಿಗೆ ಸಂಪ್ರದಾಯವಾಗಿ ತೋರುವುದು ಇಷ್ಟೇ. ಇಂದಿನವರ ಪ್ರಗತಿಶೀಲತೆಯ ರೀತಿ-ನೀತಿಗಳು ಮುಂದಿನವರಿಗೆ ಸಂಪ್ರದಾಯವಾಗಿ ತೋರಿದರೆ ಅದರಲ್ಲಿ ಆಶ್ಚರ್ಯಪಡಬೇಕಾದುದೇನೂ ಇಲ್ಲ. ಸಂಪ್ರದಾಯವೆಂದರೆ ತಂತಮ್ಮ ಜೀವನದಲ್ಲಿ ಕಂಡುಬಂದ ಅನುಭವ-ಜ್ಞಾನವನ್ನು, ಪರಂಪರೆಯಿಂದ ಮುಂದಿನವರಿಗೆ ಕೊಡುತ್ತಾ ಹೋಗುವುದು. ಸೋಮಲದ ವಿಷಪರಿಣಾಮವನ್ನು ಅನುಭವಿಸಿದ ಹಿರಿಯನೊಬ್ಬ 'ಸೋಮಲವನ್ನು ತಿನ್ನಬೇಡಿರಿ; ಅದರಿಂದ ಮರಣಸಂಭವಿಸುವುದು !' ಎಂದು ತನ್ನ ಮಕ್ಕಳು-ಮೊಮ್ಮಕ್ಕಳಿಗೆ ಹೇಳಿದರೆ, ಅದನ್ನವರು ಕೇಳಿ ಅವನ ಮಾತಿನಂತೆ ನಡೆಯಬಾರದೆ ? ಹಾಗೆ ನಡೆದುಕೊಳ್ಳದೆ, ಹಿರಿಯನ ಮಾತನ್ನು ಸಂಪ್ರದಾಯವೆಂದು ವಿರೋಧಿಸಿ, ಸೋಮಲವನ್ನು ತಿಂದೇ ನೋಡುವೆನೆಂಬ ದುಡುಕನ್ನು ಆ ಮಕ್ಕಳು-ಮೊಮ್ಮಕ್ಕಳು ಮಾಡಲು ಸಿದ್ಧರಾದರೆ, ಅದರಿಂದ ಅವರ ದಾರಿ ಸುಗಮವೆನಿಸೀತೆ ? ಸಾಹಿತ್ಯ ಎಂಬುದು ಯಾವಾಗಲೂ ಒಂದಿಲ್ಲೊಂದು

ಬಗೆಯ ಆದರ್ಶಸಿದ್ಧಿಯನ್ನು ಬೋಧಿಸುವುದೆಂದ ಮೇಲೆ, ಅದು ವ್ಯಕ್ತಿಯ ನ್ನಾಗಲಿ, ಸಮಾಜವನ್ನಾಗಲಿ, ಆದರ್ಶದತ್ತ ಕ್ರಮಿಸಲು ಹಚ್ಚುವುದು ಸತ್ಯ ವಾದ ಸಿದ್ಧಾಂತವಷ್ಟೆ ? ಪ್ರಗತಿಯೆಂದರೆ ಮಾರ್ಗಕ್ರಮಣವೇ ಅಲ್ಲವೆ ? ದೇಶ, ಕಾಲ, ಪರಿಸ್ಥಿತಿಗಳಿಗನುಸಾರವಾಗಿ ಮಾನವನ ಆದರ್ಶಗಳು ಬೇರೆ ಬೇರೆ ಯಾಗುವುದೇನೋ ನಿಜವಾದ ಮಾತು. ಭಾರತವು ಬ್ರಿಟಿಷರ ಆಧೀನದಲ್ಲಿರು ವಾಗ ರಾಜಕೀಯ ಸ್ವಾತಂತ್ರ್ಯ ನಮ್ಮೆಲ್ಲರ ಆದರ್ಶವಾಗಿದ್ದಿತು; ಈಗ ನಮಗೆ ಸ್ವಾತಂತ್ರ್ಯದೊರೆತು ರಾಷ್ಟ್ರದಲ್ಲಿ ಪ್ರಜಾಪ್ರಭುತ್ವವನ್ನು ಪ್ರಸ್ಥಾಪಿಸಿಕೊಂಡಿದ್ದೇವೆ. ಇಂದು ನಮಗೆ ಹಿಂದಿನ ಆದರ್ಶ ಉಳಿಯಲಿಲ್ಲ. ಇಂದಿನ ನಮ್ಮ ಆದರ್ಶ, ರಾಷ್ಟ್ರದ ಸಮೃದ್ಧ ಜೀವನವಾಗಿದೆ. ಅದಕ್ಕಾಗಿ ನಾವೀಗ ಹೆಣಗುತ್ತಲಿದ್ದೇವೆ. ಆದನ್ನು ಸಾಧಿಸಿದ ಮೇಲೆ ನಮ್ಮ ಆದರ್ಶ ಇನ್ನಾವುದೋ ಆಗುತ್ತದೆ; ಅದನ್ನು ಸಾಧಿಸಲು ಮತ್ತೆ ಪ್ರಗತಿಯದಾರಿಯಲ್ಲಿ ನಡೆಯಬೇಕಾಗು-ವುದು. ಹೀಗಿರುವಾಗ ಹಿಂದಿನವರ ಆದರ್ಶಸಾಧನೆಯ ಮಾರ್ಗಕ್ರಮಣದ ರೀತಿ-ನೀತಿಗಳನ್ನು ಇಂದಿನವರಾದ ನಾವು ಸಂಪ್ರದಾಯಗಳೆಂದು ಬೀಳುಗಳೆಯುವುದು ಸರಿಯೆನ್ನಿಸದು. ಒಂದು ತಲೆಮಾರಿನವರ ಆದರ್ಶಸಾಧನೆ ಮುಂದಿನವರಿಗೆ ಸಂಪ್ರದಾಯವೆನಿಸಬಹುದೇನೋ ನಿಜ; ಈ ಸಂಪ್ರದಾಯದ ತಳಹದಿಯ ಮೇಲಿಂದಲೇ ಮುಂದಿನ ಆದರ್ಶದ ಕಡೆಗೆ ಅಡಿಯಿಟ್ಟು ನಡೆಯಬೇಕಾಗುವು ದೆಂಬುದು ಅಷ್ಟೇ ನಿಜ. ಬೇರೆಬೇರೆ ಕಾಲದ ಸಾಹಿತ್ಯಕೃತಿಗಳು ಬೇರೆಬೇರೆ ಕಾಲದ ಆದರ್ಶಗಳತ್ತ ಸಾಗಲು ಪ್ರಚೋದಿಸುತ್ತಿರುವುವು. ಎಂದಮೇಲೆ ಸಾಹಿತ್ಯವು ಯಾವಾಗಲೂ ಎಲ್ಲಿಯೂ ಪ್ರಗತಿಶೀಲವಾಗಿರುವುದೆಂಬುದನ್ನು ನಾವೆಲ್ಲ ಅರಿತು-ಕೊಂಡು ನಡೆಯಬೇಕಾಗಿಲ್ಲವೆ ?

ನಮ್ಮ ಹಿಂದಿನವರು ಸ್ವತಂತ್ರರಾಗಿದ್ದುಕೊಂಡು, ಸಮೃದ್ಧ ಜೀವನವನ್ನು ನಡೆಯಿಸುತ್ತಿದ್ದಾಗ, ಮನಃಶಾಂತಿಯ—ಶಾಶ್ವತಸೌಖ್ಯದ—ಆದರ್ಶವನ್ನು ಇರಿಸಿಕೊಂಡಿದ್ದರು. ಈ ಶಾಶ್ವತಸೌಖ್ಯದ ಅವಸ್ಥೆಯನ್ನೇ ಮುಕ್ತಿ, ನಿರ್ವಾಣ, ಲಿಂಗಾಂಗಸಾಮರಸ್ಯ ಎಂದು ಕರೆದಿರುವರು. ಆ ಆದರ್ಶದತ್ತ ನಡೆಯುವಾಗ ಭಕ್ತಿ, ಜ್ಞಾನ, ವೈರಾಗ್ಯ, ತಪಸ್ಸು, ಯಜ್ಞ ಎಂದು ಕೆಲವೊಂದು ಜೀವನ-ಸಾಧನಗಳನ್ನು ಬಳಸಿಕೊಂಡರು. ಎಂತಲೇ ನಮ್ಮ ಪೂರ್ವದ ಸಾಹಿತ್ಯ, ಆದರ್ಶಮಾರ್ಗದ ಜೀವನಸಾಧನಗಳನ್ನು ಪುರಸ್ಕರಿಸಿ, ಅದರ ಮುಖಾಂತರ

ಅವರನ್ನು ಪ್ರಗತಿಯ ಮಾರ್ಗದಲ್ಲಿ ನಡೆಯಿಸಿತು. ಆದರೆ ಬೇರೆ ಬೇರೆ ಉತ್ಸರ್ಗ ಗಳ ಮೂಲಕವಾಗಿ ಉಂಟಾದ ನಮ್ಮ ಸಾಮಾಜಿಕ ಸತ್ತ್ವದ ಪತನದಿಂದ ತಲೆ-ದೋರಿದ ಅಜ್ಞಾನ, ದಾರಿದ್ರ್ಯ, ಜಡತೆಗಳನ್ನು ಹೊಡೆದೋಡಿಸಬೇಕಾಗಿರುವುದ ರಿಂದ, ಕಾಲಾನುಸಾರವಾಗಿ ಇಂದಿನ ಆದರ್ಶ ಬೇರೆಯಾಗಿದೆ. ಈ ಬೇರೆ ಆದರ್ಶದ ಸಾಧನೆಯಲ್ಲಿ ನಾವು ಪ್ರಗತಿಪಥದಲ್ಲಿ ಮುಂದುವರಿಯಬೇಕಾದರೆ, ಹಿಂದಿನವ-ರನ್ನು ನಿಂದಿಸಿ ಬೈಯಬೇಕಾಗಿಲ್ಲ; ಇಷ್ಟೇ ಅಲ್ಲ, ಅವರು ಕಂಡುಹಿಡಿದ ನಿತ್ಯ-ಸತ್ಯದ ಸಿದ್ಧಾಂತಗಳನ್ನು ಪುರಸ್ಕರಿಸಿ, ಅವರ ಉಪಕಾರವನ್ನು ನೆನೆಯುತ್ತ ನಡೆಯ ಬೇಕಾಗುತ್ತದೆ. ಸಂಪ್ರದಾಯ-ಪ್ರಗತಿಶೀಲತೆಗಳ ಸಮನ್ವಯರಹಸ್ಯವನ್ನು ನಾವು ಮನವರಿಕೆಮಾಡಿಕೊಂಡು ಮುಂದುವರಿದರೆ, ಜಗಳ-ವಾದಗಳಲ್ಲಿ ನಿಂತು ವೇಳೆ ಕಳೆಯುವುದನ್ನು ಬಿಟ್ಟು, ನಿಜವಾದ ಪ್ರಗತಿಯ ದಾರಿಯಲ್ಲಿ ನಡೆಯಲಿಕ್ಕೆ ಆದೀತು.

ಸಾಹಿತ್ಯಿಕನಿಗೆ ವಿಚಾರಸ್ವಾತಂತ್ರ್ಯಬೇಕೆಂಬುದನ್ನು ಯಾರೂ ಅಲ್ಲ-ಗಳೆಯಲಾರರು. ಆದರೆ ಅಂತಹ ಸ್ವಾತಂತ್ರ್ಯವನ್ನು ಒಂದು ಸೀಮೆಯವರೆಗೆ-ಮಾತ್ರ ಒಪ್ಪಿಕೊಳ್ಳಬೇಕಾಗುವುದು. ಸಾಹಿತ್ಯಿಕನ ವಿಚಾರಸ್ವಾತಂತ್ರ್ಯ ಕೇವಲ ವೈಯಕ್ತಿಕ ದೃಷ್ಟಿಯದೇ ಆದರೆ, ಅದು ಸಮಾಜಜೀವನದಲ್ಲಿ ಅನವಸ್ಥೆ ಯನ್ನು ಉಂಟುಮಾಡುವುದಿಷ್ಟೇ ಅಲ್ಲ; ವ್ಯಕ್ತಿ-ವ್ಯಕ್ತಿಗಳ ಜೀವನದ ಅಶಾಂತಿಗೂ ಕಾರಣವಾಗುವುದು. ನಮ್ಮ ಸಣ್ಣಕತೆಗಾರರು ಇದರ ರಹಸ್ಯವನ್ನು ಅರಿತು-ಕೊಂಡು, ತಮ್ಮ ಸ್ವತಂತ್ರ ವಿಚಾರದ ಕತ್ತಿವರಸೆಯಾಟವನ್ನು ನಡೆಯಿಸಬೇಕು. ತೂಕ ತಪ್ಪಿದ ಕತ್ತಿವರಸೆಯಾಟದಿಂದ ಸಮಾಜದ ಅನೇಕ ಆವಶ್ಯಕ ಶಾಶ್ವತ-ನಿಯಮಗಳಿಗೆ ಏಟು ತಗುಲಿ, ಸಮಾಜದ ನೈತಿಕಬಂಧನವೇ ಸಡಿಲಾಗಿ-ಹೋಗಬಹುದು. ಇಂದು ನಮ್ಮ ಸಮಾಜದಲ್ಲಿ ಕೆಲವೊಂದು ಸಮಸ್ಯೆಗಳು ಎದ್ದಿವೆಯೆನ್ನೋ ಸರಿ ! ಈ ಸಮಸ್ಯೆಗಳನ್ನು ವ್ಯಕ್ತಿ ಮತ್ತು ಸಮಾಜದ ಸುಖ-ಶಾಂತಿಯ ಗುರಿಯನ್ನು ಇರಿಸಿಕೊಂಡು, ಸಂಯಮದಿಂದ ಬಿಡಿಸಬೇಕಾಗವುದು-ವ್ಯಕ್ತಿಯ ಸ್ವಾರ್ಥಹಿತಬುದ್ಧಿಯ ವಿಚಾರ, ಸಮಾಜದ ಪ್ರಗತಿಗೆ ತಡೆಯಾಗ-ಬಾರದು; ಸಮಾಜಶಾಂತಿಗಾಗಿ ಮಾಡುವ ವಿಚಾರ ವ್ಯಕ್ತಿಯ ವಿಕಾಸದ ಮಾರ್ಗದಲ್ಲಿ ತಡೆಯೊಡ್ಡಬಾರದು. ಸಾಹಿತ್ಯಿಕ ಈ ವಿಚಾರದ ತಂತಿಯ ಮೇಲಿನ ಕಸರತ್ತಿನ ಆಟಗಳಲ್ಲಿ ನೈಪುಣ್ಯಪಡೆದವನಾಗಿರಬೇಕು. ಅವನಿಗೆ

ಭೂತ-ಭವಿಷ್ಯಗಳ ಪರಿಜ್ಞಾನವಿರದೆ ಹೋದರೆ, ವರ್ತಮಾನವನ್ನು ಒಳ್ಳೆಯ ರೀತಿಯಿಂದ ರೂಪಿಸಲಿಕ್ಕೆ ಅವನು ಸಮರ್ಥನಾಗಲಾರ.

ಇಂದು ಅರ್ಥದ ವ್ಯವಸ್ಥಿತವಾದ ಹಂಚಿಕೆ, ಹೆಣ್ಣು-ಗಂಡುಗಳಲ್ಲಿಯ ಸಮರಸದ ಹೊಂದಿಕೆ ಇವು ನಮ್ಮ ಸಾಹಿತ್ಯಿಕರೆದುರು ಮಹಾಸಮಸ್ಯೆಯನ್ನು ಎಬ್ಬಿಸಿಬಿಟ್ಟಿವೆ. ಇವೆರಡೂ ಇಂದಿನ ಮಹಾಸಮಸ್ಯೆಗಳೇ ಎಂದೇನೂ ಅಲ್ಲ; ಹಿಂದೆಯೂ ಸಮಸ್ಯೆಯಾಗಿಯೇ ಇದ್ದುವು; ಮುಂದೆ ಕೂಡ ಸಮಸ್ಯೆಗಳನ್ನು ಒಡ್ಡುತ್ತಲೇ ಇರುವಂತಹವು. ಇದನ್ನು ಬುದ್ಧಿಯ ಕಾಯಿದೆ-ಕಾನೂನುಗಳಿಂದ ಎಂದೂ ಬಿಡಿಸಲಿಕ್ಕಾಗದು; ಹೃದಯದ ಪ್ರೇಮಯೋಗದ ಸಾಧನದಿಂದ ಮಾತ್ರ ಇದು ಬಿಡಬಲ್ಲದು. ಭೋಗದ ಸ್ವಾರ್ಥದೃಷ್ಟಿ ಈ ಸಮಸ್ಯೆಯ ಮೂಲವನ್ನು ಕೀಳಲಾರದು; ತ್ಯಾಗದ ನಿಸ್ಪೃಹದೃಷ್ಟಿಯೇ ಕೀಳಲು ಸಮರ್ಥವಾಗಬಲ್ಲದು. ನಮ್ಮ ಹೊಸ ಕತೆಗಾರರು ಇವೆರಡೂ ಸಮಸ್ಯೆಗಳನ್ನೆತ್ತಿ ಬರೆಯುವ ಪ್ರಚಾರಾತ್ಮಕ ಕತೆಗಳ ಸಂಖ್ಯೆ ದಿನದಿನಕ್ಕೆ ಹೆಚ್ಚಾಗಿ ಕಾಣುತ್ತಲಿದೆ. ಇಂತಹ ಕತೆಗಳನ್ನು ಬರೆಯುತ್ತಿರುವವರು, ತಕ್ಕ ಯೋಗ್ಯತೆ—ಎಚ್ಚರಿಕೆ ಇಲ್ಲದವರಾದರೆ, ಅವರ ಸದಪೇಕ್ಷೆಯೆ ನಮ್ಮ ಸಮಾಜವನ್ನು ದುರ್ದೈವವಾಗಿ ಕಾಡೀತು; ಬೇತಾಳವಾಗಿ ಬೆನ್ನುಹತ್ತೀತು.

ಪರಭಾಷೆಯಲ್ಲಿಯ ಕತೆಗಳನ್ನೋದಿ, ಅವುಗಳನ್ನೇ ಅನುಸರಿಸುವುದು ಇತ್ತೀಚೆಗೆ ನಮ್ಮಲ್ಲಿ ಹೆಚ್ಚಾಗಿ ಕಾಣಲುತೊಡಗಿದೆ. ಪರಭಾಷೆಯ ಒಳ್ಳೆಯ ಕತೆಗಳು ಭಾಷಾಂತರಿತವಾಗಿ ಕನ್ನಡಕ್ಕೆ ಬರಲೇಬೇಕು. ಅದನ್ನು ಯಾರೂ ಆಕ್ಷೇಪಿಸಲಾರರು. ಆದರೆ ಆ ಕತೆಗಳನ್ನು ರೂಪಾಂತರಿಸಿ ಕನ್ನಡಿಗರ ಜೀವನಕ್ಕೆ ಅನ್ವಯಿಸಿ ತೋರಿಸಬೇಕೆನ್ನುವವರು ತುಂಬ ಎಚ್ಚರಿಕೆ ವಹಿಸಬೇಕಾಗುತ್ತದೆ. ಏಕೆಂದರೆ, ಪರದೇಶದವರ ಸಾಮಾಜಿಕ ಜೀವನಕ್ಕೂ ಕನ್ನಡಿಗರ ಸಾಮಾಜಿಕ ಜೀವನಕ್ಕೂ ಬಹಳ ಮಾತುಗಳಲ್ಲಿ ಹೊಂದಿಕೆಯಿರುವುದಿಲ್ಲ. ಸಂಪ್ರದಾಯ-ಆಚಾರ-ವಿಚಾರಗಳಲ್ಲಂತೂ ತುಂಬ ಅಂತರವಿರುವುದು. ಇದರ ಔಚಿತ್ಯವನ್ನು ಸಂಪೂರ್ಣವಾಗಿ ಅರಿತುಕೊಳ್ಳದೆ, ಪರಭಾಷೆಯ ಕತೆಗಳನ್ನು ಕನ್ನಡದೇಶ-ವ್ಯಕ್ತಿಗಳಿಗೆ ಸಂಬಂಧಿಸಿ ರೂಪಾಂತರಿಸಿದರೆ, ಅಲ್ಲಿ ಕಲೆಯು ಆಭಾಸವಾಗಿ ತೋರದೆ ಇರದು. ವಾಸ್ತವಸಾಹಿತ್ಯ ಬೇಕೆಂದು ಹೇಳುತ್ತ ಹೊರಟಿರುವ ಅನೇಕರು ಇಂತಹ ಆಭಾಸಾತ್ಮಕ ಕತೆಗಳನ್ನು ಬರೆ-ಬರೆದು ಪ್ರಕಟಿಸಿ, ಅವು ಕನ್ನಡಿಗರ

ವಾಸ್ತವಚಿತ್ರಗಳೆಂದು ಪ್ರಚಾರಮಾಡುತ್ತಿರುವುದು ಆಶ್ಚರ್ಯದ ಸಂಗತಿ-ಯಾಗಿದೆ.

ಕನ್ನಡ ಜನಜೀವನವನ್ನು ವಾಸ್ತವವಾಗಿ ಚಿತ್ರಿಸಬೇಕೆನ್ನುವವರು, ಕನ್ನಡ ಸಮಾಜವನ್ನು ಸೂಕ್ಷ್ಮದೃಷ್ಟಿಯಿಂದ ಅಭ್ಯಾಸಿಸಬೇಕು. ಕನ್ನಡಿಗರ ಮತ-ಧರ್ಮ, ಕುಲಾಚಾರ, ಸಂಪ್ರದಾಯ, ಉದ್ಯಮ–ವ್ಯವಸಾಯಗಳ ಕೂಲಂಕಷ ಪರಿಚಯಮಾಡಿಕೊಳ್ಳಬೇಕು. ಅವರ ಆದರ್ಶ, ಆಶೆ-ಆಕಾಂಕ್ಷೆಗಳೇನೆಂಬುದನ್ನು ಅರಿತುಕೊಳ್ಳಬೇಕು. ಅವರ ಸುಖ–ದುಃಖ, ಕಷ್ಟ–ನಷ್ಟಗಳೇನೆಂಬುದನ್ನು ಅವಗತಮಾಡಿಕೊಳ್ಳಬೇಕು. ರಶಿಯದ ಜನಜೀವನ, ಕನ್ನಡಿಗರ ಜಿನಜೀವನ-ವಾಗಲಾರದು. ಅಮೇರಿಕೆಯವರ ಬೇಕು–ಬೇಡಗಳು, ಕನ್ನಡಿಗರ ಬೇಕು-ಬೇಡಗಳಾಗವು. ಫ್ರಾನ್ಸಿನವರ ಸೌಂದರ್ಯದ ಕಲ್ಪನೆಗಳು, ಕನ್ನಡಿಗರ ಸೌಂದರ್ಯದ ಕಲ್ಪನೆಗಳಾಗಲಾರವು. ಆದುದರಿಂದಲೆ ಇಂದು ಪ್ರಕಟವಾಗುತ್ತ-ಲಿರುವ ಹೆಚ್ಚಿನ ಕತೆಗಳಲ್ಲಿ, ಕನ್ನಡಿಗ ತನ್ನ ಜೀವನಚಿತ್ರವನ್ನೂ ಕಾಣಲಾರ; ಹೃದಯದ ಮಿಡಿತಗಳನ್ನೂ ಕಾಣಲಾರ; ಎಂತಲೆ ಅವುಗಳಲ್ಲಿ ತನ್ನ ಆದರ್ಶದ ದಾರಿಯನ್ನೂ ಗುರುತಿಸಲಾರ.

ಕತೆಯ ಭಾಷೆಯ ವಿಚಾರವನ್ನೂ ನಾವು ದುರ್ಲಕ್ಷ್ಯಿಸುವಂತಿಲ್ಲ. ಸಾಹಿತ್ಯ ವಾಸ್ತವಮಾರ್ಗವನ್ನು ಹಿಡಿಯಬೇಕೆನ್ನುವವರಂತೂ ಇದರ ಕಡೆಗೆ ಹೆಚ್ಚು ಕಣ್ಣಿಟ್ಟು ನಡೆಯಬೇಕಾಗುವುದು. ಎಲ್ಲ ಭಾಷೆಗಳಂತೆ ಕನ್ನಡದಲ್ಲಿಯೂ ವಿವಿಧ ದೇಶಿಗಳಿವೆ. ಕಥೆಯ ಸ್ಥಳ-ಕಾಲ-ಪಾತ್ರಗಳ ಕಲ್ಪನೆಯನ್ನು ಪೂರ್ತಿ-ಯಾಗಿ ಮಾಡಿಕೊಂಡು, ಅವುಗಳಿಗೆ ಅನುಗುಣವಾದ ದೇಶಿಗಳನ್ನು ಬಳಸಿದರೆಯೆ ಕತೆಯು ಹೆಚ್ಚು ವಾಸ್ತವವೆನಿಸುವುದು; ಆ ವಾಸ್ತವತೆಯೇ ನಿಜವಾದ ಸೌಂದರ್ಯಸಿದ್ಧಿಗೆ ಕಾರಣವಾಗುವುದು. ಹಳ್ಳಿಗರ ಬಾಯಿಂದ ನಾಗರಿಕ-ಭಾಷೆಯಲ್ಲಿ ಮಾತನಾಡಿಸಹಚ್ಚುವುದೂ, ಅದರಂತೆಯೆ ಐತಿಹಾಸಿಕಕಥಾವ್ಯಕ್ತಿ-ಗಳ ಬಾಯಲ್ಲಿ ಇಂದಿನ ಕನ್ನಡಭಾಷೆಯನ್ನಾಡಿಸುವುದೂ, ಧಾರವಾಡದವರ ಬಾಯಲ್ಲಿ ಮೈಸೂರುಕನ್ನಡವನ್ನು—ಮೈಸೂರು-ಮಂಗಳೂರಿನವರ ಬಾಯಲ್ಲಿ ಧಾರವಾಡದ ಕನ್ನಡವನ್ನು ಹಾಕುವುದೂ ಕಲೆಯ ಆಭಾಸಕ್ಕೆ ಕಾರಣವಾಗು-ವುದು. ನಮ್ಮ ತರುಣ ಕತೆಗಾರರು ಇವೆಲ್ಲ ಸಂಗತಿಗಳ ಕಡೆಗೆ ಲಕ್ಷ್ಯಕೊಟ್ಟು, ತಮ್ಮ ಕೃತಿಗಳು ಕಲಾಸೌಂದರ್ಯದಿಂದ ತುಂಬಿದುವಾಗುವಂತೆ ಮಾಡಬೇಕು.

ಏನೋ, ಸಂದರ್ಭೋಚಿತವಾಗಿ ಸಣ್ಣಕತೆಗಳ ಸಾಹಿತ್ಯದ ವಿಶೇಷ-ವಿಚಾರಗಳನ್ನು ಇಲ್ಲಿ ವಿವರಿಸಿದ್ದೇನೆ. ಇದೆಲ್ಲವನ್ನು ನಾನು ಉಪದೇಶಕನ ಹೆಮ್ಮೆಯಿಂದ ಹೇಳಿಲ್ಲ; ಪೂವತ್ತು-ಮೂವತ್ತೈದು ವರ್ಷದ ನನ್ನ ಸಾಹಿತ್ಯಿಕ ಜೀವನದಲ್ಲಿ ಕಂಡುಂಡ ಅನುಭವವನ್ನು ನಮ್ಮ ಜನತೆಯೆದುರು ಇರಿಸಲು ಬಯಸಿದ್ದೇನೆ—ಇಷ್ಟೆ.

ಇದರಲ್ಲಿ ಬಂದಿರುವ ಸಣ್ಣಕತೆಗಳು ನನ್ನ ನಾಡಿನ ಜನತೆಯ ಮನಸ್ಸಿಗೆ ಮೆಚ್ಚಿಕೆಯಾದರೆ ಸಾಕು; ನನ್ನ ಅಪೇಕ್ಷೆಯು ನೆರವೇರಿದಂತೆಯೆ. ಸಾಹಿತ್ಯವು ಯಾವಾಗಲೂ ಜೀವನದ ಸೌಂದರ್ಯವನ್ನೇ ಚಿತ್ರಿಸಬೇಕೆಂಬುದು ನನ್ನ ಧಾರಯಿಕೆ. ವಿಕೃತಿಯ ಚಿತ್ರ ಮನುಷ್ಯನ ಮನಸ್ಸನ್ನು ಇನ್ನಿಷ್ಟು ವಿಕೃತ-ಗೊಳಿಸಬಹುದೇ ಹೊರತು, ಸಂಸ್ಕೃತಿಯ ಆನಂದವನ್ನು ಉಂಟುಮಾಡಲಾರದು. ಜೀವನವನ್ನು ತಿದ್ದಿಕೊಳ್ಳಬೇಕಾದವನ ಕಣ್ಣಮುಂದೆ ಆದರ್ಶ-ಸೌಂದರ್ಯದ ಚಿತ್ರಗಳಿರಬೇಕಲ್ಲದೆ ವಾಸ್ತವವಿಕಾರಗಳ ಪ್ರತಿಬಿಂಬಗಳು ಇರಬಾರದು. ಇಲ್ಲಿಯ ಕತೆಗಳನ್ನು ವಾಚಕರು ಆ ದೃಷ್ಟಿಯಿಂದ ನೋಡಬೇಕು.

'ಜಯಂತಿ' ಕಾರ್ಯಾಲಯ
ಧಾರವಾಡ
ತಾ. ೨೮-೧-೧೯೫೫

ಬೆಟಗೇರಿ ಕೃಷ್ಣಶರ್ಮ

# ಅರಳಿದ ಜೀವ



"ಯೋಳ ಚಟಾಕಿನ ವ್ಯಾಲ ಒಂದು ಕಾಳು ಸಹಿತ ಹೆಚ್ಚಿಗೆ ಕೊಡೂದಿಲ್ಲ. ಒಯ್ಯತಿದ್ದರ ಒಯ್ಯಿ; ಬಿಟ್ಟರ ಬಿಡು ! "

"ಯೋಳೂವರೀ ಅರೇ ಮಾಡರೀ ಅಣ್ಣಾವರ! ಬಡವ ನಾನು; ಮನ್ಯಾಗ ನಾವು ಎಂಟು ಮಂದಿ. ಸಣ್ಣ-ಸಣ್ಣೂ ಆರು ಮಕ್ಕಳು ! ನೀವು ಇದ್ದವರಽ ಹೀಂಗ ಮಾಡಿದರ, ನಾವು ಬದುಕೂದು ಹ್ಯಾಂಗ ನೋಡ್ರಿ ! "

"ಹುಂ, ನಿಮ್ಮನ್ನ ಬದಿಕಿಸೂ ಉಪಕಾರಾ ಮಾಡಿ, ನಾವೂ ನಿಮ್ಹಾಂಗಽ ಆಗಬೇಕಂತೀ ಏನು ? ಹೋಗು ಹೋಗು, ನಮ್ಮಲ್ಲಿ ಜೋಳನೇ ಇಲ್ಲ ! "

"ಯಪ್ಪಾ, ಮಕ್ಕಳು ಹಸದು ಬಾಯಿ ಬಾಯಿ ಬಿಡ್ಲಾಕ ಹತ್ತ್ಯಾವರೀ! ರೇಸನ್ನಿನೊಳಗ ಸಿಕ್ಕ ಕಾಳು ನಿನ್ನೆ ಮದ್ಯಾನಕ್ಕಽ ಮುಗದು ಹೋತು. ನಿನ್ನೆ ರಾತ್ರಿ ಯಾರಿಗೂ ಊಟಽ ಇಲ್ಲ ನೋಡ್ರಿ. ಹುಡುಗೋರು ಹಾಂಗಽ ಹಸದು ಚಡಪಡಿಸಲಾಕ ಹತ್ತ್ಯಾವರಿ. ನಿಮ್ಮ ಕಾಲು ಬೀಳತೀನಿ. ಎಡ್ಡು ಹೊತ್ತು ಅಂಬಲೀನಾದರೂ ಕಾಸಿಕೊಂಡು ಕುಡೀತೀವಿ. ಯೋಳೂವರಿ ಚಟಾಕು ಹಿಡಿದು, ಒಂದು ರೂಪಾಯಿ ಜೋಳಾ ಕೊಡ್ರೀಯಪ್ಪಾ ! "

"ಎಷ್ಟು ಬರೆ ಹೇಳಬೇಕು, ಹೆಚ್ಚಿಗೆ ಆಗೂದಿಲ್ಲಂತ ? ಯೋಳ ಚಟಾಕಿನ್ಹಾಂಗ ಆದರ ಒಯ್ಯಿ, ಇಲ್ಲದಿದ್ದರ ಬಿಟ್ಟುಬಿಡು ! "

ಅಲ್ಲಿಯೆ ಕಟ್ಟೆಯ ಮೇಲೆ ಕುಳಿತ ಮೇಲಗಿರಿಸೆಟ್ಟರು ಕನಿಕರದ ಧ್ವನಿಯಲ್ಲಿ ಹೇಳಿದರು : "ಕೊಟ್ಟುಬಿಡೋ ಮಲಕಪ್ಪಾ! ಬಡವ, ಮಕ್ಕಳೊಂದಿಗ! ಅರ್ಧಾ ಚಟಾಕು ಮನ್ಯಾಗ ಹಾಂಗಽ ಬಿದ್ದಾಡಿ ಹೋಗತಿರತಾವು; ಹೋಗಲಿ ಕೊಟ್ಟುಬಿಡು ! "

ಮಲಕಪ್ಪ ಒಮ್ಮೆಲೇ ರೇಗಿದ ಧ್ವನಿಯಲ್ಲಿ ಹೇಳಿದ :

"ನಿನ್ನ ಪೂರ್ತೆ ನೀನು ಸುಮ್ಮನಽ ಕೆಮ್ಮಿಕೋತಽ ಕೂತಿರ ಬಾರದಽ ? ಯಾಕ ಇಲ್ಲದ ಉಸಾಬರಿ ಬೇಕು ? ಹೋಗೋ, ನಮ್ಮಲ್ಲೆ ಜೋಳನಽ ಇಲ್ಲ !"

ಜೋಳವನ್ನು ಬೇಡಲು ಬಂದ ಕೆಂಚಣ್ಣನ ಸೊರಗಿದ ಮುಖವು ಇನ್ನಿಷ್ಟು ಕುಗ್ಗಿಹೋಯಿತು. ಏಳು ಚಟಾಕಿನಂತೆಯೆ ಜೋಳವನ್ನು ಅಳೆಯಿಸಿಕೊಂಡು ಅವನು ಹೊರಟುಹೋದ.

ಮಲಕಪ್ಪ ಜೋಳವನ್ನು ಅಳೆಯುತ್ತಿರುವಾಗ, ಮೇಲಗಿರಿಸೆಟ್ಟರು ನಿರುಪಾಯದ ಕರುಣಾದೃಷ್ಟಿಗಳಿಂದ ನೋಡುತ್ತಿದ್ದರು. ಸರಗು–ಕಸರು ತುಂಬಿದ ಜೋಳ; ಹಸನು ಮಾಡಿದರೆ ಆರುಚಟಾಕಿಗಿಂತಲೂ ಕಡಿಮೆಯಾಗಬಹುದು. ಕೆಂಚಣ್ಣ ಹೊರಟುಹೋದ ಮೇಲೆ, ಮೇಲಗಿರಿಸೆಟ್ಟರು ದೀರ್ಘವಾದ ಉಸಿರೊಂದನ್ನು ಬಿಟ್ಟರು; ಮರುಕದ ಮೆಲುದನಿಯಲ್ಲಿ ನುಡಿದರು : " ಎಂಥೆಂಥಾ ಕೆಟ್ಟ ದಿನಗಳನ್ನ ತೋರಿಸಲಿಕ್ಕೆ ನನ್ನ ಬದಿಕಿಸಿ ಉಳಿಸಿವೆಯಪ್ಪಾ ದೇವರೇ ! "

ಸೆಟ್ಟರು ನಸುವೇಳೆ ಕಣ್ಣುಮುಚ್ಚಿ ಸುಮ್ಮನೆ ಕುಳಿತರು. ಅವರ ಮುಖವನ್ನು ಮಿಳಿ ಮಿಳಿ ನೋಡುತ್ತ ನಾನೂ ಮೌನಿಯಾಗಿ ಕುಳಿತುಬಿಟ್ಟೆ.

ಮೇಲಗಿರಿಸೆಟ್ಟರಿಗೆ ಈಗ ಎಂಬತ್ತು ವರ್ಷದ ವಯಸ್ಸಾಗಿರಬಹುದು. ಅರ್ಧಾಂಗವಾಯುವಿನಿಂದ ಅವರ ಕಾಲುಗಳೆರಡೂ ಕೆಲಸಕ್ಕೆ ಬಾರದಂತಾಗಿವೆ. ಎಡದ ಕೈ ಕೂಡ ಒಣಗಿಹೋದಂತಾಗಿದೆ. ವಯಸ್ಸಿನ ಮೂಲಕ ಕೆಮ್ಮು-ಉಬ್ಬಸಗಳು ಗಂಟುಬಿದ್ದಿವೆ. ಆದರೆ ತುಂಬ ಆಕರ್ಷಕವಾದ ಪ್ರಾಣಿ ಆ ಮುದುಕ. ಜೈಮಿನಿಭಾರತ, ರಾಜಶೇಖರವಿಳಾಸ, ಹರಿಶ್ಚಂದ್ರಕಾವ್ಯ, ಕುಮಾರವ್ಯಾಸನ ಭಾರತ—ಇವೆಲ್ಲವನ್ನೂ ಸೆಟ್ಟರು ಅರೆದುಕೊಂಡು ಕುಡಿದಂತೆ ಮಾಡಿದ್ದಾರೆ. ಸರ್ವಜ್ಞನ ವಚನಗಳಂತೂ ಅವರ ಮೆದುಳಲ್ಲಿ ಎಷ್ಟು ಸಂಗ್ರಹಗೊಂಡಿವೆಯೋ ಏನೋ ! ನನಗೂ ಕಾವ್ಯಗಳನ್ನು ಓದುವ ಆಸಕ್ತಿ ಹೆಚ್ಚು. ನನಗೇನಾದರೂ ಅರ್ಥತಿಳಿಯದೆ ಹೋದಾಗ, ನಾನು ಮೇಲಗಿರಿಸೆಟ್ಟರ ಬಳಿ ಹೋಗಿ ಕುಳಿತುಕೊಳ್ಳುತ್ತಿದ್ದೆ. ಅವರು ಹೇಳುವ ವಿಶದವಾದ ಅರ್ಥ-ವ್ಯಾಖ್ಯಾನಗಳನ್ನು ಕೇಳಿ ಹಿರಿಹಿರಿ ಹಿಗ್ಗುತ್ತಿದ್ದೆ. ಮುಪ್ಪಿನಿಂದ ಮೂಲೆ ಹಿಡಿದು ಕುಳಿತ ಈ ಮುದುಕನನ್ನು ಮಿಕ್ಕವರೆಲ್ಲರೂ ಅಲಕ್ಷ್ಯಭಾವದಿಂದಲೇ ಕಾಣುತ್ತಿದ್ದರು. ಈ ಮುದುಕನ ಶುಶ್ರೂಷೆಯನ್ನು ಎಲ್ಲ ಬಗೆಯಿಂದಲೂ ಮಾಡಬೇಕಾದುದರಿಂದ, ಮಲಕಪ್ಪನ ಮನೆಯವರೆಲ್ಲರೂ ಬೇಸತ್ತು ಹೋಗಿರಬಹುದು. 'ಬೇಗನೆ ಸತ್ತುಹೋಗಬಾರದೇ ಈ ಮುದುಕ !' ಎಂದು ಒಳಗೊಳಗೇ ದೇವರನ್ನು ಬೇಡಿಕೊಳ್ಳುತ್ತಿರಲೂ ಬಹುದು. ಆದರೆ ನಾನು ಮಾತ್ರ 'ಈ ಮುದುಕ ಇದು-

ವರೆಗೆ ಬದುಕಿದುದು ನನ್ನ ಸೌಭಾಗ್ಯ' ಎಂದು ಭಾವಿಸುತ್ತಿದ್ದೆ. ಏಕೆಂದರೆ, ನಮ್ಮೂರಂತಹ ಚಿಕ್ಕಹಳ್ಳಿಯಲ್ಲಿ, ಈಗಿನ ಕಾಲದಲ್ಲಿ, ಮೇಲಗಿರಿಸೆಟ್ಟರಂತಹ ಅನುಭವಿಕ ಜೀವಿಗಳೂ, ಸುಸಂಸ್ಕೃತ ಹೃದಯರೂ, ಕಾವ್ಯಾಭ್ಯಾಸಿಗಳೂ ಬೇರೆ ಯಾರು ದೊರೆಯಬೇಕು? ನಾನು ಆಗಾಗ ಹೋಗಿ ಆ 'ನಿರುಪಯುಕ್ತ' ಮುದುಕನ ಬಳಿ ಕುಳಿತುಕೊಳ್ಳುವುದನ್ನು ಕಂಡು, ಅನೇಕರು ಆಶ್ಚರ್ಯ ಪಡುತ್ತಿದ್ದರು. ಕೆಲವರಂತೂ ಚೇಷ್ಟೆಯ ಮಾತುಗಳನ್ನೇ ಆಡುತ್ತಿದ್ದರು. ಬೆಲೆಯನ್ನರಿಯದವರಿದ್ದಲ್ಲಿ ಚಿನ್ನವೂ ಮಣ್ಣಿಗಿಂತ ಕಾಡೇ ಅಲ್ಲವೆ?

ಮಲಕಪ್ಪ ಮೇಲಗಿರಿಸೆಟ್ಟರ ದೂರದ ದಾಯಾದಿಯ ಮಗ. ಇದ್ದ ಒಬ್ಬ ಅವರ ಹೊಟ್ಟೆಯ ಮಗ ಪ್ಲೇಗುರೋಗದಿಂದ ತೀರಿಹೋದ ಮೇಲೆ, ಸೆಟ್ಟರ ಹೆಂಡತಿಗೆ ಸಂಪೂರ್ಣವಾಗಿ ಒಪ್ಪಿಗೆಯಿರದಿದ್ದರೂ, ನಾಲ್ಕು ವರ್ಷ ವಯಸ್ಸಿನ ಮಲಕಪ್ಪನನ್ನು ತಂದು ಸೆಟ್ಟರು ಮನೆಯಲ್ಲಿ ಇರಿಸಿಕೊಂಡರು. ತೀರ ಬಡತನದ ಮನೆಯಲ್ಲಿ ಬೆಳೆದ ಹುಡುಗ ಮಲಕಪ್ಪ. "ಉಳ್ಳವರ ಮನೆಯನ್ನು ತುಂಬುವುದಕ್ಕಿಂತ ಇಲ್ಲದವರನ್ನು ಉಳ್ಳವರನ್ನಾಗಿ ಮಾಡುವುದೇ ಶಿವನು ಮೆಚ್ಚುವ ಕೆಲಸ" ಎಂದು, ಸೆಟ್ಟರು ತಮ್ಮ ಹೆಂಡತಿಗೆ ಸಮಾಧಾನವನ್ನು ಹೇಳಿದರಂತೆ. ಮಲಕಪ್ಪ ಸೆಟ್ಟರ ಮನೆಯಲ್ಲಿಯೆ ಬೆಳೆದು ದೊಡ್ಡವನಾದ. ಅವನಿಗೆ ಮದುವೆಯಾಯಿತು; ಮಂಗಲವಾಯಿತು; ಐದಾರು ಮಕ್ಕಳ ತಂದೆಯೂ ಆದ. ಈ ಅವಧಿಯಲ್ಲಿಯೆ ಸೆಟ್ಟರ ಹೆಂಡತಿ ಶಿವನ ಪಾದದೆಡೆ ಸೇರಿದಳು. ಆಕೆಯ ಅಗಲಿಕೆಯ ಆಘಾತದಿಂದಲೇ ಸೆಟ್ಟರು, ಅನೇಕ ದಿನ ಜ್ವರಬಂದು ಹಾಸಿಗೆ ಹಿಡಿದರು. ಆಗಲೇ ವಾತವಿಕಾರದಿಂದ ಅವರ ಕಾಲುಗಳು ನಿರ್ಬಲವಾದುವು. ಎಡದ ಕೈ ಒಣಗಿಹೋಯಿತು. ಅಂದಿನಿಂದಲೂ ಮನೆಯ ಮುಂಗಡೆಯ ಕಟ್ಟೆಯೆ ಅವರ ವಾಸಸ್ಥಾನ. ತಾವೇ ಗಳಿಸಿಟ್ಟ ಆಸ್ತಿ ಬೇಕಾದಷ್ಟು ಇದ್ದರೂ, ಸೆಟ್ಟರಿಗೆ ಅದರ ಪ್ರಯೋಜನವು ದೊರೆಯದಂತಾಯಿತು. ಮಲಕಪ್ಪನ ಹಿರಿಯ ಮಗಳು ಗಿರಿಜೆಯ ಮನಸ್ಸೂ ಮಿಕ್ಕವರಂತೆಯೆ ಇದ್ದುಬಿಟ್ಟಿದ್ದರೆ, ಸೆಟ್ಟರ ಗತಿಯು ಏನಾಗುತ್ತಿದ್ದಿತೋ ಏನೋ! ಅವಳೇ ಮುದುಕನ ಎಲ್ಲ ಬಗೆಯ ಸೇವೆ-ಶುಶ್ರೂಷೆಗಳನ್ನು ಮಾಡುತ್ತಿದ್ದಳು. ಎಂತಲೇ ಮೇಲಗಿರಿಸೆಟ್ಟರು ಮೇಲಿಂದ ಮೇಲೆ ಎನ್ನುತ್ತಿದ್ದರು:

"ನಮ್ಮ ಗಿರಿಜಾ ಗಂಡನ ಮನಿಗೆ ಹೋಗೂದರೊಳಗ, ಆ ದೇವರು ನನ್ನ ಕಣ್ಣು ಮುಚ್ಚಬೇಕು!"

ನಾಲ್ವತ್ತು–ಐವತ್ತು ಸಾವಿರದ ಸಂಪತ್ತಿನ ಯಜಮಾನರು; ಮೇಲೆ ಸಂಸ್ಕೃತಿಸಂಪತ್ತು ತುಂಬಿದ ಹೃದಯದವರು; ಆದರೆ ಸೆಟ್ಟರಿಗೆ ಇದಾವುದರ ಪ್ರಯೋಜನವೂ ಇಂದು ಇಲ್ಲದಂತಾಗಿದೆ. ಇಂದವರು ಬಯಸುತ್ತಿರುವುದು ಸುಖದ ಜೀವನವನ್ನಲ್ಲ; ಸಮಾಧಾನದ ಮರಣವನ್ನು ! ಆದರೆ ನಾನು ಮಾತ್ರ 'ಇವರು ಇನ್ನೂ ಬಹುಕಾಲ ಬದುಕಿ ಇರಬೇಕು'—ಎಂದು ಬಯಸುತ್ತಿದ್ದೆ. ಇದೊಂದು ನನ್ನ ಸ್ವಾರ್ಥವೇ ಎನ್ನಬೇಕು. ಸೆಟ್ಟರು ಬೇಗನೆ ಸಾಯುಬೇಕೆಂದು ಮಲಕಪ್ಪನ ಕುಟುಂಬದವರು ಬಯಸುತ್ತಿರುವುದು ಸ್ವಾರ್ಥದ ಒಂದು ಮಾದರಿ; ಅವರು ಬದುಕಿ ಇರಬೇಕೆಂಬ ನನ್ನ ಆಕಾಂಕ್ಷೆ—ಸ್ವಾರ್ಥದ್ದೇ ಇನ್ನೊಂದು ಮಾದರಿ. ಅವರಿಗೆ ಸೆಟ್ಟರ ಸಂಪತ್ತಿ ಬೇಕಾಗಿದೆ; ಸೆಟ್ಟರ ಜೀವಿತದ ಅಗತ್ಯವೇನೂ ಇಲ್ಲ. ನನಗೆ ಸೆಟ್ಟರ ಜೀವನಾನುಭವದ ಬೆಳಕು ಬೇಕಾಗಿದೆ; ಆದುದರಿಂದ ಅವರು ಜೀವಿಸಿರಬೇಕೆಂದು ಎನಿಸುತ್ತದೆ.

ಎರಡು-ಮೂರು ನಿಮಿಷಗಳಾಗುತ್ತಲೇ ಸೆಟ್ಟರು ತಮ್ಮ ಮುದುಗಣ್ಣು-ಗಳನ್ನು ತೆರೆದರು. ನನ್ನ ಕಡೆಗೆ ನೋಡುತ್ತ ಮಾತನಾಡಿದರು :

"ಬರಬರತ್ತ ನಮ್ಮ ಜನಕ್ಕ ಗಳಿಸೂದು ಯಾತಕ್ಕ—ಅಂಬೂದs ತಿಳೀದ್ಹಾಂಗ ಆಗೇದ. ತನ್ನ ಹೊಟ್ಟೆಗಾಗೇ ತಾನು ಗಳಿಸೂದಂದರ, ಪಾಪದ ಮೊಟ್ಟೇ ಗಳಿಸಿದ್ಹಾಂಗs ಕಿಟ್ಟಣ್ಣಾ ! ಇದ್ದಾಗ ದಾನಮಾಡದೇ ಇರುವವ ಹೊಲೆಯ ಇದ್ಹಾಂಗ! ಈ ಲಕ್ಷ್ಮೀದೇವೀದೊಂದು ಮೋಜs ಅದ. ಬ್ಯಾಡಾ ಅಂತ ಮೋರಿಹೊಕ್ಕವರ ಬೆನ್ನುಹತ್ತಿ ಬರತಾಳ; ಬೇಕುs ಅಂತ ಬಯಸಿಗೋತs ಹೋದರ, ಬಾಗಿಲಾ ದಾಟೇ ಹೊರಡತಾಳ. ನಮ್ಮ ಜನ ಈ ತತ್ತ್ವವನ್ನ ಮರೀತsನ ಹೊರಟsದ. ಮುಂದಿನ ದಿನಮಾನ ಎಂಥಾವು ಬರತಾವೋ ಏನೋ !"

ಸೆಟ್ಟರ ಒಂದೊಂದು ಮಾತೂ ನನ್ನ ಮನಸ್ಸನ್ನು ಮುಟ್ಟಿ ಹೃದಯವನ್ನು ಅರಳಿಸುತ್ತಿತ್ತು. 'ತನ್ನ ಹೊಟ್ಟೆಗಾಗೇ ತಾನು ಗಳಿಸೂದಂದರ, ಪಾಪದ ಮೊಟ್ಟೇ ಗಳಿಸಿದ್ಹಾಂಗ' ಎಂಬ ಸೆಟ್ಟರ ಅನುಭವವಾಣಿ, 'ಭುಂಜತೇತೇತ್ವಘಂ ಪಾಪಾ ಯೇ ಪಚಂತ್ಯಾತ್ಮಕಾರಣಾತ್' ಎಂಬ ಭಗವದ್ಗೀತೆಯ ದೇವವಾಣಿ-ಯೊಂದಿಗೆ ತುಲನೆ ಮಾಡಲು ಹೆಚ್ಚಿತು. ಅವರ ಮಾತು ಮುಗಿದೊಡನೆಯೆ ನಾನು ಹೇಳಿದೆ :

" ಇದಕ್ಕಿಂತಾ ಕೆಟ್ಟ ದಿನಮಾನ ಇನ್ನ ಎಂಥಾವು ಬಂದಾವು ಸೆಟ್ಟರ ! ನೋಡಿದಿರೋ ಇಲ್ಲೊ....ದೇಶದಾಗ ಧಾನ್ಯದ ರಾಶಿ ತುಂಬಿದ್ದರೂ ಬಹು-ಜನರಿಗೆ ತುತ್ತು ಕೂಳಿಗೆ ತತ್ವಾರ ಬಂದು ಕೂತsದ. ಅನ್ನವೇ ಹೊಟ್ಟೆತುಂಬ ಸಿಗದೇ ಹೋದ ಮ್ಯಾಲ, ಇನ್ನ ಜನರ ಜೀವನದೊಳಗ ಸ್ವಾರಸ್ಯ ಉಳೀತೇನು?"

ಸೆಟ್ಟರು ಕೆಮ್ಮನ್ನು ತಡೆದುಕೊಳ್ಳುತ್ತಲೇ ಮಾತನಾಡಿದರು :

" ಇಲ್ಲ ಕಿಟ್ಟಣ್ಣಾ, ನಮ್ಮ ದೇಶದೊಳಗ ಬಹುಜನರಿಗೆ ಹಿರಣ್ಯಕಶಿಪೂನ ದೆವ್ವಬಡಕೊಂಡsದ! ಅವರೆಲ್ಲಾರಿಗೂ ಹೊನ್ನಿನ ಹಾಸಿಗಿ, ರನ್ನದ ತಲೆಗಿಂಬು ಬೇಕಾಗ್ಯಾವ. ಒಬ್ಬ ಹಿರಣ್ಯಕಶಿಪೂನ ಸಂಹಾರ ಮಾಡಲಿಕ್ಕೆ ಹಿಂದಿನ ಯುಗದಾಗ, ದೇವರೇ ನರಸಿಂಹ ಆಗಿ ಅವತರಿಸಬೇಕಾತಂತ; ಇಂದ ನೋಡಿದರ, ಮನಿಗೊಬ್ಬ—ಮಾರಿಗೊಬ್ಬ—ಹಿರಣ್ಯಕಶಿಪುಗಳು ಕಾಣತಾರ. ಇವರ ಸಂಹಾರ ಮಾಡೂದು ಈಗ ಆ ದೇವರ ಕೈಯಿಂದಾದರೂ ಆಗತsದೋ ಇಲ್ಲೋ ಅಂತೀನಿ ನಾ. ನಮ್ಮ ಮಲಕಪ್ಪಗೂ ಚಿನ್ನಬೇಕಾಗೇದ ಚಿನ್ನ ! ತನ್ನ ಚಿನ್ನದ ಹುಚ್ಚಿಗಾಗಿ ಇನ್ನೊಬ್ಬರ ಅನ್ನಕ್ಕ ಅಡ್ಡಗಾಲು ಹಾಕತs ನಿಂತಾನ ! "

" ಒಬ್ಬ ಮಲಕಪ್ಪನೇನು ಬಿಡ್ರಿ; ಎಲ್ಲಾ ಜನರೂ ಅಂಥವರs ಆಗ್ಯಾರ. ನಮ್ಮ ರೈತರಂದರ ಎಷ್ಟೊಂದು ಉದಾರರಿದ್ದರು ! ಮೊನ್ನೆ-ಮೊನ್ನಿನತನಕಾ, ಕಣಕ್ಕ ಬಂದ ಪಾಪಿ-ಪರದೇಶಿಗಳಿಗೆಲ್ಲಾ ಪಡಿಪಡಿ ಕಾಳುಕೊಟ್ಟು ಕಳಿಸ-ತಿದ್ದರು. ಈಗ ಈ ದೇಶಸ್ನು ಒದರೂದs ತಡ; ಇರಿವಿಗಳಿಗೆ ಸಹಿತ ಬಾಯಿಜಾಳಿಗೀ, ಹಾಕಲಿಕ್ಕೆ ಸುರೂ ಮಾಡ್ಯಾರ! ಎರಡು-ಮೂರು ವರ್ಷದೊಳಗ ಮನುಷ್ಯನ ಮನಸ್ಸಿನ ಬದಲಾವಣಿ ಇಷ್ಟೊಂದು ಆಗಬೇಕಂದರ, ಇದೊಂದು ದೈವೀ-ಚಮತ್ಕಾರನs ಅನಿಸತsದ ನನಗ "

ನನ್ನ ಮಾತನ್ನು ಕೇಳಿ ಒಮ್ಮೆಲೆ ಸೆಟ್ಟರು ನುಡಿದರು :

" ದೈವೀಚಮತ್ಕಾರ ಲೋಕಕ್ಕ ಎಂದೂ ದುಃಖವನ್ನ ಉಂಟುಮಾಡೂ-ದಿಲ್ಲ ಏನಪಾ! ಇದು ದೆವ್ವದ ಚಮತ್ಕಾರ! ಆಶೆ-ಸ್ವಾರ್ಥಗಳ ದೆವ್ವದ ಕೈಮಾಟ! ನಮ್ಮ ಜನರು ಈ ದೆವ್ವಗಳ ಬಲಿಯೊಳಗ ಬಿದ್ದು ಬಿಟ್ಟಾರ. ಅವು ಕುಣಿಸಿದ್ಹಾಂಗ ಕುಣೀಲಿಕ್ಕೆ ಹತ್ತ್ಯಾರ. ದೆವ್ವದ ಕೆಲಸಂದರ ಇಷ್ಟs : ಕೆಲವು ಕಾಲ ಕುಣಿಸ್ಯಾಡತಾವ; ಆ ಮ್ಯಾಲ ಮೆಟ್ಟಿ ತುಳಿದು ಮೋಜಾ ನೋಡತಾವ ! ಅದಕ್ಕs ನಮ್ಮ ಹಿಂದಿನ ಹಿರಿಯರು, ಈ ದೆವ್ವಗಳಿಂದ ದೂರವೇ ಇರಲಿಕ್ಕೆ

ಅಪೇಕ್ಷಾ ಮಾಡತಿದ್ದರು; ಅದರಂತೇ ತಮ್ಮ ಜೀವನದೊಳಗ ಸಾಧನಾನೂ ಮಾಡತಿದ್ದರು. ಸಮಾಜದೊಳಗ ಯಾರಿಗಾದರೂ ಈ ದೆವ್ವಗಳು ಗಂಟು-ಬಿದ್ದಿದ್ದರ, ಮಿಕ್ಕವರೆಲ್ಲಾ ಕೂಡಿ ಅವುಗಳ ಕೈಯಿಂದ ಅವರನ್ನ ಪಾರು-ಮಾಡಲಿಕ್ಕೆ ಪ್ರಯತ್ನಿಸತಿದ್ದರು. ಹಿಂದ ಒಮ್ಮೆ ಏನ ಆಯ್ತಂತೀ ಕಿಟ್ಟಣ್ಣಾ!..."

ಎಂದು ನುಡಿದು ಮೇಲಗಿರಿಸೆಟ್ಟರು ಕೆಮ್ಮತೊಡಗಿದರು. ನನ್ನಲ್ಲಿ ತುಂಬ ಕುತೂಹಲವು ತಲೆದೋರಿತು. ಸೆಟ್ಟರು ಈಗ ಏನಾದರೂ ಒಂದು ಜೀವನದ ಕಥೆಯನ್ನು ಹೇಳಬಹುದೆಂದು ಎನಿಸಿತು. ಆತುರಭಾವದಿಂದ ನಾನು ಅವರ ಮುಖದ ಕಡೆಗೇ ನೋಡುತ್ತ ಕುಳಿತೆ. ಕೆಮ್ಮು ನಿಂತೊಡನೆಯೆ ಸೆಟ್ಟರು ತಮ್ಮ ಮಾತನ್ನು ಮುಂದುವರಿಸಿದರು :

"ನಮ್ಮ ನಾಡಂದರ ಬರಗಾಲಕ್ಕ ಬಿಡದೀಮನಿ ಇದ್ದ್ಹಾಂಗs ಅಲ್ಲs ಕಿಟ್ಟಣ್ಣ ! ಆದರ, ನಮ್ಮ ಭೂಮಿತಾಯಿ ದೊಡ್ಡಾಕಿ. ಒಂದು ವರ್ಷ ಅನ್ನಾ ಬೆಳದು ಕೊಟ್ಟರ, ಎರಡು ವರ್ಷದ ಬರಗಾಲಕ್ಕ ಬುತ್ತೀ ಕಟ್ಟಿಕೊಡೂ ಕೆಲಸಾನೂ ಮಾಡಿರತಾಳ. ಆದರ, ಈಗ ನಾಲ್ವತ್ತು ವರ್ಷದ ಹಿಂದ ನೋಡು— ಮೊದಲ ಎರಡು ವರ್ಷ ಅರ್ಧಮರ್ಧ ಮಳಿಗಾಲ ಆತು; ಮೂರನೇ ವರ್ಷ ಅಂದರ, ಮಳೀ ನಮ್ಮ ನಾಡಿಗೆ ಮುಖಾನs ತೋರಿಸಲಿಲ್ಲ. ದೊಡ್ಡ ಬರಗಾಲ ಅದು. ಹೋಳಿಯ ಕಾಮಣ್ಣನ ಬೆಂಕೀನ ನಾಡಿನ ಬಡಮಂದೀ ಹೊಟ್ಟ್ಯಾಗs ಹಚ್ಚಿದ್ಹಾಂಗ ಆಯ್ತೇನಪಾ ! ಬಹುಜನರ ಮನಿಯೊಳಗ ಹಿಡಿ ಕಾಳಿಲ್ಲ.... ಕೊಂಡು ತಿಂದೀಸಂವರ ಕೈಯಾಗ ಒಂದು ಕಾಸು ಉಳಿದಿರಲಿಲ್ಲ. ಜನರೆಲಾ ಕಂಗೆಟ್ಟು ಹೋದರು. ಅನುಕೂಲ ಇದ್ದವರು ದನಾ-ಕರು ಎಲ್ಲಾ ಕೈಗೆ ಬಂದ್ಹಾಂಗ ಮಾರಿಕೊಂಡು, ಹೊಟ್ಟೀ ತುಂಬಿಕೊಳ್ಳಲಿಕ್ಕೆ ಮಲ್ನಾಡಿಗೆ ಹೊಂಟುಹೋದರು. ಅನುಕೂಲ ಇಲ್ಲದ ಬಡಜನರು ಏನು ಮಾಡಬೇಕು ? ಆಗ ನಮ್ಮ ಹಿರಿಯ ಮಠದ ಅಡವಯ್ಯಸ್ವಾಮಿಗಳು ಇದ್ದರು. ಅವರು ಮುಂದಾಳಾಗಿ ನಿಂತರು. ಮಠದೊಳಗ ದಿನಾ ನುಚ್ಚು-ಅಂಬಲಿ ಮಾಡಿಸೂದು, ಬಂದಮಂದಿಗೆಲ್ಲಾ ಎರಡೂ ಹೊತ್ತು ಉಣಲಿಕ್ಕೆ ನೀಡೂದು- ಈ ಕ್ರಮಾ ಸುರೂ ಮಾಡೇಬಿಟ್ಟರು. ಮೊದ-ಮೊದಲ ನಮ್ಮ ಹಳ್ಳಿಯ ಬಡಜನರಷ್ಟs ಬರತಿದ್ದರು. ಈ ಸುದ್ದಿ ಹೊರಗ ಹಬ್ಬೂದಕ್ಕ ಎಷ್ಟು ದಿನ ಬೇಕು ? ಎಂಟ್ಹತ್ತು ದಿನ ಹೋಗೂದರೊಳಗ, ಸುತ್ತ-ಮುತ್ತಲಿನ ಹಳ್ಳಿಯ ಜನರೂ ಒಂದು ನಮ್ಮ

ಊರಲ್ಲಿಯೆ ಛಾವಣಿಹೊಡೆದರು. ಉಣ್ಣುವ ಜನರ ಸಂಖ್ಯಾ ನಾವಿರಕ್ಕ ಸಮೀಪಿಸಿತು. ಅವರಲ್ಲಿಯು ಜನರೇ ಕಾಳು ಹಸನು ಮಾಡುವರು; ಕುಟ್ಟುವರು; ಬೀಸುವರು; ಅಡಿಗೆ ಮಾಡುವರು; ಬಂದವರಿಗೆಲ್ಲ ನೀಡುವರು; ತಾವೂ ಊಟಮಾಡುವರು.

ಇದೆಲ್ಲವಾಯಿತು; ಒಬ್ಬ ಅಯ್ಯನವರು ಇಷ್ಟು ಜನರಿಗೆ ಅನ್ನ-ಧಾನ್ಯಗಳನ್ನ ಎಲ್ಲಿಂದ ಪೂರಯಿಸಬೇಕು ? ಎಷ್ಟಂತ ಪೂರಯಿಸಬೇಕು ? ಅಯ್ಯನವರಿಗೆ ಡೋಣಿನಾಲಿನ ಕಡೆಗೆ ಭಕ್ತರು ಬಹಳ. ಅದೇನು ಕಾರಣೋ ಏನೋ,! ಆ ನಾಡಿನಲ್ಲಿ ಮಳೆರಾಯ ಆ ವರ್ಷ ಕಣ್ಣು ತೆರೆದಿದ್ದ. ಭೂಮಿ ಬೆಳೆದಿದ್ದುವು. ಅಯ್ಯನವರು ಭಕ್ತರಿಗೆಲ್ಲ ತಮ್ಮ ಧರ್ಮಕಾರ್ಯಕ್ಕೆ ನೆರವಾಗ-ಬೇಕಂತ ಕಾಗದ ಬರೆದರು. ಪೇಟೆಯಲ್ಲೆಲ್ಲಾ ಜೋಳ ಪಡಿಯ ದರದಿಂವ ಮಾರಾಟವಾಗತಿತ್ತು. ಒಂದು ಚೀಲ ಜೋಳಾ ಮಾರಿದರ ಇಪ್ಪತ್ತೈದು-ಮೂವತ್ತು ರೂಪಾಯಿ ಬರತಿದ್ದುವು. ಅಂಥಾ ದಿವಸದೊಳಗೂ ಅಯ್ಯನವರ ಉದಾರ ಭಕ್ತರು, ನೂರಾರು ಚಕ್ಕಡಿಗಳನ್ನು ತುಂಬಿಕೊಂಡು ಬಂದು ಧಾನ್ಯವನ್ನು ಕೊಟ್ಟುಹೋದರು.

ನಮ್ಮ ಊರ ಕೆರೆಗೆ 'ಬರದ ಕೆರೆ' ಅಂತ ಹೆಸರು ಯಾಕ ಬಿದ್ದದ ಗೊತ್ತದ ಏನು ? ನಮ್ಮ ಅಯ್ಯನವರು ಬಹಳ ಬುದ್ಧಿವಂತರು. ಜನರಿಗೆ ಹಾಕುವ ಅನ್ನದ ಉಪಯೋಗ, ಸಾರ್ವಜನಿಕರ ಶಾಶ್ವತಪ್ರಯೋಜನಕ್ಕೂ ಆಗಬೇಕಂತ ವಿಚಾರ ಮಾಡಿದರು. ಕೆರೆ ಕಡಿಸೂ ಕೆಲಸಕ್ಕ ಪ್ರಾರಂಭ ಮಾಡಿದರು. ಶಕ್ತಿಯಿರುವ ಜನರನ್ನೆಲ್ಲಾ ಆ ಕೆಲಸಕ್ಕ ತೊಡಗಿಸಿದರು. 'ಮೈಮುರೀ ದುಡೀರಿ; ಹೊಟ್ಟೆತುಂಬ ಊಟಾ ಮಾಡಿರಿ, ಅಂತ ಅವರಿಗೆಲ್ಲಾ ಹೇಳಿದರು. ಕೆಲಸ ಇಲ್ಲದss ರಿಣಗೂಳು ತಿನ್ನತss ಕೂಡೋದಂದರss, ಜನರ ಮನಸಿಗೂ ನೊಣಕಚ್ಚಿದ್ಹಾಂಗ ಆಗತಿತ್ತು. ಕೆರೆ ಕಡಿಯುವ ಕಟ್ಟುವ ಕೆಲಸವನ್ನ ಅವರು ಹುರುಪಿನಿಂದ ಮಾಡಲಿಕ್ಕೆ ಹತ್ತಿದರು. ಅಂಥಾ ಬರಗಾಲ-ದೊಳಗೂ ನಮ್ಮ ಅಯ್ಯನವರು, ನಮ್ಮ ಹಳ್ಳಿಯನ್ನ ಒಂದು ಜಾತ್ರೆಯ ಸಮಾರಂಭದಿಂದ ತುಂಬಿಬಿಟ್ಟಂತೆ ಮಾಡಿದ್ದರು.

ಬರಕ್ಕ ಬುತ್ತೀ ಕಟ್ಟಿದರ ಎಷ್ಟು ದಿನಾ ಅಂತ ಪೂರಯಿಸೀತು ? ಕಾರಹುಣ್ಣಿವೀವರೆಗೆ ಅನ್ನಛತ್ರದ ಕಾರ್ಯ ಸುಸೂತ್ರವಾಗಿ ನಡೀತು.

ಅಯ್ಯನವರ ಉಗ್ರಾಣದೊಳಗಿನ ಸಂಗ್ರಹ ಕರಗಿ ಹೋಯ್ತು. ಕೆರೆಯ ಅಗಿತದ ಕೆಲಸವೆಲ್ಲ ಮುಗಿದು ಕಟ್ಟೆಯನ್ನ ಕಟ್ಟಿಸೂ ಕೆಲಸ ರಭಸದಿಂದ ಸಾಗಿತ್ತು. ಪೂರ್ವದಿಕ್ಕಿನಿಂದ ಕಪ್ಪುಬಣ್ಣದ ಮೋಡ, ಆನೆಯ ಮರಿಯ ಹಾಂಗ ಎದ್ದೆದ್ದು ಮ್ಯಾಲ ಬರಲಿಕ್ಕೆ ಸುರುವು ಮಾಡಿದೂ! ಕೊಲ್ಲಬೇಕೆನ್ನೂ ದೇವರಿಗಿಂತ ಕಾಯಬೇಕೆನ್ನೂ ದೇವರ ಶಕ್ತಿ ದೊಡ್ಡದು! ಬರಗಾಲದ ಮರು-ವರ್ಷ ಸುಕಾಲ ಬರೂದು ಕಟ್ಟಿಟ್ಟ ಮಾತು! ಮಳೆಗಾಲ ಪ್ರಾರಂಭ ಆಗಿ ಕೆರೆಗೆ ನೀರು ಬರೂದರೊಳಗs, ಕಟ್ಟೀಕಟ್ಟಿಸೂ ಕೆಲಸಾ ಮುಗಿಸಬೇಕಾಗಿತ್ತು. ಆದರೇನು, ಕಾಳಿನ ಸಂಟೀ ಸಂಪುಷ್ಟಕ್ಕ ಬಂದದ್ದನ್ನ ನೋಡಿ, ಅಯ್ಯನವರ ಎದೆ ಒಡೆಯಿತು. ದುಡಿಯುವ ಜನರೂ ಗಾಬರಿಗೊಂಡರು.

ನಮ್ಮ ಊರಲ್ಲಿದ್ದ ಬೇರೆ ಮನೆತನಗಳಲ್ಲಿ ಹೆಚ್ಚಿನ ಕಾಳಿನ ಸಂಗ್ರಹವು ಯಾರಲ್ಲಿಯೂ ಇರಲಿಲ್ಲ. ಇದ್ದ ನಾಲ್ಕಾರು ಜನ ದೊಡ್ಡ ದೊಡ್ಡ ಒಕ್ಕಲಿಗರೂ ಜಮೀನುದಾರರೂ ಅಡಿವಯ್ಯನವರ ಸಮಾಜಕಾರ್ಯವನ್ನು ನೋಡಿ ಮೆಚ್ಚಿಯೋ, ನಾಚಿಯೋ—ಶಕ್ಯವಿದ್ದಷ್ಟು ಹೆಚ್ಚು ಧಾನ್ಯವನ್ನು ಅವರಿಗೆ ಕೊಟ್ಟಿದ್ದರು, ಈಗಲೂ ಕೊಡುತ್ತಲಿದ್ದರು. ಕಿಟ್ಟಣ್ಣಾ, ಆಗ ನಿಮ್ಮ ಅಜ್ಜನ ಮೋಜು ಏನು ಹೇಳಲಿ! ಮನೆಯಲ್ಲಿದ್ದ ಕಾಳನ್ನ—ತಮ್ಮ ಕುಟುಂಬದ ಉಪಜೀವನದ ವಿಚಾರವನ್ನೇನೂ ಮಾಡದೆ—ಕೊಟ್ಟುಬಿಟ್ಟರು. ಎರಡು-ಮೂರು ದಿನ ಮನೆಯಲ್ಲಿಯ ವಯಸ್ಸಾದ ಜನರು ನಿರಾಹಾರಿಗಳಾಗೇ ಇದ್ದರಂತ, ಚಿಕ್ಕವರಿಗೆ ಒಂದುಹೊತ್ತು ಅಂಬಲಿಯನ್ನ ಕಾಸಿ ಕುಡಿಸತ್ತಿದ್ದರಂತ. ಈ ಸಂಗತಿ ಅಡಿವಯ್ಯನವರಿಗೆ ಗೊತ್ತಾದ ಕೂಡಲೆ, ಅವರು ದಿನಾಲೂ ನಿಮ್ಮ ಮನಿಗೂ ಸ್ವಲ್ಪ ಧಾನ್ಯವನ್ನ ಕಳಿಸತೊಡಗಿದರು. ಅದನ್ನ ತೊಗೊಳ್ಳಬೇಕಾದರ, ನಿಮ್ಮ ಅಜ್ಜನವರಿಗೆ ಜೀವ ಹೋದ್ಹಾಂಗ ಆಗತಿತ್ತು; ಆದರ ಮಾಡತಾರೇನು? ಮಕ್ಕಳು-ಮರಿ ಉಪವಾಸ ಬಿದ್ದದ್ದು ನೋಡೂದು ಹ್ಯಾಂಗ? ಆದರೂ ಪುಕ್ಕಟೆಯಾಗಿ ಧಾನ್ಯ ತೊಗೊಳ್ಳಬಾರದಂತ, ಅವರು ಕೆರೀ ಕಟ್ಟಿಸೂ ಕೆಲಸ-ದೊಳಗ ಭಾಗವಹಿಸಲಿಕ್ಕೆ ಹತ್ತಿದರು. ಬ್ಯಾಡಂತ ನಾವೆಲ್ಲಾ ಬೇಕಾದಷ್ಟು ಹೇಳಿದರೂ, ಆ ಯಜಮಾನರು ಕೇಳಲಿಲ್ಲ. ಲೆಕ್ಕ-ಪತ್ರ ಬರೆಯೂ ಲೆಕ್ಕಣಿಕೀನೂ ಹಿಡೀತಿದ್ದರು; ಗಚ್ಚುಕುಟ್ಟುವ ಒನಕೀನೂ ಹಿಡೀತಿದ್ದರು.

ಅಡಿವಯ್ಯನವರ ಉಗ್ರಾಣದೊಳಗಿನ ಕಾಳಿನ ಸಂಗ್ರಹ ಸವೆದು

ಹೋತು. ಇನ್ನೂ ಎರಡು ತಿಂಗಳವರೆಗಾದರೂ ಬಡಜನರ ಹೊಟ್ಟೀ ಭಾರಾ ಅವರು ಹೊರಬೇಕಾಗಿತ್ತು. ಮಳೆಗಾಲ ಬರೂದರೊಳಗ ಕೆರೆಯ ಕೆಲಸಾ ಮುಗಿಸದಿದ್ದರ, ಇದುವರಿಗೆ ಮಾಡಿದ ಕೆಲಸೆಲ್ಲಾ ಹೊಳೆಯೊಳಗ ಹುಣಿಸೀ-ತೊಳೆದ್ಹಾಂಗ ಆಗಿಹೋಗತಿತ್ತು ನಮ್ಮ ಮನಿಯೊಳಗ ಕಾಳಿನ ಸಂಗ್ರಹ ಏನೂ ಇರದಿದ್ದರೂ, ನಾಲ್ಕೆಂಟು ಸಾವಿರ ರೂಪಾಯಿ ಇದ್ದುವು. ನಮ್ಮ ತಂದೆಯವರು ಅಡಿವಯ್ಯನವರ ಕಡೆಗೆ ಅವುಗಳನ್ನ ಒಪ್ಪಿಸಿದರು. ಪೇಟೆಯಲ್ಲಿ ಸಿಕ್ಕ ಧಾನ್ಯವನ್ನ, ಹೇಳಿದಷ್ಟು ಬೆಲೆಕೊಟ್ಟು ತಂದುಹಾಕಲಾಯಿತು. ಮತ್ತೆ ಒಂದು ತಿಂಗಳ ಅನ್ನಛತ್ರದ ಚಿಂತಿ ತಪ್ಪಿದಂತಾಯಿತು. ಕೆರೆಯ ಕೆಲಸವೂ ಸುಯಂತ್ರಿತವಾಗಿ ನಡೀತು.

ತುಟ್ಟಿದರದಿಂದ ತರುವ ಕಾಳು ! ನಾಲ್ಕೆಂಟು ಸಾವಿರ ರೂಪಾಯಿಗಳು ' ಹಾಂ ಹಾಂ ! ' ಅನ್ನೂದರೊಳಗs ತೀರಿ ಹೋಗಿ, ಅಡಿವಯ್ಯನವರು ಮತ್ತೆ ಬರಿಗೈಯವರಾದರು. ಇನ್ನ ಹದಿನೈದು ದಿನ ಜನರನ್ನ ದುಡಿಸಿಕೊಂಡರ ಕೆರೆಯ ಕೆಲಸ ಮುಗೀತಿತ್ತು. ಮುಂದ ಮಳಿಯಾಗಿ ಹೊಲಗಪ್ಪದ ಕೆಲಸ ಪ್ರಾರಂಭ ಆಗಬೇಕು. ಆದರ, ಹೊಲಗಳನ್ನ ಉತ್ತು ಬಿತ್ತಿ ಬೆಳೆಗಳು ಬರುವ ತನಕಾ ಜನರೆಲ್ಲಾ ಹೊಟ್ಟಿಗೇನು ಮಾಡಬೇಕು ? ನಿಮ್ಮ ಅಜ್ಜ, ಅಡಿವಯ್ಯನವರು ಕೂಡಿ, ಸರಕಾರಕ್ಕ ಬರೆದು ತಿಳಿಸಿದರು. ಆದರೇನಪಾ, ಸರಕಾರಕ್ಕ ದಾದುಮುಟ್ಟಿ ಅದರ ವಿಚಾರ ಮಾಡೂತನಕಾ ಜನರನ್ನೇನು ಉಪವಾಸ ಕೊಲ್ಲೂದದ ಏನು ? ಅಡಿವಯ್ಯನವರು ಒಂದೇಸವನೇ ಮಿಡಿಕ್ಯಾಡ-ಲಿಕ್ಕೆ ಹತ್ತಿದರು. ಮೂರು ನಾಲ್ಕು ದಿನ ಜನರೆಲ್ಲಾರೂ ಒಪ್ಪತ್ತೇ ಅಂಬಲೀ ಕುಡಿದು ದುಡೀಲಿಕ್ಕೆ ಹೋದರು. ಮುಂದ ಉಪವಾಸ ಮಾಡಬೇಕಾದ ಕೆಟ್ಟದಿನ ಬಂದೇ ಬಿಟ್ಟಿತು.

ಆಗ ಈ ಮಲಕಪ್ಪನ ತಂದಿ ಊರಿಗೆ ದೊಡ್ಡ ಒಕ್ಕಲು. ನಾಕು ಹಗೇವಿನ ತುಂಬ ಜೋಳಾ ತುಂಬಿ ಇಟ್ಟುಕೊಂಡಿದ್ದರೂ, ಒಬ್ಬರಿಗೂ ಒಂದು ಕಾಳೇನೂ ಕೊಟ್ಟಿದ್ದಿಲ್ಲ. ರೂಪಾಯಿ ತೊಗೊಂಡು ಯಾರಾದರೂ ಕೊಳ್ಳಲಿಕ್ಕಂತ ಹೋದರ, ಪ್ಯಾಟೀದರಕ್ಕಿಂತಲೂ ಒಂದು ಚಟಾಕು ತುಟ್ಟಿಯೇ ಹೇಳತಿದ್ದ. ಕಾಲೊಳಗ ತ್ರಾಣ ಇದ್ದವರು ಪ್ಯಾಟಿಗೇ ಹೋಗಿ ತರತಿದ್ದರು; ತ್ರಾಣ ಇಲ್ಲ-ದವರು ಆತ ಹೇಳಿದ್ಹಾಂಗs ಕೊಂಡುತಂದು ಅಂಬಲೀ ಕಾಸಿಕೊಂಡು

ಕುಡೀತಿದ್ದರು. ಅಡಿವಯ್ಯನವರು ಅನ್ನಛತ್ರಾ ಸುರೂ ಮಾಡಿದ್ದಂದರ, ಅವನ ಹೊಟ್ಟ್ಯಾಗ ಬೆಂಕೀ ಬಿದ್ಹಾಂಗ ಆಗಿತ್ತು. ಯಾಕಂದರ, ಅವನಲ್ಲಿ ಜೋಳಾ ಕೊಂಡು ತರುವವರ ಸಂಖ್ಯಾ ಕಡಿಮಿ ಆತು. ನೋಡು ಕಿಟ್ಟಣ್ಣಾ, ಎಂಥಾ ರಾಮನ ಕಾಲದೊಳಗ ಸಹಿತ ರಾವಣರು ಇದ್ದss ಇರತಾರಲಾ! ಧರ್ಮರಾಜನ್ನ ದ್ವೇಷಿಸತಿರೂ ದುರ್ಯೋಧನನಂಥವರು ಎಲ್ಲಾ ಕಾಲದೊಳಗೂ ಇರುವವರss ನೋಡು! ಊರಾಗಿನ ಮಂದೆಲ್ಲಾ ಬಡಜನರಿಗಾಗಿ ಕರುಳು-ಕರಗಿ ಸಹಾಯಮಾಡಲಿಕ್ಕೆ ಸಿದ್ಧರಾದರೂ, ಈ ನಮ್ಮ ಮಲಕಪ್ಪನ ತಂದಿಯ ಕಲ್ಲೆದೆಯೇನೂ ಕರಗಲಿಲ್ಲ. ಜನರೆಲ್ಲಾ ಬರಿಹೊಟ್ಟೆಂದ, ಮುಖಾಬಾಡಿಸಿ-ಕೊಂಡು ಬಿದ್ದಿರುವಾಗ, ಆತ ಹೊಟ್ಟಿತುಂಬ ಉಂಡು ತೇಗಿ, ಮಿಸೀಮ್ಯಾಲ ಕೈಯಾಡಿಸತಾ ತಿರಿಗ್ಯಾಡತಿದ್ದ. ಅವನ ಎಡಗೈಯಾಗಿನ ಬಂಗಾರದ ಸಲಕಡೆ, ಜರದ ರುಮಾಲು, ಮಲ್‌ಮಲ್ ಅಂಗಿ, ಮುಖಮಲಿನ ಜಾಕೀಟು— ಇವನ್ನೆಲ್ಲಾ, ಬರಗಾಲದ ಬಡಜನರು ಬೆರಗಾಗೇ ನೋಡತಿದ್ದರು. ಅವನ ಸಿರಿವಂತಿಕೆಗೆ ಮರುಳಾಗಿ, ಒಬ್ಬಿಬ್ಬರು ಹರೇದ ಹೆಣ್ಣುಮಕ್ಕಳು ದಾರೀ ತಪ್ಪಿಯೂ ನಡೆದರು. ಇದರಿಂದ ಅಡಿವಯ್ಯನವರು ಮರ ಮರ ಮರುಗಿದರಲ್ಲದೆ, ಆ ಹೆಣ್ಣುಮಕ್ಕಳ ಹೆತ್ತುಗಡೆಯವರೆಲ್ಲ ಒಳಗೊಳಗೇ ತುಂಬ ಸಂತಾಪ-ಗೊಂಡರು. ಇದss ಸಂದರ್ಭದೊಳಗss ಅಡಿವಯ್ಯನವರ ಅನ್ನಛತ್ರದ ಕಾಳೆಲ್ಲಾ ತಳಗಂಡಿದ್ದೂ! ಪ್ಯಾಟೆಂದss ಕೊಂಡು ತಂದೀನಂದರ ಕೈಯೊಳಗ ಕಾಸಿಲ್ಲ. ಊರೊಳಗ ಬ್ಯಾರೆಯವರ ಕಡೆ ಒಂದು ಕಾಳು ಧಾನ್ಯವೂ ಸಿಗುವ ಹಾಂಗಿರ-ಲಿಲ್ಲ. ಇನ್ನೇನು ಮಾಡಬೇಕು ಅವರು?" ಎಂದು ಭಾವಾವಿಷ್ಟರಾಗಿ ಹೇಳುತ್ತಿರುವಾಗ, ಮೇಲಗಿರಿಸೆಟ್ಟರಿಗೆ ಮತ್ತೆ ಕೆಮ್ಮು ಬಂತು. ಕೆಮ್ಮಿ ಕೆಮ್ಮಿ ಹತ್ತಿರದಲ್ಲಿಯೆ ಇದ್ದ ಕಾಳಂಜಿ (ಪೀಕದಾನಿ)ಯಲ್ಲಿ ಉಗುಳಿ, ಸ್ವಲ್ಪ ವೇಳೆ ಸಾವರಿಸಿಕೊಂಡು, ಮತ್ತೆ ತಮ್ಮ ಕತೆಯನ್ನು ಪ್ರಾರಂಭಿಸಿದರು :

"ನೋಡು ಕಿಟ್ಟಣ್ಣಾ, ದಿನದಿನಕ್ಕ ಮೋಡಗಳು ಎದ್ದು ಮುಗಲ ಮ್ಯಾಲ ಓಡಾಡಲಿಕ್ಕೆ ಹತ್ತಿದೂ. ಒಂದು ದಿವಸಂತೂ ದೊಡ್ಡ ಅಡ್ಡ ಮಳಿಬಿದ್ದು, ಪ್ರವಾಹ ಕೆರೆಯ-ಕಟ್ಟೆಯ ಕೆಲವು ಭಾಗವನ್ನ ಕೊಚ್ಚಿಕೊಂಡು ಹೋಯ್ತು! ಹೊಟ್ಟೆಗಿಲ್ಲದ ಜನರು ಮುಳ್ಳುಗಳ್ಳಿಯ ಹಣ್ಣುಗಳನ್ನ ತಂದು ಸುಟ್ಟು ಸುಟ್ಟು ತಿನ್ನತೊಡಗಿದರು; ಅದು ಸಾಲದೆ, ಎಂತೆಂಥಾದೊ ಹಸುರುಸೊಪ್ಪನ್ನು ತಂದು

ಕುದಿಸಿ ಕುದಿಸಿ ತಿನ್ನಲಾರಂಭಿಸಿದರು. ಅಡಿವಯ್ಯನವರು ಇದನ್ನೆಲ್ಲಾ ನೋಡಿದರು; ತಮ್ಮ ಅಸಾಮರ್ಥ್ಯಕ್ಕಾಗಿ ಕಳವಳಗೊಂಡರು. 'ಈಗ ಇಲ್ಲದ ಅಭಿಮಾನ ಹಿಡಿದು ಸುಮ್ಮನಿರೂದೇನೂ ಸರಿಯಾದದ್ದಲ್ಲ' ಅಂತ ಮನಸ್ಸಿನಲ್ಲಿ ನಿರ್ಧಾರ ಮಾಡಿದರು. ಈ ಮಲಕಪ್ಪನ ತಂದೆಯ ಮನಿಗೆ ತಾವಾಗಿಯೇ ಹೋದರು. ದುಡ್ಡಿನ ಗಮುಜು ಬಾಳ ಕೆಟ್ಟ ಕಿಟ್ಟಣ್ಣಾ! ಮನಿಮುಟ್ಟ ಬಂದ ಆ ಹಿರಿಯ ಮನುಷ್ಯನನ್ನ 'ಮ್ಯಾಲ ಬರ್ರಿ' ಅಂತ ಕರೀಲಿಲ್ಲಂತ ಆ ಜಂಬದ ಕೋಳಿ! ಆದರೇನು, ಹೊತ್ತು ಬಂದಾಗ ಮನುಷ್ಯ ಕತ್ತೆಯ ಕಾಲನಾದರೂ ಹಿಡಿಯಬೇಕಾಗತ್ತದಲ್ಲಾ? ಅಡಿವಯ್ಯನವರಿಗೆ ಕೋಪಬಂದರೂ, ಅದನ್ನವರು ತಡೆದುಕೊಂಡು ಹೇಳಿದರು :

'ನಾ ಈಗ ನಿಮ್ಮ ಮನಿಗೆ ಯಾಕ ಬಂದೀನಿ ಅಂಬೂದು ನಿನಗ ಗೊತ್ತಾ-ಗಿದ್ದೀತು ಬೋರಣ್ಣಾ!' ಬೋರಣ್ಣ ನಿರ್ಲಕ್ಷ್ಯಭಾವದವನಾಗಿಯೆ ಹೇಳಿದ :

'ಗೊತ್ತಾದರೂ ಸರಿ, ಗೊತ್ತಾಗದಿದ್ದರೂ ಸರಿ! ನೀವು ನಮ್ಮ ಮನೀ ಕಟ್ಟೀ ಕಲ್ಲು ಹತ್ತುವ ಕಾರಣನ ಇರಲಿಲ್ಲ!'

'ನೋಡು ಬೋರಣ್ಣಾ! ಸಾವಿರಾರು ಜನ ಕೂಳಿಲ್ಲದೇ ಸಾಯಲಿಕ್ಕೆ ಹತ್ಯಾರ........'

ಬೋರಣ್ಣ ನಡುವೇ ಮಾತನಾಡಿದ :

'ಆ ಸಾಯುವರನ್ನ ಬದಿಕಿಸುವ ದೇವರು ನೀವು ಇದ್ದೀರಲಾ! ನಾವೇನು ಮಾಡುವವರು?'

'ಹಾಂಗಲ್ಲ ಬೋರಣ್ಣಾ, ಇನ್ನ ಹತ್ತಿಪ್ಪತ್ತು ದಿನಾ ಆ ಜನರನ್ನ ಹೊಟ್ಟಿಗೆ ಕೊಟ್ಟು ಹಿಡಿದರ, ಅಷ್ಟರೊಳಗs ಸರಕಾರದಿಂದ ಏನಾದರೂ ಸಹಾಯದ ವ್ಯವಸ್ಥಾ ಆಗತ್ತದ. ಇನ್ನೂ ಒಂದು ಅಂದರ, ಈಗ ನಾವು ಈ ಜನರ ಕೈಬಿಟ್ಟರ, ಕೆರೆಯ ಕೆಲಸೆಲ್ಲಾ ಕೆಟ್ಟು ಹೋಗತ್ತದ!'

'ಹೋಗ್ಹೋಗರೀ! ಊರಿಗೆ ಉಪಕಾರಾ ಮಾಡಿ ಊಟಾಕಾಣದs ಹೋದರಂತ! ನಾವೇನು ಮಾಡಬೇಕಂಬೂದು ನಮಗ ಗೊತ್ತದ. ಇದರೊಳಗ ನಮಗ ಯಾರೂ ಬುದ್ಧೀಹೇಳಲಿಕ್ಕೆ ಬರುವ ಕಾರಣೇನೂ ಇಲ್ಲ!'

'ಈಗ ಹೀಂಗ ಒಗೆದು ಮಾತಾಡಬ್ಯಾಡ ಬೋರಣ್ಣಾ! ಬರಾ ಮೂರು ದಿನ–ಮಾತು ಅನುಗಾಲಾ ಅಂತ ಹೇಳತಾರ; ಕೇಳೀದಿ ಇಲ್ಲೋ? ಇದs

ದಿನಾನs ಏನೂ ಕಡಿತನಕಾ ಇರೂದಿಲ್ಲ. ಅಲ್ಲದ ಜನತಾಕ್ಕ ಮಾಡಿದ ಉಪಕಾರ, ಇಂದಿಲ್ಲ ನಾಳೆ ಫಲಾ ಕೊಡದೇ ಹೋಗೋದಿಲ್ಲ !'

'ಛೇ ಛೇ ! ಆ ಫಲಾ ನಮಗೇನೂ ಬ್ಯಾಡ್ರಿಪಾ ! ಅವು ನಿಮಗs ಇರಲಿ ! ನೀವs ಮೊಟ್ಟೀ ಕಟ್ಟಿಕಟ್ಟಿ ಇಡರಿ !'

'ಹೀಂಗ ಅಹಂಕಾರದ ಮಾತು ಆಡಬಾರದು ಬೋರಣ್ಣಾ! ಮನುಷ್ಯಗ ಮೂರೂ ವ್ಯಾಳ್ಯಾ ಏನೂ ಸರೀ ಇರೂದಿಲ್ಲ. ಎಲ್ಲಾರಿಗೂ ಒಮ್ಮಿಲ್ಲಾ ಒಮ್ಮೆ ಬಿಕ್ಕಟ್ಟಿನ ಪ್ರಸಂಗ ಬಂದೇ ಬರತಿರತಾವ. ಅಂಥಾ ಪ್ರಸಂಗದಾಗ ಮನುಷ್ಯರಿಗೆ ಮನುಷ್ಯರೇ ಸಹಾಯಮಾಡಬೇಕಾಗತ್ತsದ !'

'ಅಯ್ಯನವರ, ನನ್ನ ಮುಂದ ಇಲ್ಲದ ಪಟ್ಟೆರಂಗಾ ಬಿಚ್ಚಬ್ಯಾಡ್ರಿ ! ಒಳ್ಳೇ ಮಾತಿನಿಂದ ಹೇಳತೀನಿ, ಇಲ್ಲಿಂದ ಹೊಂಟು ಹೋಗರಿ ನೀವು !'

'ನಿನ್ನಿಂದ ನಾನು ಪುಕ್ಕಟೆಯಾಗಿ ಏನೂ ಕೇಳಲಿಕ್ಕೆ ಬಂದಿಲ್ಲ ಬೋರಣ್ಣಾ! ಈಗ ನೀನು ನಿನ್ನ ಹಗೆಯನ್ನ ತೆಗೆಸಿ ಜೋಳವನ್ನ ಅಳೆದುಕೊಡು! ಸುಗ್ಗಿಯ ತಲೆಯ ಮೇಲೆ ಅವನ್ನೆಲ್ಲಾ ನಿನಗ ಒಪ್ಪಿಸೂ ಹೊಣೀ ನಾನು ಹೊರತೀನಿ. ಎಲ್ಲಾ ರೈತರಿಂದಲೂ ಕೂಡಿಸಿ, ಒಂದು ಕಾಳೂ ಕಡಿಮಿಯಾಗ-ದಂತೆ ನಾನೇ ಅಳೆದು ಕೊಡತೀನಿ........'

'ಭಾಳ ದೊಡ್ಡ ಒಕ್ಕಲು ನೀನೂ ! ಹೇಳಿ ಕೇಳಿ ತಿರಿತಂದು ತಿನ್ನೂ ಜಂಗಮ ನೀನು ! ನಿನ್ನ ಹೊಣೀ ಮ್ಯಾಲ ನಾನು ಕಾಳುಕೊಡಬೇಕs ? ಏನು ಸುಮ್ಮನs ಹೊಂಟುಹೋಗುತೀಯೋ, ಚಂಡಿನ ಮ್ಯಾಲ ಕೈಕೊಡಬೇಕೋ ?'

'ನೀನು ಅದನ್ನ ಮಾಡಿದರೂ ಅಡ್ಡಿಯಿಲ್ಲ. ನಿನ್ನ ಜೋಳ ಮಾತ್ರ ನನಗ ಬೇಕೇಬೇಕು !'

ಬೋರಣ್ಣ ರೊಚ್ಚಿನಿಂದಲೇ ನುಡಿದ :

'ಹೋಗ್ಹೋಗು, ಜೋಳಿಗೀ ತೊಗೊಂಡು ಭಿಕ್ಷಕ್ಕ ಬಾ ! ಮುಟಿಗಿ-ತುಂಬ ಕಾಳುಹಾಕಿ ಕಳಿಸತೀನಂತ !'

ಅಯ್ಯನವರಿಗಾದ ಸಂತಾಪ ಅವರ ಹೊಟ್ಟೆಯಲ್ಲಿ ಹಿಡಿಸದೆ ಹೊರಹೊಮ್ಮಿತು :

'ಎಲೋ ! ನಾನು ತಪ್ಪಿದೆ. ಮನುಷ್ಯನಲ್ಲದ ಪ್ರಾಣಿಯ ಕೂಡ ಮನುಷ್ಯರಂತೆ ನಡೆದುಕೊಳ್ಳುವ ತಪ್ಪನ್ನ ಮಾಡಿದೆ. ನಾಳೆಯ ದಿನ ನಾನು

ನನ್ನ ಜೋಳಿಗಿನs ತಕ್ಕೊಂಡು ಬರತೀನಿ, ಆಗ ನನಗ ನೀಡಲಿಕ್ಕೆ ನಿನ್ನ ಮನ್ಯಾಗ ಒಂದು ಮುಟಿಗಿ ಕಾಳಾದರೂ ಇರತಾವೇನೋ ನೋಡೋಣಂತ !

' ಎಲ್ಲಾ ಗೊತ್ತದs ಹೋಗೋ ಬಾಯ್ಬಡಕಾ ! ಕತ್ತೆ ಶಾಪಕೊಟ್ಟರ ಆಗಸಗ ಏನ ಆಗತsದ? ಏನೋ, ಅಯ್ಯನವರೂ ಅಂತ ಕೈಕಾದರ, ನಿನ್ನನಾಲಿಗಿ ಉದ್ದ ಆಗತsನs ಹೊಂಟsದ! ಈಗೇನು ಸುಮ್ಮನs ಹೊಂಟುಹೋಗತಿಯೋ ಬೇಕಾಗ್ಯಾವೋ ಭರಮಪ್ಪನ ಪ್ರಸಾದ ! '

ನಿರಾಶೆ, ಸಂತಾಪ, ಕಳವಳ ಇವೆಲ್ಲಾ ಅಡಿವಯ್ಯನವರ ಮನಸಿನ ಮ್ಯಾಲ ಮುತ್ತಿಗೀ ಹಾಕಿದುವು. ಕಣ್ಣಿನಿಂದ ಹನಿಗಳೂ ಉದುರತೊಡಗಿದುವು. ಮುಂದೆ ಅವರು ಒಂದನ್ನೂ ಮಾತಾಡದೇ, ಹಾಂಗs ಮರಳಿ ಬಂದರು. ಆ ಭಾವನೆಯ ಆವೇಶದೊಳಗs ಅವರು ಬಡಜನರ ಬಿಡಾರದೊಳಗ ಹೋದರು. ಅವರಲ್ಲಿಯ ಮುಂದಾಳುಗಳನ್ನೆಲ್ಲ ಕೂಡಿಸಿ ಹೇಳಿದರು!

" ಹುಂ, ಹೊರಡಿರಿ. ಈಗ ನಾವು ಜೋರಣ್ಣನವರ ನಾಲ್ಕೂ ಹಗೆಗಳನ್ನ ತೆಗೆದು ಜೋಳವನ್ನ ಅಳೆದುಕೊಂಡು ಇಲ್ಲಿಗೆ ತರಬೇಕು. ಯಾರಾದರೂ ಅಡ್ಡಿಮಾಡಿದರ, ಅವರ ಕೈಕಾಲುಗಳನ್ನು ಕಟ್ಟಿ ಚೆಲ್ಲಿ, ನಮ್ಮ ಕೆಲಸವನ್ನ ನಾವು ಮುಗಿಸಿಕೊಂಡು ಬರಬೇಕು. ತುಂಟ ಆಕಳಿಂದ ಹಾಲು ಪಡೀಬೇಕಾದರ ಅದಕ್ಕ ದಳೀಕಟ್ಟಲೇಬೇಕು; ಹೊರಳುಬಾಯಿ ಹಿಡಿಯಲೇ ಬೇಕು; ಒತ್ತಾಯ-ದಿಂದ ಹಾಲನ್ನ ಹಿಂಡಿಕೊಳ್ಳಲಿಕ್ಕೇ ಬೇಕು!

ಹಸಿದು ಸಂಕಟಪಡುತ್ತಿದ್ದ ಜನ, ಕೂಳು ಸಿಗುವುದೆಂದರೆ ಅದಕ್ಕಾಗಿ ಕಾರ್ಯಮಾಡದೆ ಬಿಡುವರೆ ? ಗುದ್ದಲಿ-ಸಲಿಕೆಗಳನ್ನೂ, ಬುಟ್ಟೀ-ಚೀಲಗಳನ್ನೂ ತೆಗೆದುಕೊಂಡು ಹಿಂಡುಗಟ್ಟಿ ಹೊರಟರು. ಜೋರಣ್ಣನವರ ಹಗೆಗಳನ್ನು ಅಗಿಯತೊಡಗಿದರು. ಜೋರಣ್ಣಾ, ಆತನ ನಾಲ್ಕೈದು ಜನ ಆಳುಗಳು ಈ ನೂರಾರು ಜನರ ಮುಂದೆ ಏನು ಮಾಡಬಲ್ಲರು? ಆದರೂ ಅವರು ಸುಮ್ಮಗಿರ-ಲಿಲ್ಲ. ಕೊಡಲಿ-ಕುಡುಗೋಲುಗಳನ್ನ ತೆಗೆದುಕೊಂಡು ಕಾಳಗಕ್ಕೇ ಬಂದರು. ನೆರವಿಯಲ್ಲಿಯ ಒಬ್ಬಿಬ್ಬರಿಗೆ ಏಟುಗಳನ್ನೂ ಹಾಕಿದರು. ಕೂಡಲೆ ಗುಂಪಿನ ಜನರು ಜೀವದ ಹಂಗುದೊರೆದು ಅವರನ್ನ ಸುತ್ತುಗಟ್ಟಿದರು. ಗಟ್ಟಿಗರು ಮುಂದುವರಿದು ಹೋಗಿ, ಅವರ ಕೈಯಲ್ಲಿಯ ಕೊಡಲಿ-ಕುಡುಗೋಲುಗಳನ್ನ

ಕಿತ್ತುಕೊಂಡರು. ಇನ್ನು ಕೆಲವರು ಅವರನ್ನ ಹಗ್ಗಗಳಿಂದ ಚೆನ್ನಾಗಿ ಬಿಗಿದುಕಟ್ಟಿ ಚೆಲ್ಲಿದರು.

ಹಗೆಗಳ ಬಾಯನ್ನು ತೆರೆದಾಯಿತು, ತುಂಬಿ ಸೂಸುವ ಹಗೆಗಳು ! ಅಲ್ಲಲ್ಲಿ ದೊಡ್ಡ ದೊಡ್ಡ ಗೂಡಾರಗಳನ್ನು ಹಾಸಿ, ಕಾಳುಗಳನ್ನು ತೆಗೆ-ತೆಗೆದು ಅವುಗಳ ಮೇಲೆ ಸುರುವತೊಡಗಿದರು. ಎಲ್ಲರಿಗೂ ಉತ್ಸಾಹವೇ ಉತ್ಸಾಹ! ಅಡಿವಯ್ಯನವರಂತೂ ಮಿಂಚಿನ ವೇಗದಿಂದ ಅತ್ತಿತ್ತ ತಿರುಗಾಡುತ್ತಿದ್ದರು. ಅನೇಕ ಜನರು, ಮೇಲೆ ಬಿದ್ದ ಕಾಳುಗಳನ್ನು ಅಳೆದಳೆದು ಚೀಲಗಳನ್ನು ತುಂಬತೊಡಗಿದರು. ಜೊರಣ್ಣ, ಅವನ ಆಳುಗಳು, ಬಿದ್ದಲ್ಲಿಯೆ ಬಿದ್ದುಕೊಂಡು ಅಡಿವಯ್ಯನವರನ್ನೂ ಜನರನ್ನೂ ಬಾಯಿಗೆ ಬಂದಂತೆ ಬೈಯುತ್ತಲಿದ್ದರು.

ಎರಡು-ಮೂರು ತಾಸುಗಳಲ್ಲಿಯೇ ಹಗೆಗಳೆಲ್ಲ ತೆರವಾದುವು. ತುಂಬಿದ ಧಾನ್ಯದ ಚೀಲಗಳು ಅನ್ನಛತ್ರದ ಉಗ್ರಾಣದ ಕಡೆಗೆ ಸಾಗತೊಡಗಿದುವು. ಎಲ್ಲ ಚೀಲಗಳೂ ಹೊರಟುಹೋದಮೇಲೆ, ಅಡಿವಯ್ಯನವರು ಮುಂದೆ ನಿಂತು, ಜೋರಣ್ಣನ ಮತ್ತು ಆತನ ಆಳುಗಳ ಕಟ್ಟನ್ನು ಬಿಚ್ಚಿಸಿದರು. ಆಗ ಜೋರಣ್ಣ ಸಿಟ್ಟಿನಿಂದ ಹುಚ್ಚನಂತಾಗಿದ್ದ. ಕಟ್ಟುಗಳನ್ನು ಬಿಚ್ಚಿದೊಡನೆಯೆ ಹತ್ತಿರ-ನಿಂತ ಒಬ್ಬಿಬ್ಬರು ತರುಣರನ್ನು ಹೊಡೆದ; ಗುದ್ದಿದ. ಆಗ ಅಡಿವಯ್ಯನವರು ಮುಂದಾಗಿ ಹೇಳಿದರು :

" ಜೊರಣ್ಣಾ, ಈಗ ನೀನು ಏನನ್ನೂ ಮಾಡಲಾರಿ. ಇದು ತೆಗೆದುಕೊ, ನಿನ್ನ ಕಾಳುಗಳ ಲೆಕ್ಕಾಚಾರ! ಊರ ದೈವದವರೆಲ್ಲ ಕೂಡಿ ಈ ನಿನ್ನಕಾಳುಗಳನ್ನ ತಗೊಂಡಾರ. ಸುಗ್ಗಿ ಮುಗಿಯುವದೇ ತಡ, ನಿನ್ನ ಕಾಳು ನಿನ್ನ ಮನಿಯೊಳಗ ಬಂದು ಬೀಳತಾವ ! "

ಜೋರಣ್ಣ ಆ ಲೆಕ್ಕಾಚಾರದ ಕಾಗದವನ್ನು ಚರಪರನೇ ಹರಿದು ಗಾಳಿ-ಯೊಳಗೆ ತೂರಿಬಿಟ್ಟ. ಆ ಮೇಲೆ ಮೀಸೆ ತಿರುಹುತ್ತ ಮಾತಾಡಿದ:

" ಎಲೇ ತಿರುಕಾ ! ನನ್ನ ಕಾಳನ್ನ ನಾನು ಹ್ಯಾಂಗ ಮುಟ್ಟಿಸಿ-ಗೋತೀನಂಬೂದು ನೋಡತಿರು ! ಈ ನಿನ್ನ ಕಳ್ಳರ ಗುಂಪಿಗೆಲ್ಲಾ ಜೇಲಿನ ರೋಟ್ಟೀ ತಿನಿಸದಿದ್ದರ, ನಾನು ನನ್ನ ತಂದಿಯ ಮಗನೇ ಅಲ್ಲ ! ತಿಳೀತೇನು ? ಮ್ಯಾಲ ಇಂಗ್ಲಿಷ್ ಸರಕಾರ ಆಳತ್ತದಂಬೂದನ್ನ ಮರೀಬ್ಯಾಡ ! "

ಅಡಿವಯ್ಯನವರು ಸುಮ್ಮನೆ ಒಂದು ಉಪೇಕ್ಷೆಯ ನಗೆಯನ್ನ ನಕ್ಕು-

ಜನರೆಲ್ಲರನ್ನೂ ಕರೆದುಕೊಂಡು ಅಲ್ಲಿಂದ ಹೊರಟುನಡೆದರು. ಆಳುಗಳೊಂದಿಗೆ ಬೋರಣ್ಣ ಸಿಡುಗುಟ್ಟುತ್ತಲೆ ಮನೆಯ ಕಡೆಗೆ ನಡೆದ.

ಕಾಳು ಬಂದು ಬೀಳುವುದೇ ತಡ. ಛತ್ರದಲ್ಲಿ ಕೇರುವುದು, ಕುಟ್ಟುವುದು, ಬೀಸುವುದು ನಡೀತು. ಹೆಂಗಸರೆಲ್ಲ ನಗೆಮಾತುಗಳನ್ನಾಡುತ್ತ ರೊಟ್ಟಿಗಳನ್ನ ತಟ್ಟತೊಡಗಿದರು. ನಾಲ್ಕೈದು ದಿನಗಳಿಂದಲೂ ಆಹಾರದ ಮುಖವನ್ನೇ ಕಾಣದ ಜನಜಂಗುಳಿ, ಹೊಟ್ಟೆತುಂಬ ಊಟಮಾಡಿ ತೃಪ್ತಿಯಿಂದ ತೇಗಿತು. ಅಂದು ಜನರ ಬಾಯಲ್ಲೆಲ್ಲ ಬೋರಣ್ಣನ ವಿಷಯಕವಾದ ಮಾತೇ ಮಾತು. ಒಬ್ಬನೆಂದ:

" ಸುಮ್ಮಗs ಒಳ್ಳೇ ಮಾತಿನಿಂದ ಕಾಳು ಕೊಡಬಾರದs ಮಾರಾಯ! ಕೈಕಾಲು ಕಟ್ಟಿಸಿಕೊಂಡು ಮಂದಿಯೊಳಗ ಮಾನಗೇಡು ಆಗೂದಕ್ಕ ಯಾರು ಹೇಳಿದ್ದಾರು! "

ಇನ್ನೊಬ್ಬ ಹೇಳಿದ :

' ಏನs ಆಗಲಿ, ಆ ಪುಣ್ಯೆವಂತನ ಧರ್ಮದಿಂದ ಹೊಟ್ಟೆತುಂಬ ಊಟ ಸಿಕ್ಕಿತು ಹೋಗು! ಅಂವ ಕಾಳು ಕೂಡಿಸಿ ಇಟ್ಟಿರದಿದ್ದರ, ನಮಗೆಲ್ಲೆ ಇಂದ ಅನ್ನ ಸಿಗತಿತ್ತು ? '

ಮತ್ತೊಬ್ಬ ಹೇಳಿದ :

' ಅಂವಗ ಕೂಡಿಸಿ ಇಡಲಾಕ ಯಾರು ಬ್ಯಾಡ ಅಂತಾರೋ! ಇದ್ದ ವರು ಇಲ್ಲದವರಿಗೆ ಯಾಳೇ ಪರಸಂಗ ನೋಡಿ, ಕೊಡತಾ ಇರಬೇಕಪಾ! ಬರೇ ಹಾವಿನ್ಹಾಂಗ ಹೊನ್ನಿನ ಕೊಪ್ಪರಿಗೀ ಕಾಯಕೋತs ಕುಂತರ ಏನ ಉಪೇಗ ಆಗತೈತಿ! '

ಒಬ್ಬ ತರುಣ ಸಿಡಿನುಡಿಗಳಿಂದ ಹೇಳಿದ:

' ಹಾವಿನ ತಲೀ ಜಜ್ಜಿ ಕೊಂದುಹಾಕಿದಂವಗ ಹೊನ್ನಿನ ಕೊಪ್ಪರಿಗೀ ಉಪೇಗ ಆಗೇ ಆಗತೈತಿ! ಕೊಲ್ಲೂದು ಪಾಪs ಅಂತ ಬಿಟ್ಟುಬಿಟ್ಟರ, ಆ ನಂಜಿನ ಹಾವು ಸಾಯೂದು ಯಾವಾಗ–ಹೊನ್ನಿನ ಕೊಪ್ಪರಿಗಿ ಸಿಗೂದು ಯಾವಾಗ? '

ಹೀಂಗs ಅನೇಕ ಪ್ರಕಾರದ ಮಾತು ನಡೆದೂ ಆಸ್ರಿ; ಬೋರಣ್ಣ ದಾರಿಗೆಡಿಸಿದ ಹೆಣ್ಣುಮಕ್ಕಳ ಹತ್ತುಗಡೆಯವರಂತೂ ಮೊದಲೇ ರೊಚ್ಚಿಗೆದ್ದವರು. ಈಗ ಊರಿಗೆಲ್ಲ ವಿರೋಧಿಯಾಗಿ ನಿಂತ ಬೋರಣ್ಣನ ಮೇಲೆ ಬೆಂಕಿಯನ್ನೇ ಕಾರತೊಡಗಿದರು.

ಅದೇ ದಿನ ನಟ್ಟಿರುಳಿನಲ್ಲಿ ಬೋರಣ್ಣನ ಮನೆಗೆ ಬೆಂಕಿಹತ್ತಿತು. ಎಷ್ಟೋ ಹೊತ್ತಿನ ವರೆಗೆ ಜನರಿಗದು ಗೊತ್ತೇ ಆಗಿರಲಿಲ್ಲ. ಗೊತ್ತಾಗಿದ್ದ ಕೆಲವು ಜನರು ಗದ್ದಲ ಮಾಡಿರಲಿಕ್ಕೂ ಇಲ್ಲ. ಅಡಿವಯ್ಯನವರಿಗೆ ಈ ಸಂಗತಿಯು ತಿಳಿದೊಡನೆಯೆ ಅವರು ಗಡಬಡಿಸಿ ಮೇಲಕ್ಕೆದ್ದರು. ಜನರನ್ನೆಲ್ಲ ಗುಂಪು-ಗೂಡಿಸಿ ಬೋರಣ್ಣನ ಮನೆಯ ಕಡೆಗೆ ಓಡಿದರು. ಹೋಗಿ ನೋಡುತ್ತಾರೆ; ಮುಂಬಾಗಿಲ ಚಿಲಕ ಹಾಕಿದೆ. ಮುಮ್ಮನೆ; ನಡುಮನೆಗಳೆಲ್ಲ ಒಂದೆಸವನೆ ಧಗ-ಧಗಿಸುತ್ತಲಿವೆ. ಚಿಲಕ ತೆಗೆದು ಮುಂಬಾಗಿಲನ್ನು ತೆರೆದಾಯಿತು. ಆದರೆ ಒಳಗೆಲ್ಲ ವ್ಯಾಪಿಸಿದ ಉರಿಯಲ್ಲಿ ನುಗ್ಗಿಹೋಗುವುದು ಅಸಾಧ್ಯವಾಗಿಯೇ ಇತ್ತು. ಅಂತಹದರಲ್ಲಿಯೆ ಮೈಗೆಲ್ಲ ಝಳ ತಗುಲಿದ ದೊಡ್ಡದೊಂದು ಎತ್ತು, ಒಳಗಿಂದ ಓಡಿ ಹೊರಗೆ ಬಂದಿತು; ಮುಂದಿನ ಅಂಗಳದಲ್ಲಿ ಹೋಗಿ ಸಂಕಟಪಡುತ್ತ ಬಿದ್ದುಕೊಂಡಿತು.

ಮನೆಯೊಳಗಿಂದ ಯಾವ ಉಲಿವೂ ಒದರಾಟವೂ ಕೇಳಬರುತ್ತಿರಲಿಲ್ಲ. ಬೋರಣ್ಣನ ಹೆಂಡತಿ ಆಗ ಊರಲ್ಲಿ ಇರಲಿಲ್ಲ. ಇದೇ ನಮ್ಮ ಮಲಕಪ್ಪನನ್ನ ಹಡೆಯಲಿಕ್ಕೆಂದು ತವರುಮನೆಗೆ ಹೋಗಿದ್ದಳು. ಮನೆಯಲ್ಲಿ ಇರುವವರೆಂದರೆ ಬೋರಣ್ಣನ ವಿಧವೆಯಾದ ತಂಗಿ ಒಬ್ಬಾಕೆ, ಬೋರಣ್ಣ, ಅವನ ಆಳುಗಳು. ಯಾರ ಉಲಿವೂ ಇಲ್ಲದಿರುವುದು ನಮಗೆಲ್ಲರಿಗೂ ಆಶ್ಚರ್ಯವನ್ನು ಉಂಟು ಮಾಡಿತು.

ಹತ್ತಿ ಉರಿಯುತ್ತಿದ್ದ ಬೆಂಕಿಯನ್ನ ಹದಕ್ಕೆ ತರಬೇಕಾದರೆ ೩-೪ ತಾಸು ಗಳು ಬೇಕಾದುವು. ಒಳಗೆ ಹೋಗಲಿಕ್ಕೆ ಬರುವಂತಾದ ಮೇಲೆ, ಕೆಲವು ಜನ ಗಟ್ಟಿಗರೊಂದಿಗೆ ಅಡಿವಯ್ಯನವರು ಸ್ವತಃ ಹೋಗಿ ನೋಡಿದರು. ಬೋರಣ್ಣ ಹೆಡಮುರಿಕೆ ಕಟ್ಟಿಸಿಕೊಂಡು ಬಿದ್ದುಕೊಂಡಿದ್ದಾನೆ. ಬಿದ್ದಲ್ಲಿಯೇ ಉಸುರುಗಟ್ಟಿ ಅವನ ಪ್ರಾಣವು ಹೊರಟುಹೋಗಿದೆ. ಇನ್ನೊಂದೆಡೆಯಲ್ಲಿ ಇಬ್ಬರು ಆಳುಗಳು ಕೊಲೆಗೊಂಡು ಬಿದ್ದಿದ್ದಾರೆ. ಬೋರಣ್ಣನ ತಂಗಿ ಎಲ್ಲಿಯೂ ಕಾಣುತ್ತಿರಲೇ ಇಲ್ಲ. ಕೊಟ್ಟಿಗೆಯಲ್ಲಿ ಕಟ್ಟಿದ ದನಗಳೆಲ್ಲ ಅಲ್ಲಿಂದಲ್ಲಿಯೇ ಬಿದ್ದು ಸತ್ತು-ಹೋಗಿವೆ. ಅಡಿವಯ್ಯನವರು ಎಲ್ಲವನ್ನೂ ನೋಡಿದರು; ಕಂಬನಿಗರೆಯುತ್ತ. ಬಿಗಿದುಬರುತ್ತಿರುವ ಕಂಠದಲ್ಲಿ ಹೇಳಿದರು :

'ಒಬ್ಬನ ಪಾಪ, ಸುತ್ತುಮುತ್ತಿನ ಪ್ರಾಣಿಗಳ ಮೇಲೂ ಸಂಕಟವನ್ನ ಒಡ್ಡುತ್ತದೆ. ಏನೇ ಆಗಲಿ, ಪಾಪಿಯನ್ನ ಪಾಪಮಾರ್ಗದಿಂದಲೇ ಕಳೆಯುವುದು ನೀತಿಗೆ ಸರಿಯಲ್ಲದ ಮಾತು! ಆಯಿತು, ಮಾತು ಮಿಂಚಿಹೋಯಿತು. ಇನ್ನು ಯಾವ ಮಾತನ್ನಾಡಿದರೂ ಏನು ಪ್ರಯೋಜನ!'

ಸರಿ! ಈ ಸುದ್ದಿ ಸರಕಾರಕ್ಕೆ ತಿಳಿಯದೆ ಇರುವುದೆ? ಬರಗಾಲದಿಂದ ಹಸಿದು ಸಾಯುತ್ತಿರುವ ಜನರ ವ್ಯವಸ್ಥೆಯನ್ನು ಮಾಡಲು ಸಮಯಕ್ಕೆ ಸರಿಯಾಗಿ ಬಾರದೆ ಇದ್ದರೂ, ಈಗ ಸತ್ತವರ ವ್ಯವಸ್ಥೆಯನ್ನು ಮಾಡಲು ಪೋಲೀಸರ ತಂಡವು ಬಂದಿತು. ಊರಲ್ಲಿ ಯಾರನ್ನು ಹಿಡಿದು ಬೆದರಿಸಿ ಕೇಳಿದರೂ ಒಬ್ಬರಿಂದಲೂ ಯಾವ ಸಮಾಚಾರವೂ ಪೋಲೀಸರಿಗೆ ಗೊತ್ತಾಗಲೊಲ್ಲದು. ಸಂಶಯದ ಮೇಲೆ ಹಿಡಿಯಬೇಕೆಂದರೆ ಯಾರನ್ನು ಹಿಡಿಯಬೇಕು, ಎಷ್ಟು ಜನರನ್ನು ಹಿಡಿಯಬೇಕು? ಹಿಡಿದು ಬೆದರಿಸಿದರೂ ಆ ಬರಗಾಲದ ಹೊಟ್ಟೆಗಿಲ್ಲದ ಜನರಿಂದ ಪೋಲೀಸರಿಗೆ ಸಿಕ್ಕಬಹುದಾದರೂ ಏನು? ಅದಕ್ಕಾಗಿಯೇ ಪೋಲೀಸರು ಸಾಂಪ್ರದಾಯಿಕವಾಗಿ ಪಂಚನಾಮೆಯನ್ನು ಮಾಡಿದರು. ಹೊಲದಲ್ಲಿದ್ದ ಬೋರಣ್ಣನ ಆಳುಗಳನ್ನೇ ಸಂಶಯಗ್ರಸ್ತರೆಂದು ಹಿಡಿದುಕೊಂಡು ಹೋದರು. ಇಷ್ಟೆಲ್ಲ ಅನರ್ಥವಾಗಿರುವಾಗ, ಪೋಲೀಸರು ಜೊತೆಯಲ್ಲಿ ತಂದ ಬೇಡಿಗಳನ್ನು ಹಾಗೆಯೆ ಒಯ್ಯಬೇಕೆ?

ಅಡಿವಯ್ಯನವರು ಅನ್ನಛತ್ರವನ್ನೂ ಕೆರೆಯ ಕೆಲಸವನ್ನೂ ಮುಂದು-ವರಿಸಿದರಾದರೂ, ಅದೇಕೊ, ಮೊದಲಿನ ಉತ್ಸಾಹ-ಉಲ್ಲಾಸಗಳು ಇಲ್ಲದವರಾದರು. ಕೆರೆಯ ಕೆಲಸವೆಲ್ಲ ಮುಗಿಯಿತು. ಮಳೆಗಾಲವೂ ಪ್ರಾರಂಭವಾಯಿತು. ನಿಂತುಹೋಗಿದ್ದ ಭೂಮಿಯ ಕಂದಾಯವನ್ನು ಮುಂದಿನ ವರ್ಷವಾದರೂ ವಸೂಲು ಮಾಡಬಹುದೆಂಬ ಆಶೆಯಿಂದಲೋ ಏನೋ, ಸರಕಾರವು ಬರಗಾಲದ ರೈತರಿಗೆಲ್ಲ ಪರಿಹಾರವನ್ನು ಒದಗಿಸಿತು. ಭೂಮಿಯ ಕೆಲಸ ಪ್ರಾರಂಭವಾಗಿ ಕೂಲಿಕಾರರಿಗೂ ಕೆಲಸವು ದೊರೆಯಿತು. ಅನ್ನಛತ್ರದ ಕಾರ್ಯವನ್ನು ಮುಂದೆ ನಡೆಸಬೇಕಾದ ಕಾರಣವೇನೂ ಉಳಿಯಲಿಲ್ಲ. ಅನ್ನಛತ್ರವನ್ನು ನಿಲ್ಲಿಸಿದ ಮರು-ದಿನವೇ ಅಡಿವಯ್ಯನವರು ನನ್ನನ್ನು ಕರೆಯಿಸಿ ಹೇಳಿದರು :

"ಸೆಟ್ಟರೇ, ನಿಮ್ಮಿಂದ ಒಂದು ಕೆಲಸವಾಗಬೇಕಾಗೇದ. ನಾನು ನಾಳೆಯು

ದಿನವೇ ಶ್ರೀಶೈಲಯಾತ್ರೆಗೆ ಹೊರಡಬೇಕಂತ ನಿರ್ಣಯ ಮಾಡೀನ್ರಿ. ನಾನು ಮರಳಿ ಬರಲಿಕ್ಕೆ ಎಷ್ಟು ದಿನಗಳು ಹಿಡಿದಾವೆಂಬುದನ್ನ ಈಗಲೆ ಹೇಳಲಾರೆ. ಬೋರಣ್ಣನಿಂದ ನಾವು ತೆಗೆದುಕೊಂಡ ಕಾಳನ್ನ, ಆತನ ಮನಿತನಕ್ಕ ನಾವು ಮುಟ್ಟಿಸಲಿಕ್ಕೇ ಬೇಕು. ನೀವು ಸುಗ್ಗಿಯೊಳಗ, ಎಲ್ಲಾ ರೈತರಿಗೂ ಅವರವರ ಯೋಗ್ಯತಾದ ಪ್ರಕಾರ ಹಂಚಿಹಾಕಿ, ಅವರಿಂದ ಕಾಳು ಕೂಡಿಸಿ, ಬೋರಣ್ಣನ ಹೆಂಡತಿಗೆ ಸಲ್ಲಿಸೂ ವ್ಯವಸ್ಥಾ ಮಾಡಬೇಕು. ಪಾಪ, ಆಕಿ ಈಗ ಚಿಕ್ಕ ಕೂಸಿನ ತಾಯಿ ! ಗಂಡನ್ನ ಮನಿಮಾರನ್ನ ಕಳಕೊಂಡ ದುಃಖದಾಕಿ ! ಆಕೀ ಗಂಡನ ಪಾಪ ಆಕಿಗೆ ದುಃಖವನ್ನ ಒದಗಿಸಲಿಕ್ಕೆ ಕಾರಣವಾಗೇದೇನೋ ಸರೀನs ಸರಿ ! ನಮ್ಮ ಊರ ಜನರು ಆ ಪಾಪಿಯ ಋಣದೊಳಗ ಇರೂದು ಬ್ಯಾಡ. ನಾವು ತೂಗೋಡದ್ದನ್ನ ಆತನ ಹೆಂಡರು-ಮಕ್ಕಳಿಗೆ ಒಪ್ಪಿಸಿಬಿಡೋಣ ! ನನಗೆ ನಿಮ್ಮ ಮೇಲೆ ಸಂಪೂರ್ಣ ವಿಶ್ವಾಸ. ನೀವು ಇದಿಷ್ಟು ಕೆಲಸವನ್ನ ಮಾಡಿಯೇ ತೀರಬೇಕು."

ನಾನು ಆಗಲಿ—ಎಂದು ಒಪ್ಪಿಕೊಂಡೆ. ಮರುದಿನವೇ ಅಡಿವಯ್ಯನವರು ಶ್ರೀಶೈಲಯಾತ್ರೆಗೆ ಹೊರಟುಬಿಟ್ಟರು. ಆಗ ಹೋದವರು ಎಲ್ಲಿಗೆ ಹೋದರೋ ಏನೋ ಅವರ ಪತ್ತೆಯೇ ಇಲ್ಲ ! ಹೋಗಿ ಎರಡು ತಿಂಗಳಾದ ಮೇಲೆ ಒಂದು ಕಾಗದವನ್ನು ನನಗೆ ಬರೆದರು. ಆ ಕಾಗದವನ್ನು ತುಂಬ ಜೋಪಾನವಾಗಿ ಇಟ್ಟಿದ್ದೇನೆ, ಇದು ನೋಡಿರಿ" ಎಂದು ಮೇಲಗಿರಿ ಶೆಟ್ಟರು ನನ್ನ ಕೈಗೊಂದು ಚಿಕ್ಕ ಕಾಗದವನ್ನು ಕೊಟ್ಟರು. ನಾನದನ್ನು ಬಿಚ್ಚಿ ಓದಿಕೊಂಡೆ; ಅದರಲ್ಲಿ ಬರೆದಿದ್ದುದು ಹೀಗೆ :

"ಸೆಟ್ಟರೆ,

ನಾನು ಹೇಳಿದ ವಿಷಯವನ್ನು ನೀವು ಮರೆಯಲಾರಿರೆಂದು ನಂಬಿದ್ದೇನೆ. ನನಗಿನ್ನು ಊರಿಗೆ ಮರಳಿ ಬರುವ ಅಪೇಕ್ಷೆಯಿಲ್ಲ. ಬೋರಣ್ಣನ ಜೀವನದ ನಾಶಕ್ಕೆ ನಾನೇ ಕಾರಣನೆಂದು ನನಗೆ ಆಗಾಗ ಎನಿಸುತ್ತಲಿದೆ. ನನ್ನ ಉದ್ದೇಶ ಒಳ್ಳೆಯದಿದ್ದರೂ, ಅದನ್ನು ಸಾಧಿಸಲಿಕ್ಕೆ ನಾನು ಹಿಡಿದ ದಾರಿ ಸರಿಯಾಗಿರಲಿಲ್ಲ. ನಾನು ಜನರನ್ನು ರೇಗಿಸದೆ ಹೋಗಿದ್ದರೆ, ಜನರೇನೋ ಉಪವಾಸದಿಂದ ಸಾಯುತ್ತಿದ್ದರು; ಆದರೆ ನಾನು ಅವರಲ್ಲಿ ತುಂಬಿದ ರಜೋವೃತ್ತಿ ಒಬ್ಬ ಪಾಪಿಯೊಂದಿಗೆ ಹಲವು ನಿಷ್ಪಾಪಜೀವಿಗಳ ಬದುಕಿಗೂ ಮುಳುವಾಗಿ ನಿಂತಿತು. ಇದಕ್ಕಾಗಿ

ಯೋಗ್ಯ ಪ್ರಾಯಶ್ಚಿತ್ತವನ್ನು ನಾನು ಪಡೆಯಲೇ ಬೇಕು. ಪಾಪವನ್ನು ಮಾಡ ದಿರುವುದೆಂದರೆಯೆ ನಿಜವಾದ ಮನುಷ್ಯತ್ವವು.

ತಮ್ಮ ಪ್ರೀತಿಯವ

**ಅಡಿವಯ್ಯಸ್ವಾಮಿ ಹಿರಿಯಮಠ"**

ನಾನು ಆ ಪತ್ರವನ್ನು ಮತ್ತೆ ಮತ್ತೆ ಎರಡು ಮೂರು ಸಲ ಓದಿಕೊಂಡೆ. ಮೇಲಗಿರಿಸೆಟ್ಟರ ಮುದುಗಣ್ಣುಗಳಿಂದ ಒಂದೊಂದೆ ಹನಿ ಕಂಬನಿಗಳು ಇಳಿದು ದನ್ನು ನೋಡಿದೆ. ಪತ್ರವನ್ನು ಕೆಳಗಿಟ್ಟು ನಾನೂ ನಸುವೇಳೆ ಸುಮ್ಮನೆ ಕುಳಿತೆ. ನನ್ನ ಅಂತರಂಗದೆದುರು ಅಡಿವಯ್ಯನವರದೊಂದು ಅಜ್ಞಾತಚಿತ್ರವು ಮೂಡಿ ಮೂಡಿ, ಅವರ ವಿಷಯದಲ್ಲಿ ಒಂದು ಬಗೆಯ ಆದರಭಾವವನ್ನು ಬೆಳೆಯಿಸ ತೊಡಗಿತ್ತು. ಆಗಲೇ ಮೇಲಗಿರಿಸೆಟ್ಟರು ಮತ್ತೆ ತಮ್ಮ ಮಾತನ್ನು ಆರಂಭಿ ಸಿದರು.

"ನೋಡು ಕಿಟ್ಟಣ್ಣಾ, ಅಡಿವಯ್ಯನವರಿಗೆ ಕೊಟ್ಟ ವಚನವನ್ನ ನಾನು ಇನ್ನೊಂದು ರೀತಿಯಿಂದ ನಡೆಯಿಸಬೇಕೆಂದು ವಿಚಾರ ಮಾಡಿದೆ. ಬೋರಣ್ಣ ನನಗೆ ದೂರದ ದಾಯಾದಿಯೆಂದು ಹೇಳಿದೆನಲ್ಲ! ನನಗೆ ಮುಂದೆ ಮಕ್ಕ ಳಾಗುವ ಆಶೆ ಇರಲಿಲ್ಲ. ಆದ್ದರಿಂದ, ನನ್ನ ಬದುಕನ್ನೆಲ್ಲ ಬೋರಣ್ಣನ ಮಗನಿಗೆ ಕೊಟ್ಟು, ಊರ ಜನರ ತಲೆಯ ಮೇಲಿರುವ ಬೋರಣ್ಣನ ಸಾಲವನ್ನು ತೀರಿಸ ಬೇಕೆಂದು ಆಗಲೇ ನಿಶ್ಚಯಮಾಡಿದೆ. ಮುಂದೆ ೩-೪ ವರ್ಷಗಳ ಮೇಲೆ ಮಲಕಪ್ಪನನ್ನು ತಂದು ನಮ್ಮ ಮನೆಯಲ್ಲಿಯೆ ಇರಿಸಿಕೊಂಡೆ. ಆತನ ತಾಯಿ ಕೂಡ ನಮ್ಮ ಈ ಮನೆಯಲ್ಲಿಯ ಶಿವನ ಪಾದದೆಡೆ ಸೇರಿದಳು. ನನ್ನ ಹೆಂಡತಿಯ ಒಲವು ತನ್ನ ತವರಮನೆಯ ಬಳಗದ ಕಡೆಗಿತ್ತು. ಆದರೆ ಎಲ್ಲ ಮಾತನ್ನೂ ವಿವರಿಸಿ ಹೇಳಿದ ಮೇಲೆ, ಅವಳೂ ನನ್ನ ಅಭಿಪ್ರಾಯವನ್ನು ಒಪ್ಪಿಕೊಂಡು, ಮಲಕಪ್ಪನನ್ನು ಹೊಟ್ಟೆಯ ಮಗನಂತೆಯೆ ನೋಡಿಕೊಂಡು ಬಂದಳು. ಅವನಿಗೆ ಎಲ್ಲ ಐಶ್ವರ್ಯವನ್ನೂ ಒಪ್ಪಿಸಿ ಆಯಿತು. ಆದರೇನು, ತಂದೆಯ ಗುಣ ಮಗ ನಲ್ಲಿ ಇಳಿದೇಬಿಟ್ಟಿದೆ. ಪಾಪ, ಆ ಬಡವ ಏಳುವರೆ ಚಟಾಕು ಬೇಡಿದರೆ, ಈತ ಕೊಡಲಿಕ್ಕೆ ಒಪ್ಪಲಿಲ್ಲ. ಏಳು ಚಟಾಕಿನಂತೆಯೆ ಕೊಟ್ಟರೂ ಒಳ್ಳೆಯ ಧಾನ್ಯ ವನ್ನು ಕೊಡಬಾರದೆ? ಕಸುರು-ಕಸ ಕೂಡಿದ ಕಾಳನ್ನು ಕೊಟ್ಟ. ಅದಕ್ಕೇ

ನಾನು ಆಗಲೇ ಹೇಳಿದೆ: ‘ಈ ಜನಕ್ಕ ಗಳಿಸೂದು ಅಂದರ ಯಾತಕ್ಕ— ಅಂಬೂದss ಗೊತ್ತಿಲ್ಲ’ ಅಂತ. ಹೌದೋ ಅಲ್ಲವೋ ನೋಡು ಕಿಟ್ಟಣ್ಣಾ ನನ್ನ ಮಾತು!” ಎಂದು ಮೇಲಗಿರಿಸೆಟ್ಟರು ಮತ್ತೆ ಕೆಮ್ಮಲು ತೊಡಗಿದರು.

ನನಗಾಗ ಮೇಲಗಿರಿಸೆಟ್ಟರು ಒಬ್ಬ ಸಾಮಾನ್ಯ ಮುದುಕನಾಗಿ ಕಾಣ ಲಿಲ್ಲ. ಪುರಾಣಕಾಲದ ಒಬ್ಬ ಮಹರ್ಷಿಯಂತೆ ಕಂಡರು. ಅವರ ಕೆಮ್ಮು ಮಾತ್ರ ಅವರ ಮನುಷ್ಯತ್ವವನ್ನು ನೆನಪಿಗೆ ತಂದುಕೊಡುತ್ತಿತ್ತು. ‘ಅಯ್ಯೋ, ಇಂತಹ ಅರಳಿದ ಜೀವನಕ್ಕೂ ಮರಣವು ಇದೆಯಲ್ಲವೆ?’ ಎಂದು ಮನದಲ್ಲಿಯೆ ಮರುಗಿದೆ.

# ಹುಳುಹತ್ತಿದ ಹಳ್ಳಿ



ನೀಲಪ್ಪನ ಮನೆತನವೆಂದರೆ ನಮ್ಮ ಹಳ್ಳಿಯ ಜನರಿಗೆಲ್ಲ ಬೇಕಾದುದು. ಎಂಟು ಎತ್ತಿನ ಕಮತ ನೀಲಪ್ಪನದು. ಆಳುಗಳು ಎಂಟೂ ಎತ್ತುಗಳನ್ನು ಬಿಟ್ಟುಕೊಂಡು ಹೊಲಗೆಲಸಕ್ಕೆಂದೋ, ಹಳ್ಳಕ್ಕೆ ನೀರು ಕುಡಿಸಲಿಕ್ಕೆಂದೋ ತೆಗೆದುಕೊಂಡು ಹೋಗುವಾಗ, ದಾರಿಯಲ್ಲಿ ಹೋಗು-ಬರುವವರೆಲ್ಲ ನಿಂತು-ನಿಂತು ಅವುಗಳ ಬೆಡಗು-ಸಡಗರಗಳನ್ನು ನೋಡುವರು. ಎಲ್ಲಕ್ಕಿಂತ ಮುಂದೆ-ಹೋಗುವ ಬಿಳಿಯೆತ್ತಿನ ಜೋಡು, ನಮ್ಮ ಹಳ್ಳಿಗೇ ಮನ್ನಣೆಯನ್ನು ತಂದು-ಕೊಟ್ಟುದು. ಜಿಲ್ಲಾ ಬೋರ್ಡಿನವರು ಏರ್ಪಡಿಸಿದ ಎತ್ತುಗಳ ಸಾಮರ್ಥ್ಯದ ಮೇಲಾಟದಲ್ಲಿ ಮೊದಲನೆಯ ಕ್ರಮಾಂಕವನ್ನು ಪಡೆದು, ಅವು ನೀಲಪ್ಪನಿಗೆ ಬಹುಮಾನವನ್ನು ದೊರಕಿಸಿಕೊಟ್ಟಿದ್ದುವು. ಆ ದಿನ ನಮ್ಮ ಊರಜನರಿಗೆಲ್ಲ ಎಂತಹ ಉತ್ಸಾಹ ! ಕರಡಿಯ ಮಜಲು, ರಣಹಲಿಗೆಗಳ ವಾದ್ಯವೈಭವ-ದೊಂದಿಗೆ ಜನರು ಹಿಂಡುಗಟ್ಟಿಹೋಗಿ, ಊರಸೀಮೆಯಲ್ಲಿಯೆ ಎದುರುಗೊಂಡು ಗೆದ್ದ ಎತ್ತುಗಳನ್ನು ಮೆರೆಸುತ್ತ ಬಂದರು. ಮೆರೆವಣಿಗೆಯ ಕಾಲದಲ್ಲಿ ನಮ್ಮೂರಿನ ಒಕ್ಕಲಿಗರ ಮನೆ-ಮನೆಗಳಲ್ಲಿಯ ಮುತ್ತೈದೆಯರೂ ಎತ್ತುಗಳಿಗೆ ಆರತಿಗಳನ್ನು ಬೆಳಗಿದರು. ಎತ್ತುಗಳ ಹಿಂದಿನಿಂದಲೆ ಹೊರಟಿದ್ದ ನೀಲಪ್ಪನ ಮುಖವು ಹೆಮ್ಮೆ-ಹಿಗ್ಗುಗಳಿಂದ ಅರಳಿ ಇಷ್ಟಗಲವಾಗಿತ್ತು. ಆಗಾಗ ತನ್ನ 'ಹವಳ' 'ಮುತ್ತು'ಗಳನ್ನು ಅವನು ಪ್ರೀತಿ-ಅಭಿಮಾನಗಳಿಂದ ನೋಡುತ್ತಿದ್ದನು.

ಎಂಟೆತ್ತಿನ ಕಮತಿಗನಾದರೂ ನೀಲಪ್ಪನ ಉಡುಗೆ-ತೊಡಿಗೆಗಳಲ್ಲಿ ಎಷ್ಟೊಂದು ನಿರಾಡಂಬರ ! ಕೈನೂಲಿನಿಂದ ಮಾಡಿದ ಕೆಂಪು ದಬ್ಬಣದಂಚಿನ ಆರುಮೊಳದ ಧೋತರವನ್ನು ಆತ ಉಟ್ಟಿದ್ದ. ಮೈಯಲ್ಲಿ ಕೊಡೆಯರಿವೆಯ ಬಗಲುಕಸೆಯ ಅಂಗಿಯನ್ನು ತೊಟ್ಟಿದ್ದ. ತಾಡಪತ್ರಿಯ ಉಂಡಿರುಮಾಲನ್ನು ತಲೆಗೆ ಸುತ್ತಿದ್ದ. ಬಲಗಿವಿಯಲ್ಲಿ ಮುತ್ತು ಕಳಚಿ ಹೋದ ಬಾವಲಿಯ ಚಿನ್ನದ

ಉಂಗರವೊಂದು ತೂಗಾಡುತ್ತಿತ್ತು. ಅಡಕೆಲೆ ತಿಂದುದರಿಂದ ತುಟಿಗಳು ಕೆಂಪಾಗಿದ್ದುವು. ಅರುವತ್ತು ವರ್ಷದ ವಯಸ್ಸಿನವನಾಗಿದ್ದರೂ, ಇನ್ನೂ ಹರಯದ ಮುದುಕನೇ ನೀಲಪ್ಪ. ದುಡಿಮೆಯಿಂದ ಹುರಿಗೊಂಡ ಮೈಯವನದು. ಬಾಯಲ್ಲಿಯ ಒಂದೂ ಹಲ್ಲು ಅಲುಗಾಡುತ್ತಿದ್ದಿಲ್ಲ ಕೂಡ. ಆ ಗಂಡುಗಾಡಿಯನ್ನು ಹೊರಹೊಮ್ಮಿಸುವ ಕಲ್ಲಿಮಿಸೆಗಳಲ್ಲಿ ಅಲ್ಲೊಂದು ಇಲ್ಲೊಂದು ನರೆಗೂದಲು ಕಾಣುತ್ತಿದ್ದುವಷ್ಟೆ !

ಎತ್ತುಗಳ ಮೆರೆವಣಿಗೆ ನಮ್ಮ ಮನೆಯ ಮುಂದೆಯೂ ಬಂದಿತು. ನಮ್ಮ ತಾಯಿಯೂ ಎತ್ತುಗಳೆದುರು ನೀರುನೀಡಿ, ನಿವಾಳಿಯನ್ನು ತೆಗೆದು, ಅರಿಸಿಣ-ಕುಂಕುಮವನ್ನು ಏರಿಸಿ, ಎತ್ತುಗಳಿಗೆ ಆರತಿಯನ್ನು ಮಾಡಿದಳು. ಆಗ ನೀಲಪ್ಪನಿಗಾದ ಹಿಗ್ಗು ಅವನ ಹೊಟ್ಟೆಯಲ್ಲಿ ಹಿಡಿಸದೇ ಹೋಯಿತು. ವೇಗವಾಗಿ ಹೆಜ್ಜೆಗಳನ್ನು ಹಾಕುತ್ತಲೆ ಮುಂದೆ ಬಂದು ನಮ್ಮ ತಾಯಿಯ ಕಾಲನ್ನು ಮುಟ್ಟಿ ನಮಸ್ಕಾರ ಮಾಡಿದನು; ಹಾಗೆಯೆ ಮುಂಗಟ್ಟಿಯ ಮೇಲೆ ನಿಂತ ನಮ್ಮ ತಂದೆಯವರನ್ನು ಕಂಡು, ರಭಸದಿಂದಲೇ ನುಗ್ಗಿಬಂದು ಅವರಿಗೆ ನಮಸ್ಕಾರ ಮಾಡಿದನು. ತಂದೆಯವರು ನೀಲಪ್ಪನನ್ನು ಪ್ರೀತಿ-ಸಲುಗೆಗಳಿಂದ ಕೈಹಿಡಿದೆತ್ತಿ ಮನೆಯೊಳಗೆ ಕರೆದುಕೊಂಡು ಬಂದರು. ಹಾಸಿದ್ದ ಜಮುಖಾನೆಯ ಮೇಲೆ ಅವನನ್ನು ಒತ್ತಾಯದಿಂದ ಕುಳ್ಳಿರಿಸಿದರು. ಅಲ್ಲಿಯೇ ಗೂಟದ ಮೇಲೆ ಇರಿಸಿದ್ದ ಜರಿಯ ಅಂಚಿನ ಉತ್ತರೀಯದ ಗಳಿಗೆಯನ್ನು ಮುರಿದು ನೀಲಪ್ಪನ ಮೈಮೇಲೆ ತಾವಾಗಿಯೆ ಹೊದಿಸಿದರು. ಉತ್ತರೀಯದ ಬೆಲೆ ಬಹಳವಾದರೆ ಏಳೆಂಟು ರೂಪಾಯಿಗಳದಿರಬಹುದು. ನೀಲಪ್ಪ ಮನಸ್ಸು-ಮಾಡಿದರೆ, ಇಂತಹ ನೂರು ಉತ್ತರೀಯಗಳನ್ನು ಒಮ್ಮೆಲೆ ಕೊಳ್ಳುವಷ್ಟು ಅನುಕೂಲವಂತನು. ಆದರೆ ನಮ್ಮ ತಂದೆಯವರು ಕೈಯಾರೆ ಹೊದಿಸಿದ ಆ ಉತ್ತರೀಯವು ಆತನಿಗೆ ಬೆಲೆಯಿಲ್ಲದಂತಹುದು. ಎಂತಲೇ ಆತನಿಗಾದ ಅತಿಶಯವಾದ ಆನಂದವು, ಅವನ ಹೃದಯದಲ್ಲಿ ತುಂಬಿ ಸಿಂತಿತ್ತು. ಕೃತಜ್ಞತೆ ತುಂಬಿದ ಕಣ್ಣುಗಳಿಂದ ತಂದೆಯವರನ್ನು ನೋಡಿದ. ಮತ್ತೊಮ್ಮೆ ಕಾಲು-ಮುಟ್ಟಿ ನಮಸ್ಕರಿಸಿ, ಮೆರೆವಣಿಗೆಯಲ್ಲಿ ಸೇರಿ ಮುಂದೆ ಸಾಗಿದ.

ನಮ್ಮ ತಾಯಿಗೆ ತುಂಬ ಆಶ್ಚರ್ಯ. ನೀಲಪ್ಪ: ಹೊರಟು ಹೋದ ಮೇಲೆ ಆಕೆ ತಂದೆಯವರನ್ನು ಕುರಿತು ನುಡಿದಳು :

" ಸರಿ ! ನಿಮಗೆ ನೀಲಪ್ಪನೆಂದರೆ ಆಯಿತು; ಎಲ್ಲವನ್ನೂ ಮರೆತೇ ಬಿಡುತ್ತೀರಿ. ಅಳಿಯನಿಗೆ ಕಳುಹಬೇಕೆಂದು ತರಿಸಿದ ಉತ್ತರೀಯವನ್ನ ನೀಲಪ್ಪನಿಗೆ ಹೊದಿಸಿ ಕಳುಹಿದಿರಿ. ಇನ್ನು ಅಳಿಯನಿಗೆ ಏನು ಕಳುಹುವವರು? ನಾಳೆಯ ದಿನವೇ ನೂಲಹುಣ್ಣಿವೆಯ ಉಡುಗರೆ ಕಳುಹಬೇಕಲ್ಲವೆ ? "

ತಂದೆಯವರು ಮೆಲುನಗೆ ನಗುತ್ತ ಹೇಳಿದರು :

" ಓ, ಹುಚ್ಚೀ !ಅಳಿಯನ ನೂಲಹುಣ್ಣಿವೆಯ ಉಡುಗೊರೆಯೇ ನಿನಗೆ ಹೆಚ್ಚಿನದು ! ನೀಲಪ್ಪನಿಗೆ ಉಡುಗೊರೆ ಕೊಡಬೇಕಾದ ಇಂತಹ ಸಂದರ್ಭ ಇನ್ನೆಂದು ಸಿಕ್ಕೀತು ಹೇಳು ನಮಗೆ ? ಅಂತೂ ನಿನ್ನ ನೂಲಹುಣ್ಣಿವೆಯ ಅಳಿಯನ ಉಡುಗೊರೆ ನನಗೆ ಒಂದು ರೀತಿಯಿಂದ ಉಪಕಾರವನ್ನೇ ಮಾಡಿತು ನೋಡು ! ಅದಿಲ್ಲದೆ ಹೋಗಿದ್ದರೆ, ಜರಿಯ ಉತ್ತರೀಯವನ್ನು ನಾನೆಲ್ಲಿ ತರಿಸು-ತ್ತಿದ್ದೆ ? ತರಿಸಿದುದು ಒಳ್ಳೆಯ ಸಮಯದಲ್ಲಿ ಉಪಯೋಗವಾದಂತಾಯಿತು. ಅಳಿಯನಿಗೆ ಉತ್ತರೀಯದ ಬದಲು ಇನ್ನೇನಾದರೂ ಕಳುಹಬಹುದಲ್ಲ ! "

ತಾಯಿ ತಗ್ಗಿದ ಧ್ವನಿಯಲ್ಲಿ ಹೇಳಿದಳು :

" ಇನ್ನೇನು ಕಳುಹುತ್ತೀರೋ ನೀವೇ ನೋಡಿರಿ ! ನೂಲಹುಣ್ಣಿವೆಯ ಉಡುಗೊರೆಯನ್ನಂತೂ ಕಳುಹಲೇಬೇಕು ನಾಳೆ."

ತಂದೆಯವರ ಮನಸ್ಸನ್ನು ಇದಾವುದೂ ಹಿಡಿಯಲೇ ಇಲ್ಲ. ನೀಲಪ್ಪನ ಎತ್ತುಗಳ ವಿಜಯವು ತಮ್ಮ ವಿಜಯವೇ ಎಂಬಂತಹ ಉಬ್ಬು ಅವರನ್ನು ಮುತ್ತಿ-ಮುಸುಕಿಬಿಟ್ಟಿದ್ದಿತು.

ನೀಲಪ್ಪ ನಮಗೆ ದೂರದವನೇನೂ ಅಲ್ಲ. ನಮ್ಮ ಒಡ್ಡಿನ ಹೊಲವನ್ನು ಬಹುದಿನಗಳಿಂದಲೂ ಮಾಡುತ್ತ ಬಂದ ರೈತನವನು. ತನ್ನ ದುಡಿಮೆಯಿಂದ ಅವನು ಸ್ವಂತದ ಭೂಮಿಯನ್ನು ಸ್ವಲ್ಪ ಗಳಿಸಿದ್ದನಾದರೂ, ನಮ್ಮ ಒಡ್ಡಿನ ಹೊಲವನ್ನು ಅವನೇನೂ ಬಿಟ್ಟಿರಲೇ ಇಲ್ಲ. ಆ ಭೂಮಿತಾಯಿಯ ದಯೆ-ಯಿಂದಲೇ ತನ್ನ ಸಿರಿ-ಸಂಪತ್ತಿನ ಬೆಳೆವಣಿಗೆಯಾಗಿದೆಯೆಂದು ಅವನಿಗೆ ಸಂಪೂರ್ಣವಾದ ಶ್ರದ್ಧೆ. ಯಾವ ಹೊಲ ಎಷ್ಟೇ ಬೆಳೆದಿರಲಿ, ಅದರ ರಾಶಿ ಒಡ್ಡಿನ ಹೊಲದಲ್ಲಿಯೆ ಆಗಬೇಕೆಂದು ನೀಲಪ್ಪನ ಅಪೇಕ್ಷೆ. ಆದುದರಿಂದಲೇ ವರು-ವರುಷವೂ ನೀಲಪ್ಪನ ಕಣವು ನಮ್ಮ ಒಡ್ಡಿನ ಹೊಲದಲ್ಲಿಯೆ ಆಗು-

ತ್ತಿದ್ದಿತು. ಅವನ ಭಾವನೆಯ ಬಲವೋ ಏನೋ ! ನೀಲಪ್ಪನ ರಾಶಿ ವರುಷ ದಿಂದ ವರುಷಕ್ಕೆ ಹುಲುಸಿನದಾಗುತ್ತ ನಡೆದಿತ್ತು .

ಊರಿಗೆ ದೊಡ್ಡ ಒಕ್ಕಲಾದರೂ ನೀಲಪ್ಪ ನಮ್ಮ ಮನೆಯವರೊಂದಿಗೆ ರೈತನ ನಮ್ರತೆಯಿಂದಲೇ ನಡೆದುಕೊಳ್ಳುತ್ತಿದ್ದ. ನಾವೆಂದೂ ಹೊಲಕ್ಕೆ ಹೋಗ ದಿದ್ದರೂ ಅಚ್ಚುಕಟ್ಟಾಗಿ ನಮ್ಮ ಪಾಲಿನ ಧಾನ್ಯ-ದವಸಗಳು ಮನೆಗೆ ಬಂದು ಬೀಳುತ್ತಿದ್ದುವು. ಬೇರೆಯ ಹೊಲದಲ್ಲಿ ಬೆಳೆದ ಅಪೂರ್ವ ಪದಾರ್ಥಗಳಲ್ಲಿಯೂ ಅವನು ನಮಗೆ ಪಾಲನ್ನು ಸಲ್ಲಿಸದೆ ಇರುತ್ತಿರಲಿಲ್ಲ; ನಮ್ಮ ತಂದೆಯವರು ಬೇಡಬೇಡವೆಂದು ಹೇಳಿದರೂ ಸಲುಗೆಯ ಒತ್ತಾಯದಿಂದ ಮನೆಯಲ್ಲಿ ಸುರುಹಿ ಹೋಗುವನು. ಇದೆಲ್ಲ ಕನಸಿನ ರಾಜ್ಯದ ಮಾತಲ್ಲ; ನನ್ನ ಚಿಕ್ಕತನದಲ್ಲಿ ನಾನು ಕಣ್ಣಾರೆ ಕಂಡ ಸಂಗತಿ.

ನೀಲಪ್ಪನಿಗೆ ಓದು-ಬರೆಹ ಏನೂ ಗೊತ್ತಿರಲಿಲ್ಲ. ಆದರೂ ಮನೆಯ ಎಲ್ಲ ವ್ಯವಹಾರವನ್ನೂ ತಾನೇ ನೋಡಿಕೊಳ್ಳುವನು. ಪ್ರತಿವರ್ಷ ನೂರುನೂರು ಚೀಲ ಧಾನ್ಯಗಳನ್ನು ಬೆಳೆಯುವನು; ಸಾವಿರಾರು ರೂಪಾಯಿಗಳ ಹತ್ತಿ-ಮೆಣಸಿನಕಾಯಿಗಳನ್ನು ಬೆಳೆಯುವನು. ಸಂತೆ-ಪೇಟೆ ಮಾಡುವನು. ಊರಲ್ಲಿ ಜನರಿಗೆ ಸಾಲ, ಕೈಗಡ ಕೊಡುವನು. ಬಡ-ಬಗ್ಗರಿಗೆ ದಾನ-ಧರ್ಮ ಮಾಡು ವನು. ಊರ ಜಾತ್ರೆ-ಹಬ್ಬಗಳಲ್ಲಿ ಮುಂದಾಳಾಗಿ ನಿಂತು ಕಾರ್ಯವನ್ನು ಮಾಡುವನು. ಯಾವುದರಲ್ಲಿಯೂ ತಂಟೆಯಿಲ್ಲ, ತಗಲು ಇಲ್ಲ; ಮೋಸವಿಲ್ಲ, ಮರೆಯಿಲ್ಲ. ಆದುದರಿಂದಲೇ ಊರಲ್ಲಿ, ಎಲ್ಲರಿಗೂ ನೀಲಪ್ಪ ಬೇಕಾದವನೇ. ಎಲ್ಲರೂ ಅವನಿಂದ ತಮ್ಮ ಲೌಕಿಕ ವ್ಯವಹಾರಗಳಿಗಾಗಿ ಸಲಹೆ-ಸಹಕಾರಗಳನ್ನು ಅಪೇಕ್ಷಿಸುವವರೆ ! ಊರಲ್ಲಿಯ ಎಷ್ಟೋ ಮನೆತನದ ಜಗಳ-ಕದನಗಳು ನೀಲಪ್ಪನ ಮಧ್ಯಸ್ಥಿಕೆಯಿಂದಲೇ ಬಗೆಹರಿಯುತ್ತಿದ್ದುವು.

ಇದೆಲ್ಲ ನಾಲ್ವತ್ತು ವರುಷಗಳ ಹಿಂದಿನ ಮಾತು. ಆಗ ನಮ್ಮ ಹಳ್ಳಿಯ ಯಾವ ವ್ಯಾಜ್ಯವೂ ಪಟ್ಟಣದ ಕೋರ್ಟು-ಕಚೇರಿಗೆ ಹೋಗುತ್ತಿರಲಿಲ್ಲ. ಚಹಾ-ಕಾಫಿಗಳ ಹೆಸರನ್ನು ಕೂಡ ನಮ್ಮ ಹಳ್ಳಿಗರು ಕೇಳಿರಲಿಲ್ಲ. ಗಾಂಧಿಯವರಂತಹ ಉಪದೇಶಕರಾರೂ ಇರತಿಲ್ಲವಾದರೂ, ಮನೆ-ಮನೆಗಳಲ್ಲಿಯೂ ನೂಲುವ ರಾಟೆಗಳು ತಿರುಗುತ್ತಿದ್ದುವು. ನಮ್ಮೂರಿನ ನೇಕಾರರು ಕೈನೂಲಿನ ಬಟ್ಟೆ

ಗಳನ್ನೇ ನೋಯುತ್ತಿದ್ದರು. ಜನರೆಲ್ಲ ಆ ಉರುಟುಬಟ್ಟೆಗಳನ್ನೇ ಉಡುತ್ತಿದ್ದರು-ತೊಡುತ್ತಿದ್ದರು. ಉಗೆಬಂಡಿ-ಮೋಟಾರುಗಳ ವಿಷಯವು ನಮ್ಮೂರಲ್ಲಿಯ ಬಹುಜನರಿಗೆ ಪವಾಡದ ಕಥೆಯೇ ಆಗಿತ್ತು. ಇದ್ದ ಮೂರು ನಾಲ್ಕು ಅಂಗಡಿ ಗಳಲ್ಲಿ ಮನೆತನದ ನಿತ್ಯದ ಉಪಯೋಗಕ್ಕೆ ಬೇಕಾಗುವ ಜೀನಸುಗಳಲ್ಲದೆ ಇನ್ನೇನೂ ಸಿಗುತ್ತಿರಲಿಲ್ಲ. ಜೋಗಿ-ಗೊಂದಲಿಗರ ಕಥೆ, ದಾಸರ ಆಟ, ಕಿಳ್ಳಿ-ಕೇತರ ಆಟ, ರಾಧಾನ ಆಟ ಇವೇ ಜನರಿಗೆ ಪ್ರೀತಿಯ ಮನೋರಂಜಕ ಸಾಧನ ಗಳಾಗಿದ್ದುವು. ಗೌಡರ ಮನೆಯಲ್ಲಿರುವ ಆ ಒಂದೇ ಒಂದು ಕಾಜಿನ ತೂಗು-ದೀಪ, ಜನರ ಕುತೂಹಲದ ಸಂಗತಿಯಾಗಿತ್ತು. ಎಲ್ಲರ ಮನೆಯ ಮದುವೆಯ ಹಂದರವನ್ನು ಆ ತೂಗುದೀಪವೇ ಅಲಂಕರಿಸುತ್ತಿತ್ತು. ಅದನ್ನು ಮದುವೆಯ ಮನೆಗೆ ಒಯ್ದು ದೀಪ ಅಂಟಿಸಿ ಹಂದರದಲ್ಲಿ ತೂಗುಬಿಡುವ ಗೌಡರ ಮನೆಯ ಆಳು ಸಿದ್ದಪ್ಪನಿಗೆ ಅದೆಷ್ಟು ಬಿಂಕ! ಅದೆಂತಹ ಬಡಿವಾರ! ತಾನು ಮಾಡು-ತ್ತಿರುವ ಕೆಲಸವನ್ನು, ಹುಡುಗರೆಲ್ಲ ತವಕಗೊಂಡು ನೋಡಲು ಹತ್ತಿರ ಹೋದರೆ, ಅವರನ್ನೆಲ್ಲ ಬೆದರಿಸಿ ದೂರ ಅಟ್ಟುವನು. ಆ ತೂಗುದೀಪಕ್ಕೆ ದೀಪವನ್ನಂಟಿಸುವ ಚಮತ್ಕಾರವು ತನ್ನ ಹೊರತು ಇನ್ನಾರಿಗೂ ಗೊತ್ತಾಗಬಾರದೆಂದು ಸಿದ್ದಪ್ಪನ ಅಪೇಕ್ಷೆ. ಈ ದೀಪವನ್ನಂಟಿಸಿಕೊಡುವ ಮರ್ಯಾದೆಗಾಗಿ ಆತನಿಗೆ ಮದು-ವೆಯ ಮನೆಯಿಂದ ಹಣದ ಕಾಣಿಕೆ ದೊರೆಯುತ್ತಿತ್ತು. ಎರಡು ದಿನ ಹೋಳಿಗೆ ಹುಗ್ಗಿಗಳ ಸವಿಯೂಟ ದೊರೆಯುತ್ತಿತ್ತು. ಸಿದ್ದಪ್ಪ ದೀಪ ಹಚ್ಚುವಾಗ ಒಡೆದ ಗ್ಲಾಸಿನ ಬೆಲೆಯನ್ನು ಗೌಡರು ತೆರುತ್ತಿದ್ದರಾದರೂ, ಉಟ-ಕಾಣಿಕೆಗಳಿಗೆ ಸಿದ್ದ ಪ್ಪನೇ ಯಜಮಾನ.

* * * *

ಅಬ್ಬಾ, ನಾಲ್ವತ್ತು-ನಾಲ್ವತ್ತೈದು ವರ್ಷಗಳಲ್ಲಿಯೇ ನಮ್ಮ ಹಳ್ಳಿಯಲ್ಲಿ ಎಷ್ಟೊಂದು ಬದಲಾವಣೆಯಾಗಿದೆ! ಊರಮುಂದೆ ಲೈನ್‌ದಾರಿಯೊಂದು ಸಾಗಿ ಹೋಗಿದೆ. ಅದರ ಇಕ್ಕಡೆಗಳಲ್ಲಿ ಆರೇಳು 'ಚಹಾ-ಫರಾಳ'ದ ಅಂಗಡಿಗಳಾಗಿವೆ. ರಾತ್ರಿಯಲ್ಲಿ ಪೆಟ್ರೊಮ್ಯಾಕ್ಸ್ ದೀಪಗಳು ಅಂಗಡಿಗಳನ್ನೆಲ್ಲ ತೊಳಗಿಸುತ್ತವೆ. ಒಂದೆರಡು ಅಂಗಡಿಗಳಲ್ಲಿ ರೇಡಿಯೊ ಯಂತ್ರಗಳಿದ್ದು ಹಾಡುತ್ತವೆ; ಮಾತಾಡು ತ್ತವೆ. ಮಿಕ್ಕವುಗಳಲ್ಲಿ ಗ್ರಾಮೋಫೋನ್ ಯಂತ್ರಗಳಿದ್ದು ಹಾಡಿನಂತೆ ಏನೋ

ಕಿರುಚುತ್ತವೆ. ಲೈನ್‌ದಾರಿಗುಂಟ ಮೋಟಾರು–ಲಾರಿಗಳು ಓಡಾಡುತ್ತಲಿವೆ. ಜನರ ಮೈಮೇಲಿನ ಬಟ್ಟೆ-ಬರೆಗಳೆಲ್ಲ ಗಿರಣಿಯವು. ಮನೆ-ಮನೆಯಲ್ಲಿಯೂ ಕಾಜಿನ ದೀಪಗಳು ಬಂದಿವೆ; ಚಹದ ಕಪ್ಪು-ಬಸಿಗಳು ಬಂದಿವೆ. ಅಂಗಡಿಗಳಲ್ಲಿ ಚಹಾ–ಕಾಫೀಪುಡಿ, ಸಕ್ಕರೆ, ಬಿಸ್ಕೀಟು, ಚಾಕೋಲೇಟು, ಪೆಪ್ಪರಮಿಂಟು, ಸಬಕಾರ-ಸಾಬೂನು, ಸೋಡಾಬಾಟ್ಲಿ— ಇವುಗಳ ವ್ಯಾಪಾರಕ್ಕೇ ಹೆಚ್ಚಿನ ಪ್ರಾಧಾನ್ಯ, ನೂಲುವ ರಾಟೆಗೆ ಮನೆಯಲ್ಲಿ ಸ್ಥಾನವೇ ಇಲ್ಲ. ನೇಕಾರರು ತಮ್ಮ ವ್ಯವಸಾಯವನ್ನು ನಿಲ್ಲಿಸಿ ಕೂಲಿ-ಕಷ್ಟಗಳಿಗೆ ಹೋಗುತ್ತಿರುವರು. ತರುಣರ ತಲೆಯ ಮೇಲೆಲ್ಲ ಕ್ರಾಪು–ಬೈತಲೆ. ಇದ್ದ ಗರಡಿಯ ಮನೆ ಬಿದ್ದುಹೋಗಿ, ಎಲ್ಲಿದ್ದಿತೆಂಬುದರ ಗುರುತೂ ಹತ್ತದಂತಾಗಿದೆ. ಹಳ್ಳದ ದಂಡೆಯಲ್ಲಿ ಬರುತ್ತಿರುವ ಎತ್ತುಗಳೆಲ್ಲ ಬಡಕಲು ಬಸವಗಳೆ. ಒಂದರ ಮೈಯಲ್ಲಿಯೂ ಮಾಂಸವಿಲ್ಲ; ಒಂದರ ಕಣ್ಣಲ್ಲಿಯೂ ಕಳೆಯಿಲ್ಲ. ಈ ಎತ್ತುಗಳನ್ನು ನೋಡುತ್ತಿರುವಾಗ, ನನಗೆ ಅಂದಿನ ಕಾಲದ ನೀಲಪ್ಪನ ಎತ್ತಿನ ಮೆರೆವಣಿಗೆಯ ನೆನಪಾಯಿತು. ನಮ್ಮ ತಂದೆ ನೀಲಪ್ಪನಿಗೆ ಉಡುಗೊರೆಯಾಗಿ ಕೊಟ್ಟ ಜರಿಯ ಉತ್ತರೀಯದ ಚಿತ್ರವೂ ನನ್ನ ಕಣ್ಣೆದುರು ಬಂದು ನಿಂತಿತು. ಉತ್ತರೀಯವಿಲ್ಲದೆ ಕಳುಹಿದ ನೂಲುಹುಣ್ಣಿವೆಯ ಉಡುಗೊರೆಯನ್ನು ನನ್ನ ಅಕ್ಕನ ಅತ್ತೆಯ ಮನೆಯವರು ಸಿಟ್ಟಿನಿಂದ ಮರಳಿ ಕಳುಹಿದುದೂ, ಅದಕ್ಕಾಗಿ ನಮ್ಮ ತಂದೆಯವರು ಉತ್ತರೀಯದ ಜೊತೆಗೆ ಉಂಗರವೊಂದನ್ನು ಕಳುಹಿ ಅವರನ್ನು ಸಮಾಧಾನ ಪಡಿಸಿದುದೂ ಜ್ಞಾಪಕಕ್ಕೆ ಬಂದಿತು. ನಮ್ಮ ಅಕ್ಕನ ಅತ್ತೆಯ ಮನೆಯವರು ಸಿಟ್ಟೆಗೆದ್ದ ಸಮಾಚಾರ ಹೇಗೋ ನೀಲಪ್ಪನಿಗೆ ಗೊತ್ತಾಯಿತಂತೆ; ಅವನೇ ನಮ್ಮ ತಂದೆಯವರಿಗೆ ಹಣದ ಅನುಕೂಲತೆ ಮಾಡಿಕೊಟ್ಟು, ಹೆಚ್ಚಿನ ಉಡುಗೊರೆಯನ್ನು ಕಳುಹಲು ಹಚ್ಚಿದನಂತೆ. ಇಲ್ಲವಾದರೆ ಉಡುಗೊರೆ ಪಡೆಯದ ಅಳಿಯದೇವರಿಂದ ನನ್ನ ತಂದೆ-ತಾಯಿಗಳಿಗೆ ಎಷ್ಟೊಂದು ಬಾಧೆಗಳುಂಟಾಗುತ್ತಿದ್ದುವೋ ಯಾರು ಬಲ್ಲರು ?

ಈ ಕಾಲದ ಬದಲಾವಣೆಯಲ್ಲಿ ನೀಲಪ್ಪನ ಮನೆಯ ಗತಿಯೇನಾಗಿದೆ ? ಹಳ್ಳಿಯಲ್ಲಿದ್ದು ಹೊಟ್ಟೆ ತುಂಬದಂತಾದುದರಿಂದ ನಮ್ಮ ತಂದೆ ಪಟ್ಟಣದಲ್ಲಿ ಮನೆ ಮಾಡಿದರು. ಮಕ್ಕಳಿಗೆಲ್ಲ ಕಾಲೋಚಿತವಾದ ಶಿಕ್ಷಣವನ್ನು ಕೊಡಿಸ

ಬೇಕೆಂಬುದೂ ಅವರ ಆಂತರಿಕ ಆಶೆ. ಆದುದರಿಂದ ನಮ್ಮ ತಂದೆಯವರು ಪಟ್ಟಣಕ್ಕೆ ಬಂದು, ಚಿನ್ನ-ಬೆಳ್ಳಿಯ ಅಂಗಡಿಯೊಂದರಲ್ಲಿ ಲೆಕ್ಕ-ಪತ್ರ ಬರೆಯುವ ಕೆಲಸ ಹಿಡಿದರು. ಅವರ ತಿಂಗಳ ಸಂಬಳ, ಹಳ್ಳಿಯ ಹೊಲದ ಉತ್ಪನ್ನ ಎರಡೂ ಸೇರಿ, ನಮ್ಮ ಕುಟುಂಬದ ಜೀವನವನ್ನು ಸುಯಂತ್ರಿತವಾಗಿ ನಡೆಸತೊಡಗಿದುವು. ನಮ್ಮೆಲ್ಲರ ವಿದ್ಯಾಭ್ಯಾಸವೂ ಮುಂದುವರಿಯಿತು. ಆಗ ನಾನು ಪಟ್ಟಣವನ್ನು ಬಿಟ್ಟುಹೋದವನು, ನನ್ನ ಹಳ್ಳಿಗೆ ನಾನು ಮರಳಿ ಬಂದುದೆಂದರೆ ಈಗಲೇ! ಹೊಲದ ವಸೂಲಿಯ ಕೆಲಸವನ್ನು ತಂದೆ ಬದುಕಿ ಇರುವವರೆಗೆ ಅವರೇ ಮಾಡುತ್ತಿದ್ದರು. ಅವರು ಹೊರಟುಹೋದ ಮೇಲೆ ಕೆಲವು ದಿವಸ ನಮ್ಮ ಅಣ್ಣ ಮಾಡುತ್ತಿದ್ದರು. ಆದುದರಿಂದ ನನಗೆ ನೀಲಪ್ಪನ ಮನೆಯ ಹೆಚ್ಚಿನ ಸಂಗತಿಗಳಾವುವೂ ಗೊತ್ತಾಗಿರಲಿಲ್ಲ. ಅದನ್ನು ಕೇಳುವ ಕಾರಣವೂ ನನಗೆ ಬೀಳುತ್ತಿರಲಿಲ್ಲ. ಈಗ ನಾವು ಅಣ್ಣ-ತಮ್ಮಂದಿರು ಬೇರೆಯಾದುದರಿಂದ, ನನ್ನ ಪಾಲಿನ ಹೊಲದ ವ್ಯವಸ್ಥೆಯನ್ನು ಮಾಡಲು ಹಳ್ಳಿಗೆ ಬರಬೇಕಾಯಿತು. ಬಂದ ಮೇಲೆ, ನೀಲಪ್ಪನ ಅಂದಿನ ಎತ್ತಿನ ಮೆರೆವಣಿಗೆಯ ಕಥೆಯು ನೆನಪಾಯಿತು. ಆಗಲೇ ಅರುವತ್ತು ವರುಷದ ವಯಸ್ಸಿನವನಿದ್ದ ನೀಲಪ್ಪ ಇದುವರೆಗೆ ಬದುಕಿ ಇರುವನೆ? ಅವನು ಸತ್ತುಹೋದ ಸುದ್ದಿ ನನಗೆ ಗೊತ್ತಾಗಿತ್ತು. ಆದರೆ ಹೇಗೆ ಸತ್ತನೆಂಬುದು ಮಾತ್ರ ಗೊತ್ತಾಗಿರಲಿಲ್ಲ. ಈಗ ಹಳ್ಳಿಗೆ ಬಂದ ಮೇಲೆ, ನೀಲಪ್ಪನ ವಿಷಯದಲ್ಲಿ ಕುತೂಹಲವುಂಟಾಗಿ ಆತನ ಬಗೆಗೂ ಆತನ ಮನೆತನದ ಬಗೆಗೂ ಅಲ್ಲಿ ಇಲ್ಲಿ ಕೇಳಿದೆನು. ಪಾಪ! ಅವನ ಮರಣದ ಕಥೆ, ಅವನ ಮನೆತನದ ಕಥೆ ತುಂಬ ಕರುಣಾಜನಕವಾದುದು. ಒಂದೊಂದು ಸಂಗತಿಯನ್ನೂ ಕೇಳುತ್ತ ಹೋದಂತೆ, ನನ್ನ ಹೃದಯವು ಚುರುಗುಟ್ಟುತ್ತ ನಡೆಯಿತು. ಯಾರ ಅಭಿಶಾಪ ನೀಲಪ್ಪನ ಮನೆತನಕ್ಕೆ? ಅಥವಾ ಯಾವ ದೈವದ ಕೋಪ ನೀಲಪ್ಪನ ಮೇಲೆ? ಅಂತಹ ಸದಾಚಾರದ ಮೂರ್ತಿ ಎಂತಹ ಕಹಿಗೂಳನ್ನು ಉಣ್ಣಬೇಕಾಯಿತಲ್ಲ!

ಈಗ ನೀಲಪ್ಪನ ಎಂಟೆತ್ತಿನ ಕಮತದ ಮನೆ—ಹಿಂದೆ ಬಿದ್ದುದು ಹಿತ್ತಿಲು, ಮುಂದೆ ಬಿದ್ದುದು ಅಂಗಳು ಆಗಿ—ವಿಕಾರಸ್ವರೂಪಿಯಾಗಿ ಕಾಣುತ್ತಿದೆ. ಹಕ್ಕೆಯಲ್ಲಿ ಎಂಟೆತ್ತುಗಳ ಗಂಟೆ-ಹುರಿಗೆಜ್ಜೆಗಳ ಸಪ್ಪುಳವಿಲ್ಲ. ಹಲ್ಲುಬಿದ್ದ ಮುಪ್ಪಿನ

ಎರಡು ಬಡಕಲು ಎತ್ತುಗಳಿವೆ ಅಲ್ಲಿ. ನೀಲಪ್ಪನ ಹಿರಿಯ ಮಗ ನಾಗಣ್ಣನೆ ಆ ಮನೆಯ ಯಜಮಾನ. ಲೈನುದಾರಿಯ ಚಹದ ಅಂಗಡಿಗಳಲ್ಲಿ ಪೆಟ್ರೊ-ಮ್ಯಾಕ್ಸ್ ದೀಪಗಳು ಥಳಥಳಿಸುತ್ತಿದ್ದರೆ, ನೀಲಪ್ಪನ ಮನೆತನದ ಜೀವನವನ್ನು ದುರ್ದಶೆಯ ಕಗ್ಗತ್ತಲು ಮುಸುಕಿಕೊಂಡಿದೆ. ಹಿಂದೆ ನಾನು ಕಂಡಾಗ ಉತ್ಸಾಹದ ಮೂರ್ತಿಯಂತೆ ಕಾಣುತ್ತಿದ್ದ ನಾಗಪ್ಪ, ಈಗ ನಿರಾಶೆಯ ಪ್ರತಿಮೆಯಂತೆ ತೋರುತ್ತಿದ್ದ. ಹನುಮಂತನ ಗುಡಿಯ ಮುಂದಣ ದೊಡ್ಡ ಕಲ್ಲು-ಗುಂಡನ್ನು ಸಹಜವಾಗಿ ಹೆಗಲಿಗೆತ್ತಿ ಒಗೆಯುತ್ತಿದ್ದ ನಾಗಣ್ಣ ಇವನೇ ಇರಬಹುದೇ ?—ಎಂದು ಸಂದೇಹವುಂಟಾಗುವಷ್ಟು ಅವನ ಪ್ರಕೃತಿಯಲ್ಲಿ ವಿಕೃತಿ! ವಯಸ್ಸಿನಿಂದ ಹೀಗೆ ಆಗಿರಬಹುದೆನ್ನಬೇಕೆ ? ನಾನು ಚಿಕ್ಕತನದಲ್ಲಿ ನೋಡಿದ ನೀಲಪ್ಪನಿಗೆ ಈತನಿಗಿಂತ ಹೆಚ್ಚು ವಯಸ್ಸಾಗಿತ್ತಲ್ಲ! ಸಂತೋಷ, ಹೋದ ಹರಯವನ್ನು ಎಳೆದು ತರುತ್ತದೆ; ಚಿಂತೆ, ಇದ್ದ ಹರಯವನ್ನು ಓಡಿಸಿ ಮುಪ್ಪನ್ನು ಆಳವಡಿಸುತ್ತದೆ. ನಾಗಣ್ಣನ ಮನೆಯ ಜನರಲ್ಲಿ ಯಾರ ಮುಖದ ಮೇಲೂ ಗೆಲವಿನ ಚಿಹ್ನವೇ ಕಾಣುತ್ತಿರಲಿಲ್ಲ.

* * * *

ಈಗ ನಮ್ಮ ಹಳ್ಳಿಯಲ್ಲಿ ಚಹದ ಅಂಗಡಿಯ ಚೆನ್ನಪ್ಪನ ಹೆಸರೇ ಎಲ್ಲರ ಬಾಯಲ್ಲಿಯೂ ಆಡುವುದು. ಹಳ್ಳಿಗರೆಲ್ಲರ ಜೀವನಸೂತ್ರವನ್ನು ಆಡಿಸುವವನು ಚೆನ್ನಪ್ಪನೇ! ಜನರಿಗೆಲ್ಲ ಅವನ ವಿಷಯದಲ್ಲಿ ಭೀತಿಯೋ—ಪ್ರೀತಿಯೋ ಕಾಣೆ; ಎಲ್ಲರೂ ಆತನ ಪ್ರಸನ್ನತೆ-ಸಹಾನುಭೂತಿಗಳಿಗಾಗಿ ಹಾರಯಿಸುವರು. ನಾವು ಹಳ್ಳಿಯನ್ನು ಬಿಟ್ಟುಹೋದ ಮೇಲೆ, ಮೂರು ನಾಲ್ಕು ವರ್ಷಗಳ ತರುವಾಯ ಚೆನ್ನಪ್ಪ ಈ ಊರಿಗೆ ಬಂದವನು; ಆದುದರಿಂದ ಇದುವರೆಗೆ ನಾನು ಅವನನ್ನು ನೋಡಿರಲೇ ಇಲ್ಲ. ಆದರೆ ನಾನು ಯಾವ ನನ್ನ ಕೆಲಸಕ್ಕಾಗಿ ಬಂದಿರುವೆನೊ, ಅದನ್ನು ಸುಲಭವಾಗಿ ಸಾಧಿಸಿಕೊಳ್ಳಬೇಕಾದರೆ, ಚೆನ್ನಪ್ಪನ ಸಹಕಾರವನ್ನು ಕೋರುವುದು ಆಗತ್ಯವೇ ಆಯಿತು. ಅತನನ್ನು ಮನೆಗೆ ಕರೆಯಿಸಿಕೊಳ್ಳುವ ಧೈರ್ಯ ನನಗೆಹೇಗೆ ಆಗಬೇಕು? ಆದುದರಿಂದ ನಾನೇ ಅವನ ಮನೆಗೆ ಹೋದೆ.

ಚೆನ್ನಪ್ಪನದು ಅಚ್ಚುಕಟ್ಟಾದ ಮನೆ. ಪಡಸಾಲೆಯ ಗಿಲಾಯಿಗೋಡೆಗಳಿಗೆ ಅಂದವಾದ ಬಣ್ಣವನ್ನು ಹಚ್ಚಲಾಗಿತ್ತು. ಹಾಸಿದ್ದ ಹೊಸ ಜಮು-ಖಾನೆಯ ಮೇಲೆ ತಕ್ಕೆಗೆ ಒರಗಿ ಚೆನ್ನಪ್ಪ ಕುಳಿತುಕೊಂಡಿದ್ದ. ಕೈಯಲ್ಲಿ

ಒಂದು ವಾರಪತ್ರಿಕೆಯಿದ್ದಿತು. ಮೈಯಲ್ಲಿ ಬಿಳಿಯ ಮಲ್ಲಿನ ಶರ್ಟು. ಉಟ್ಟದ್ದು ಮರ್ಸ್‌ರೈಜ್ ಧೋತರ. ತಲೆಯ ಮೇಲೆ ಕಿರುಗೂದಲ ಕ್ರಾಪು. ಗೌರವರ್ಣದ ಮುಖ. ಮೇಲ್ದುಟಿಯ ಮೇಲೆ ಕತ್ತರಿಸಿದ ಕಿರುಮೀಸೆಗಳು. ನನ್ನನ್ನು ಸ್ವಾಗತಿಸಲು ಮಾತನಾಡತೊಡಗಿದಾಗ, ಮುಂದಿನ ಹಲ್ಲುಗಳಿಗೆ ಹಾಕಿಸಿದ ಚಿನ್ನದ ಚುಕ್ಕೆಗಳು ಕಂಡುವು. ವಯಸ್ಸು ಐವತ್ತಕ್ಕೆ ಮಿಕ್ಕಿರಬಹುದಾದರೂ, ಚೆನ್ನಪ್ಪ ಇನ್ನೂ ಸೊಗಸುಗಾರ ತರುಣನಂತೆ ಕಾಣುತ್ತಿದ್ದ. ನಾನು ಬಂದ ಕಾರಣವನ್ನು ಹೇಳಿ, ಅವನಿಂದ ನೆರವಿನ ಆಶ್ವಾಸನವನ್ನು ಪಡೆದು ಮನೆಗೆ ಮರಳಿ ಬಂದೆ. ಚೆನ್ನಪ್ಪನ ವ್ಯಕ್ತಿತ್ವವು, ಒಂದೆ ಒಂದು ಸಲದ ಸಂದರ್ಶನದಿಂದ ನನ್ನ ಮನಸ್ಸಿನ ಮೇಲೆ ಚೆನ್ನಾಗಿ ಮೂಡಿನಿಂತಿತು.

ಚೆನ್ನಪ್ಪ ನೀಲಪ್ಪನಿಗೆ ದೂರದವನೇನೂ ಅಲ್ಲ; ಸ್ವಂತ ತಂಗಿಯ ಮಗ. ಹನ್ನೆರಡು ವರ್ಷದ ವಯಸ್ಸಿನಲ್ಲಿಯೆ ಮನೆಬಿಟ್ಟು ಹೊರಟು ಹೋದವನು, ಎಲ್ಲಿ ಹುಡುಕಿದರೂ ಎಷ್ಟು ಹುಡುಕಿದರೂ ಈತನ ಸುಳಿವು ಸಿಕ್ಕಿರಲಿಲ್ಲವಂತೆ. ಮಗನ ಅಗಲಿಕೆಯ ಹೃದ್ರೋಗದಿಂದಲೆ ನೀಲಪ್ಪನ ತಂಗಿ ತೀರಿಹೋದಳಂತೆ. ಮುಂದೆಯೂ ಅನೇಕ ವರ್ಷ ಚೆನ್ನಪ್ಪನ ಸುದ್ದಿಯೆ ನೀಲಪ್ಪನಿಗೆ ಗೊತ್ತಾಗಲಿಲ್ಲ. ಸತ್ತುಹೋಗಿರಬಹುದೆಂದು ನಿರಾಶೆಯ ನಿಟ್ಟುಸಿರನ್ನು ಬಿಟ್ಟು, ತನ್ನ ನಿತ್ಯಜೀವನದಲ್ಲಿ ನೀಲಪ್ಪ ಮನಸ್ಸನ್ನು ತೊಡಗಿಸಿದ್ದನಂತೆ.

ನಾವು ಊರು ಬಿಟ್ಟುಹೋದ ಎರಡನೆಯ ವರ್ಷದಲ್ಲಿಯೆ, ನೀಲಪ್ಪನ ಕಿರಿಯ ಮಗ ನಂದಿಯಣ್ಣನು ವಿಷಮಜ್ವರದಿಂದ ತೀರಿಹೋದನೆಂಬ ವರ್ತ-ಮಾನವನ್ನು ನಮ್ಮ ತಂದೆಯವರು ತೆಗೆದುಕೊಂಡು ಬಂದಿದ್ದರು. ಅಂದು ನಮ್ಮ ತಾಯಿ, ಅತ್ತು ಅತ್ತು ಊಟವನ್ನು ಕೂಡ ಮಾಡಿರಲಿಲ್ಲ. ಹಿರಿಯ ಮಗ ನಾಗಣ್ಣ ಅಷ್ಟೊಂದು ಮೆದುಳಿದ್ದ ಪ್ರಾಣಿಯಲ್ಲ. ಹೊಲದಲ್ಲಿ ಬೇಕಾದಷ್ಟು ದುಡಿಯುತ್ತಿದ್ದನಾದರೂ, ಮನೆಯ ಕಾರಭಾರದಲ್ಲಿ ಮನಸ್ಸು ಹಾಕುವವನಲ್ಲ. ಕಿರಿಯ ಮಗ ನಂದಿಯಣ್ಣ ತುಂಬ ಬುದ್ಧಿಶಾಲಿ; ಎಂತಲೇ ನೀಲಪ್ಪ ಇತ್ತೀಚೆಗೆ ಎರಡು ಮೂರು ವರ್ಷಗಳಿಂದ, ಮನೆಯ ಕಾರಭಾರವನ್ನೆಲ್ಲ ಆತನ ಮೇಲೆ ಒಪ್ಪಿಸಿ, ತನ್ನ ಬಾಳನ್ನು ಹಗುರುಗೊಳಿಸಿಕೊಂಡಿದ್ದ. ಆದರೆ ಇದ್ದುದಿದ್ದ ಹಾಗೆಯೆ ಪ್ರಬುದ್ಧನಾದ ಮಗನು ಬಿದ್ದು ಸತ್ತು ಹೋಗಲು, ನೀಲಪ್ಪನಿಗೆ ತುಂಬ

ದುಃಖವಾಯಿತು; ಸಂಸಾರದ ವಿಷಯದಲ್ಲಿ ಒಂದು ಬಗೆಯ ವೈರಾಗ್ಯಭಾವ ವನ್ನೇ ಹುಟ್ಟಿಸಿತು.

ನಂದಿಯಣ್ಣ ಸತ್ತಾಗ ಆತನ ಹೆಂಡತಿ ಹೊನ್ನಮ್ಮ ಒಂದು ವರ್ಷದ ಮಗುವಿನ ತಾಯಿ. ಹೊನ್ನಮ್ಮನ ಚೆಲುವಿಕೆಯ ವರ್ಣನೆಯನ್ನು ನಮ್ಮ ತಾಯಿಯ ಬಾಯಿಂದ ಕೇಳಬೇಕು. ಹೆಣ್ಣುಗಳ ಚೆಲುವಿಕೆಯನ್ನು ಅಳೆಯಲು ಹೊನ್ನಮ್ಮನ ಬಣ್ಣ, ಕಣ್ಣು, ಮೂಗು, ಬಾಯಿ, ಸುಳಿಗುರುಳು, ಮೆಲುನಗೆ ಇವೆಲ್ಲ ನಮ್ಮ ತಾಯಿಗೆ ಅಳೆಗೋಲಾಗಿದ್ದುವು. ಈ ಅಳೆಗೋಲಿಗೆ ಹೊಂದಿಕೆ ಯಾಗುವಂತಹ ಒಂದು ಹೆಣ್ಣೂ ಅವಳಿಗೆ ನೋಡಲು ಸಿಕ್ಕಿರಲಿಲ್ಲವಂತೆ. ನನ್ನ ಹೆಂಡತಿ ಮನೆಗೆ ಬಂದ ದಿನ ನನ್ನ ತಾಯಿ ಆಗಾಗ ಅವಳನ್ನು ನೋಡುವಳು; ನಿರಾಶೆಯ ನಿಟ್ಟುಸಿರಿಕ್ಕಿ 'ನಮ್ಮ ನೀಲಪ್ಪನ ಮಗ ನಂದಿಯಣ್ಣನ ದೈವವೇ ದೈವ!' ಎಂದು ನುಡಿಯುವಳು. ಹಳ್ಳಿಯಲ್ಲಿದ್ದಾಗ ನಾನು ಚಿಕ್ಕವ. ಹೊನ್ನಮ್ಮನನ್ನು ಬೇಕಾದಷ್ಟು ಸಲ ನೋಡಿದ್ದೆ. ಆದರೆ ಆಗ ನನಗೆ ಅವಳ ಚೆಲು-ವಿನ ಅರ್ಥವು ಸರಿಯಾಗಿ ಆಗಿರಲಿಲ್ಲ. ನಮ್ಮ ತಾಯಿ ಆಗಾಗ ಅವಳ ಚೆಲುವಿಕೆಯ ಪವಾಡಹಾಡುವುದನ್ನು ಕೇಳಿದಾಗ ನನ್ನ ಹರಯದ ಹುಚ್ಚಿಗೆ, 'ಹಳ್ಳಿಗೆ ಹೋಗಿ ಅವಳನ್ನು ಇನ್ನೊಂದು ಸಲ ನೋಡಿಯಾದರೂ ಬರಬೇಕು' ಎಂದು ಎನಿಸದೆ ಇರುತ್ತಿರಲಿಲ್ಲ. ಆದರೆ ಕೊನೆಗೂ ಇನ್ನೊಂದು ಸಲ ಅವಳನ್ನು ನೋಡುವ ಯೋಗ ಕೂಡಿ ಬರಲೇ ಇಲ್ಲ.

ನಂದಿಯಣ್ಣ ಸತ್ತು ಇನ್ನೂ ವರ್ಷ ಮುಗಿದಿರಲಿಲ್ಲ; ಇದ್ದುದಿದ್ದ ಹಾಗೆಯೆ ಚೆನ್ನಪ್ಪ ನೀಲಪ್ಪನ ಮನೆಗೆ ಬಂದನಂತೆ. ಆಗ ಚೆನ್ನಪ್ಪನಿಗೆ ಇಪ್ಪತ್ನಾಲ್ಕು ಇಪ್ಪತ್ತೈದರ ವಯಸ್ಸು. ನೀಲಪ್ಪನ ಮನೆಯಲ್ಲಿ ಯಾರಿಗೂ ಆತನ ಗುರುತು ಸಿಕ್ಕುವಂತೆಯೆ ಇರಲಿಲ್ಲ. ಚೆನ್ನಪ್ಪ ತಾನೇ ತನ್ನ ಗುರುತನ್ನು ಮಾಡಿಕೊಟ್ಟ. ತನ್ನ ತಾಯಿಯ ಸಾವಿನ ನೆನಪನ್ನು ತೆಗೆದು ತಾನೂ ಅತ್ತ; ನೀಲಪ್ಪನಿಗೂ ಕಂಬನಿಗರೆಯಲು ಹಚ್ಚಿದ. ತಂಗಿಯ ಮಗನ ವಿಷಯಕವಾದ ಅಂತಃಕರಣ ನೀಲಪ್ಪನಲ್ಲಿ ಜಾಗೃತವಾಯಿತು. ಪ್ರೀತಿಯಿಂದ ಮೈದಡಹಿ, ಇಲ್ಲಿಯೆ ಇದ್ದು-ಬಿಡೆಂದು ಹೇಳಿ, ಚೆನ್ನಪ್ಪನನ್ನು ಮನೆಯಲ್ಲಿಯೆ ಇರಿಸಿಕೊಂಡ. ತಂಗಿಯ ಮಗನ ಸಾಹಚರ್ಯದಿಂದ ನಂದಿಯಣ್ಣನ ಅಗಲಿಕೆಯ ದುಃಖವನ್ನು ಸ್ವಲ್ಪ ವಾದರೂ ಮರೆಯಬೇಕೆಂದು ಆ ಮುದುಕನ ಹಂಬಲ.

ಚೆನ್ನಪ್ಪನಿಗೆ ಓದು-ಬರೆಹ ಚೆನ್ನಾಗಿ ಬರುತ್ತಿತ್ತು. ಸವಿ-ಸವಿಯಾಗಿ ಮಾತುಗಳನ್ನು ಆಡತೊಡಗಿದನೆಂದರೆ ಯಾರ ಮನಸ್ಸನ್ನಾದರೂ ತನ್ನ ಕಡೆಗೆ ಸೆಳೆದುಕೊಂಡುಬಿಡುವನು. ತನ್ನ ಪ್ರವಾಸಕಾಲದ ಸಾಹಸಗಳನ್ನೂ ಅನುಭವಗಳನ್ನೂ ಉಪ್ಪು-ಕಾರ ಹಚ್ಚಿ ಹೇಳಿ ಜನರನ್ನೆಲ್ಲ ಬೆರಗುಗೊಳಿಸಿಬಿಡುವನು. ಕೆಲವು ದಿನ ಅವನು ಬಾಬಾಬುಡನ್‌ಗಿರಿಯಲ್ಲಿ ಒಬ್ಬ ಬಾವಾಜಿಯ ಶಿಷ್ಯನಾಗಿ ಇದ್ದನಂತೆ. ಅವನಿಂದ ತಾನು ಅನೇಕ ಗಿಡಮೂಲಿಕೆಗಳ ಔಷಧಿಗಳನ್ನು ಹೇಳಿಸಿಕೊಂಡಿರುವುದಾಗಿಯೂ ಚೆನ್ನಪ್ಪ ಹೇಳುತ್ತಿದ್ದ. ಬಾವಾಜಿಗೆ ಬಂಗಾರವನ್ನುಮಾಡುವ ವಿದ್ಯೆಯು ಬರುತ್ತಿದ್ದಿತೆಂದೂ, ತನಗೆ ಅದನ್ನುಅವನು ಸಂಪೂರ್ಣವಾಗಿ ತಿಳುಹಲಿಲ್ಲವೆಂದೂ, ಆದರೂ ಎಷ್ಟೋ ಭಾಗವನ್ನು ಕಲಿತುಕೊಂಡಿರುವೆನೆಂದೂ, ಸ್ವಂತದ ಪ್ರಯತ್ನದಿಂದ ಅದನ್ನು ಸಿದ್ಧಮಾಡಿಕೊಳ್ಳಬಹುದೆಂದೂ, ಅವನು ಹೇಳುತ್ತಿದ್ದ. ಚೆನ್ನಪ್ಪ ಇದನ್ನೆಲ್ಲ ಹೇಳುವಾಗ, ನೀಲಪ್ಪ ಕೌತುಕದಿಂದ ಕೇಳುತ್ತಿದ್ದ. 'ನಿನ್ನ ತಾಯಿ ದೈವಗೇಡಿಯಪ್ಪಾ ! ನಿನ್ನ ಶಾಣೇತನಾನ ಅವಳ ಕಣ್ಣು ಕಾಣಲಿಲ್ಲ ! ' ಎಂದು ನಿಟ್ಟುಸಿರಿಡುತ್ತಿದ್ದ.

ಬರುಬರುತ್ತ ಚೆನ್ನಪ್ಪನ ಮಹತ್ತ್ವ ನೀಲಪ್ಪನ ಮನೆಯಲ್ಲಿಯೂ ಬೆಳೆಯಿತು; ಊರ ಜನರಲ್ಲಿಯೂ ಬೆಳೆಯಿತು. ಗಿಡ-ಮೂಲಿಕೆಯ ಔಷಧಿಯಿಂದ ಅವನು ಹಳ್ಳಿಯಲ್ಲಿಯ ಅನೇಕ ಜನರ ಕಾಯಿಲೆ-ಕಸಾಲೆಗಳನ್ನು ಕಡಿಮೆ ಮಾಡಿದುದರಿಂದ, ಅವನ ವೈದ್ಯಕವೂ ಊರ ಜನರ ಮನೆಮಾತಾಯಿತು. ನೀಲಪ್ಪ ದಾಕ್ಷಿಣ್ಯದ ಮೂಲಕ ಕೇಳದೆ ಹೋದರೂ, ಚೆನ್ನಪ್ಪ ಅವನಿಗೆ ತನ್ನ ಸಲಹೆ-ಸಹಕಾರಗಳನ್ನು ಕೊಡುತ್ತಲಿದ್ದ. ಆತನ ಜಾಣತನದ ಸಲಹೆಗಳು ನೀಲಪ್ಪನಿಗೆ ಸರಿಯೆನಿಸತೊಡಗಿದುವು. ನಾಗಣ್ಣ ತನ್ನಹೊಲ-ಮನೆಯ ಕೆಲಸವೇನೋ ತಾನೇನೋ—ಇದ್ದು ಬಿಟ್ಟಿದ್ದ. ಮಿಕ್ಕ ಕಾರ್ಯಭಾರಗಳಾವುವೂ ಆತನಿಗೆ ಬೇಕಾಗಿರಲಿಲ್ಲ. ಆತನ ಹೆಂಡತಿಯೂ ಅಷ್ಟೇ: ಹೈನದ ಕೆಲಸ—ಅಡಿಗೆ—ಊಟ—ಮಕ್ಕಳ ಉಪಚಾರ—ಇವುಗಳಲ್ಲಿ ಬೇರೆಯ ವಿಚಾರಕ್ಕೆ ಆಸ್ಪದವೇ ದೊರೆಯುತ್ತಿರಲಿಲ್ಲ; ಇಷ್ಟೇ ಅಲ್ಲ, ಇದಕ್ಕಿಂತ ಹೆಚ್ಚಿನ ವಿಚಾರವನ್ನು ತಾನು ಮಾಡುವುದು ಆವಶ್ಯಕವಿದೆಯೆಂದೂ ಅವಳು ತಿಳಿದಿರಲಿಲ್ಲ. ಹೊನ್ನಮ್ಮ ಮಗುವಿನ ಒಡನಾಟದಲ್ಲಿ ಗಂಡನ ಅಗಲಿಕೆಯ ದುಃಖವನ್ನು ಮರೆತು, ಇದೀಗ ನಗೆಹೆಣ್ಣೆಯ ಕೆಲಸದಲ್ಲಿ ಸಹಕಾರಿಯಾಗುತ್ತಿದ್ದಳು.

ಚೆನ್ನಪ್ಪ ಮನೆಯಲ್ಲಿಯ ಎಲ್ಲ ವ್ಯವಸ್ಥೆಯನ್ನೂ ತಾನಾಗಿಯೆ ನೋಡಿಕೊಳ್ಳತೊಡಗಿದ. ಒಂದೊಂದು ದಿನ, ಎತ್ತಿನ ಕಾಲಲ್ಲಿಯ ಕಸವನ್ನು ಬಳಿಯಲಿಕ್ಕೂ ಅವನು ಸಿದ್ಧನಾಗಿ ನಿಲ್ಲುತ್ತಿದ್ದ. ಇದನ್ನೆಲ್ಲ ಕಂಡು ನೀಲಪ್ಪ ಹಿರಿಹಿರಿ ಹಿಗ್ಗುವನು. ತನ್ನ ಸೋದರ ಅಳಿಯನ ವಿಷಯದಲ್ಲಿ ಅವನ ಪ್ರೀತಿ ಇಮ್ಮಡಿಗೊಳ್ಳುವುದು.

ಚೆನ್ನಪ್ಪನ ಹೆಸರಿನಿಂದ ನೀಲಪ್ಪನ ಮನೆಗೆ ಬೇರೆಬೇರೆ ವರ್ತಮಾನಪತ್ರಿಕೆಗಳು ಬರಲುತೊಡಗಿದುವು. ಚೆನ್ನಪ್ಪ ಅವುಗಳನ್ನು ಓದಿಓದಿ, ಅನೇಕ ಸುದ್ದಿಗಳನ್ನು ನೀಲಪ್ಪನಿಗೆ ಹೇಳುವನು. ಆಗ ಊರಲ್ಲಿಯ ಕೆಲವು ಜನ ಹಿರಿಯರೂ ನೀಲಪ್ಪನಲ್ಲಿಗೆ ಬರುವರು. ಎಲ್ಲವನ್ನೂ ಕೇಳಿ ಆ ಜನರು ಚೆನ್ನಪ್ಪನ ಬುದ್ಧಿವಂತಿಕೆಯನ್ನು ಕೊಂಡಾಡುವರು. ಆಗ ಮುದುಕ ನೀಲಪ್ಪನ ಕಣ್ಣಲ್ಲಿ, ಹಿಗ್ಗಿನ ಕಂಬನಿಗಳು ಇಳಿಯತೊಡಗುವುವು.

ಬಂದು ಆರುತಿಂಗಳು ಕಳೆಯುವುದರಲ್ಲಿಯೆ ಚೆನ್ನಪ್ಪನು ನೀಲಪ್ಪನ ಮನೆಯ ಸೂತ್ರಧಾರಿಯೆ ಆಗಿಬಿಟ್ಟ. ನೀಲಪ್ಪನಿಗೆ ಇದು ಬೇಕಾದ ಮಾತೇ ಆಯಿತು. ಮಂದಬುದ್ಧಿಯ ನಾಗಣ್ಣನಿಗೆ ಚೆನ್ನಪ್ಪನಂತಹ ಚತುರನ ಸಹಕಾರ ದೊರೆತರೆ, ತನ್ನ ಮನೆತನ ಇನ್ನಿಷ್ಟು ಏಳಿಗೆ ಹೊಂದೀತೆಂದು ಅವನ ಒಳಬಯಕೆ. ಅಲ್ಲದೆ ನಂದಿಯಣ್ಣನ ಪುಟ್ಟಮಗ ಚಿಕ್ಕಣ್ಣನಿಗೆ, ನಾಗಣ್ಣ—ಅವನ ಹೆಂಡಿರು ಮಕ್ಕಳು—ಇವರಿಂದ ಅನ್ಯಾಯವಾಗದಂತೆ ನೋಡಿಕೊಳ್ಳಬೇಕೆಂದೂ ಆ ಮುದುಕನ ಹಾರಯಿಕೆ. ಆದುದರಿಂದ ಓದು-ಬರೆಹ ಬಲ್ಲ ಚೆನ್ನಪ್ಪನ ಕಡೆಗೆ ಮನೆತನದ ಎಲ್ಲ ವ್ಯವಸ್ಥೆಯನ್ನೂ ಒಪ್ಪಿಸಬೇಕೆಂದು ನೀಲಪ್ಪ ಯೋಚನೆ ಮಾಡಿದ; ಅದರಂತೆ ಒಂದು ದಿನ ಚೆನ್ನಪ್ಪನಿಗೆ ತನ್ನ ಯೋಚನೆಯನ್ನು ಹೇಳಿಯೂ ಬಿಟ್ಟ. ತನಗೇತಕ್ಕೆ ಇಂತಹದೆಲ್ಲ ಹಿರಿಯತನ—ಎಂದು ತ್ಯಾಗದ ನುಡಿಗಳನ್ನಾಡಿದರೂ, ನೀಲಪ್ಪ ಒಪ್ಪಿಸಿಕೊಟ್ಟ ಕಾರಭಾರವನ್ನೆಲ್ಲ ಆತ ಒಂದೊಂದಾಗಿಯೆ ಸ್ವಾಧೀನಪಡಿಸಿಕೊಳ್ಳಲು ತೊಡಗಿದ. ಹಣದ ಪೆಟ್ಟಿಗೆಯ ಕೀಲಿಯ ಕೈ, ಹೆಸರಿಗೆ ಮಾತ್ರ ಹಿರಿಯ ನೀಲಪ್ಪನ ಸೊಂಟದಲ್ಲಿ ಇರುತ್ತಿತ್ತು.

ಪುಟ್ಟ ಚಿಕ್ಕಣ್ಣನನ್ನು ಚೆನ್ನಪ್ಪ ಪ್ರೀತಿಯಿಂದ ಎತ್ತಿ ಆಡಿಸಲುತೊಡಗಿದ; ಅದರೊಂದಿಗೆ ಎಷ್ಟು ಮುದ್ದಾಡಿದರೂ ಅವನಿಗೆ ತಣಿವಿಲ್ಲ. ಇದನ್ನು ಕಂಡಾಗ

ನೀಲಪ್ಪ 'ಚೆನ್ನಾ! ನೀನೂ ಬ್ಯಾಗನೇ ಮದವೀ ಮಾಡಿಕೊಂಡು ಬಿಡು. ಈಗೇನು ಬೆಳದ ಹೆಣ್ಣು ಬೇಕಾದಷ್ಟು ಸಿಗತಾವು. ನೀ 'ಆಗಲಿ' ಅನ್ನೂದ್ಹ ತಡ; ಮನೀ ಮುಂದ ಹಂದರಾ ಹಾಕಿಸೇ ಬಿಡತೀನಿ!' ಎನ್ನುವನು. ಚೆನ್ನಪ್ಪ ನಗುತ್ತ 'ಮುಂದ ನೋಡೂಣೇಳು ಮಾವಾ, ಅದಕ್ಕ್ಯಾಕ ಇಷ್ಟೊಂದು ಅವಸರ?' ಎಂದು ನುಡಿಯುವನು. ಆಗ ನೀಲಪ್ಪ: 'ನೋಡಪಾ, ನೀಯೇನು ಎಲ್ಲಾ ಬಲ್ಲವನೇ ಇದ್ದೀದಿ. ನಿನಗ ನಾವೇನು ಹೇಳೂದೈತೆ?' ಎಂದು ಸುಮ್ಮನಾಗುವನು.

ಒಂದೊಂದು ಸಲ ನಾಗಣ್ಣನ ಹೆಂಡತಿ ಹೊಲಕ್ಕೆ ಹೋಗಿರುವಳು. ದೊಡ್ಡ ಹುಡುಗರೆಲ್ಲ ತಂತಮ್ಮ ಕೆಲಸಕ್ಕೆಂದು ಹೊರಗೆ ಹೋಗಿರುವರು. ಸಣ್ಣ ಹುಡುಗರು ಹಿತ್ತಲಲ್ಲಿಯೊ ಬೀದಿಯ ಬಾಗಿಲಲ್ಲಿಯೋ ಆಡುತ್ತಿರುವರು. ನೀಲಪ್ಪ ಚಾವಡಿಯ ಕಡೆಗೋ ಬೇವಿನ ಕಟ್ಟೆಯ ಕಡೆಗೋ ಹೋಗಿರುವ. ಆಗ ಪಡಸಾಲೆಯಲ್ಲಿ ಚೆನ್ನಪ್ಪ ಒಬ್ಬನೇ ಒಬ್ಬ ಕುಳಿತಿರುವ. ಅಡಿಗೆಮನೆಯಲ್ಲಿಯೊ ಅಡಕಲುಕೋಣೆಯಲ್ಲಿಯೊ ಕುಳಿತು ಹೊನ್ನಮ್ಮ ಏನೇನೋ ಮನೆಗೆಲಸ ಮಾಡುತ್ತಿರುವಳು. ಆಗ ಏನಾದರೂ ನೆವ ತೆಗೆದು ಚೆನ್ನಪ್ಪ ಒಳಗೆ ಹೋಗುವನು; ಹೊನ್ನಮ್ಮನೊಂದಿಗೆ ಏನಾದರೂ ಮಾತನಾಡಬೇಕೆಂದು ಹವಣಿಸುವನು. ಕಾರಣವಿದ್ದಾಗ ಹೊನ್ನಮ್ಮ ಒಂದೆ ಮಾತಿನ ಉತ್ತರವನ್ನು ಕೊಡುವಳು. ಕಾರಣವಿಲ್ಲವೆನಿಸಿದಾಗ ಸುಮ್ಮಗಿದ್ದು ಬಿಡುವಳು. ಚೆನ್ನಪ್ಪನ ಕಡೆಗೆ ಕಣ್ಣೆತ್ತಿ ನೋಡುತ್ತಿರಲಿಲ್ಲ ಕೂಡ. ಚೆನ್ನಪ್ಪ ಚೀಲ-ಚಪ್ಪಡಿಗಳನ್ನು ನೋಡುತ್ತಲೋ, ಕೆಳಗೆ ಬಿದ್ದ ಒಡವೆಗಳನ್ನು ಎತ್ತಿ ಇಡುತ್ತಲೋ, ಅಲ್ಲಿಯೇ ಸುಳಿದಾಡುವನು; ನಿಂತಲ್ಲಿ ನಿಂತು ಗುಣುಗುಣು ಹಾಡುವನು. ಆಗ ಹೊನ್ನಮ್ಮ ಕುಳಿತ ಸ್ಥಳದಿಂದ ಎದ್ದು ಹಿತ್ತಲ ಕಡೆಗೆ ಹೊರಟು ಹೋಗುವಳು. ಇಲ್ಲವಾದರೆ ಹುಡುಗರನ್ನು ಕರೆಯುತ್ತ ಬೀದಿಯ ಬಾಗಿಲ ಕಡೆಗೆ ಬಂದುಬಿಡುವಳು. ಚೆನ್ನಪ್ಪ ಆಗ ಯಾವ ಭಾವವನ್ನೂ ಮುಖದಲ್ಲಿ ಮೂಡಿಸಿಕೊಳ್ಳದೆ, ಮರಳಿಬಂದು ತನ್ನ ಸ್ಥಳದಲ್ಲಿ ಕುಳಿತುಕೊಳ್ಳುವನು.

ಒಂದು ದಿನ ನಾಗಣ್ಣನ ಹೆಂಡತಿ ಹೊಲದಿಂದ ಮರಳಿ ಬಂದಾಗ, ಹೊನ್ನಮ್ಮನ ಮುಖವು ಅತ್ತು ಅತ್ತು ಊದಿಕೊಂಡುದನ್ನು ನೋಡಿದಳು.

'ಯಾಕವ್ವ ತಂಗೀ ? ಹಿಂಗ್ಯಾಕ ಆಗೇತಿ ನಿನ್ನ ಮುಕ ? ಪುತ್ತ ಅಳಲಾಕ ಸುರು ಮಾಡಿದೇನು ?' ಎಂದು ಕೇಳಿದಳು. ಆಗ ಹೊನ್ನಮ್ಮನ ಮುಖದಿಂದ ತಡೆಯಲಾರದಷ್ಟು ದುಃಖ ಹೊರಹೊಮ್ಮಿತು. ಗಂಡನ ನೆನಪಿನಿಂದ ಇವಳು ಅಳುತ್ತಿರುವಳೆಂದು ಆ ಹೆಣ್ಣುಮಗಳು ತಿಳಿದುಕೊಂಡಳು. ಹತ್ತಿರ ಬಂದು ಕುಳಿತು ತಾನೂ ಕಂಬನಿಗರೆಯುತ್ತ, ಹೊನ್ನಮ್ಮನನ್ನು ಸಮಾಧಾನಪಡಿಸ ತೊಡಗಿದಳು. ಅಕ್ಕನೆದುರಿಗೆ ಏನೋ ಹೇಳಬೇಕೆಂದು ಹೊನ್ನಮ್ಮನ ಹವಣಿಕೆ, ಆದರೆ ಒತ್ತಿಬರುವ ಅಳುವಿನಲ್ಲಿ ಅವಳ ಮುಖದಿಂದ ಮಾತುಗಳೇ ಹೊರಡಲಿಲ್ಲ

ನಿತ್ಯವೂ ಗಂಡುಸರಿಗೆ ಊಟಕ್ಕೆ ನೀಡುವಾಕೆ ಹೊನ್ನಮ್ಮನೆ. ಇಂದು ನೀಲಪ್ಪ, ನಾಗಣ್ಣ, ಚೆನ್ನಪ್ಪ ಮೂವರೂ ಅಡಿಗೆಮನೆಯೊಳಗೆ ಬಂದು ಕುಳಿತರೂ, ಹೊನ್ನಮ್ಮ ಒಳಗೆ ಹೋಗಲೇ ಇಲ್ಲ. ಸೂಚನೆ ತಿಳಿದುಕೊಂಡು ನಾಗಣ್ಣನ ಹೆಂಡತಿಯೇ ಒಳಗೆ ಹೋದಳು. ಎಲ್ಲರಿಗೂ ಊಟಕ್ಕೆ ನೀಡಿದಳು. ನಿತ್ಯದಂತೆಯೆ ಮೂವರೂ ನಗುತ್ತ ಕಲೆಯುತ್ತ ಊಟಮಾಡಿದರು. ಚೆನ್ನಪ್ಪನ ಮಾತು-ಕತೆ, ಸುದ್ದಿ-ಸೂರು ಇಂದು ದಿನಕ್ಕಿಂತ ಹೆಚ್ಚಾಗಿದ್ದುವು. ಅಂದು ಎಷ್ಟು ಒತ್ತಾಯ ಮಾಡಿದರೂ ಹೊನ್ನಮ್ಮ ಊಟಕ್ಕೆ ಏಳಲೇ ಇಲ್ಲ. ಹೊಲಕ್ಕೆ ಹೋಗಿ ಬಂದ ನಾಗಣ್ಣನ ಹೆಂಡತಿ ತುಂಬ ಹಸಿದಿದ್ದಳು. ಹೊನ್ನಮ್ಮ ಊಟಕ್ಕೆ ಏಳದುದರಿಂದ ಮನಸ್ಸಿಗೆ ಕೆಡುಕೆನಿಸಿತಾದರೂ, ನಿರ್ವಾಹವಿಲ್ಲದೆ ಊಟಮಾಡಿದಳು. ಅಂದು ಮಗುವಿನ ನಗೆಯಾಟವೂ ಹೊನ್ನಮ್ಮನಿಗೆ ಸೊಗಸೆನಿಸಲಿಲ್ಲ. ಅದನ್ನು ತೊಡೆಯ ಮೇಲೆ ಹಾಕಿಕೊಂಡು, ಕೈಯಿಂದ ತಟ್ಟುತ್ತ ಏನೇನೋ ಯೋಚನೆಯನ್ನು ಮಾಡಿಯ ಮಾಡುತ್ತಿದ್ದಳಂತೆ. ಇದೆಲ್ಲವೂ ಅವರಿವರನ್ನು ಕೇಳಿ ಸಂಪಾದಿಸಿದ ಸಂಗತಿ; ಎಷ್ಟು ನಿಜವೊ, ಎಷ್ಟು ಸುಳ್ಳೊ ?

ಮರುದಿನ ಬೆಳಗಿನಲ್ಲಿ ಚೆನ್ನಪ್ಪ, ಎಂದಿನಂತೆ ಚಿಕ್ಕಣ್ಣನನ್ನು ಎತ್ತಿಕೊಂಡು ಆಡಿಸುತ್ತ ಪಡಸಾಲೆಯಲ್ಲಿ ಕುಳಿತಿದ್ದ. ಚಿಕ್ಕಣ್ಣ ತನ್ನ ತೊದಲುತೊದಲು ಮಾತುಗಳಿಂದ ಎಲ್ಲರ ಮುದ್ದಿಗೂ ಪಾತ್ರನಾಗಿದ್ದ. ಚೆನ್ನಪ್ಪನನ್ನಂತೂ ಆ ಚಿಕ್ಕ ಮಗು ತುಂಬ ಹಚ್ಚಿಕೊಂಡಿತ್ತು. ಚೆನ್ನಪ್ಪ ತಾನು ಚಹವನ್ನು ಕುಡಿಯುವಾಗ ಮಗುವಿಗೂ ಕುಡಿಸುವನು. ಚಹವು ಚೆನ್ನಪ್ಪನ ಬರುವಿಕೆಯೊಂದಿಗೆ ನೀಲಪ್ಪನ ಮನೆಯಲ್ಲಿ ಪ್ರವೇಶಮಾಡಿತ್ತು. ಇನ್ನಾರಿಗೂ ಅದನ್ನು ಮಾಡಲು

ಬರುವುದಿಲ್ಲವೆಂದು ಮೊದ-ಮೊದಲು ಚೆನ್ನಪ್ಪ ತಾನೇ ಚಹವನ್ನು ಕಾಸಿಕೊಳ್ಳು, ತ್ತಿದ್ದ. ಬರು-ಬರುತ್ತ ಅದನ್ನು ಮಾಡುವ ರೀತಿ ತಿಳಿಯಲು, ಮನೆಯ ಹೆಂಗಸರೂ ಸಿದ್ಧಮಾಡಿ ಕೊಡತೊಡಗಿದರು. ಚೆನ್ನಪ್ಪನ ಒತ್ತಾಯಕ್ಕಾಗಿ ನೀಲಪ್ಪನೂ ಒಂದೊಂದು ದಿನ ಚಹವನ್ನು ತೆಗೆದುಕೊಳ್ಳುತ್ತಿದ್ದ. ಆತನ ಮುಪ್ಪಿನ ದೇಹಕ್ಕೂ ಬಳಲಿದ ಮನಸ್ಸಿಗೂ ಚಹದ ಕುಡಿತದಿಂದ ಹಿತವೆನಿಸುತ್ತಲಿತ್ತು. ಆದುದರಿಂದ ಅವನು ತನ್ನ ಗೆಳೆಯರ ಬಳಗದಲ್ಲಿ ಚಹದ ಪ್ರಭಾವವನ್ನು ಬಣ್ಣಿಸಿ ಬಣ್ಣಿಸಿ ಹೇಳಲುತೊಡಗಿದನು. ಅದೆಂತಹದೆಂಬುದನ್ನು ನೋಡಬೇಕೆಂದು ಅವರೆಲ್ಲರಲ್ಲಿಯೂ ಕುತೂಹಲ ತಲೆದೋರಲು ತೊಡಗಿತು.

ನಾಗಣ್ಣನ ಹೆಂಡತಿ ಚಹವನ್ನು ಮಾಡಿ ಕಂಚಿನ ಕೈಬಟ್ಟಲಲ್ಲಿ ತುಂಬಿಕೊಂಡು ಬಂದು ಚೆನ್ನಪ್ಪನ ಮುಂದೆ ಇಟ್ಟುಹೋದಳು. ಪುಟ್ಟ ಚಿಕ್ಕಣ್ಣ 'ಚಾ, ಚಾ' ಎಂದು ಹಾತೊರೆಯತೊಡಗಿದ. ಚೆನ್ನಪ್ಪ ತಾನೂ ಚಹವನ್ನು ಕುಡಿದ; ಅತಿಶಯವಾದ ಪ್ರೀತಿಯನ್ನು ತೋರಿಸುತ್ತ ಚಿಕ್ಕಣ್ಣನಿಗೂ ಕುಡಿಸಿದ. ಆದರೆ ಚಿಕ್ಕಣ್ಣ ಚಹವನ್ನು ಕುಡಿಯುವಾಗ, ಅದೇಕೋ ಎರಡು ಸಲ ಓಕರಿಸಿದ. ಕೊನೆಯ ಗುಟುಕನ್ನಂತೂ ಉಗುಳಿಯೆಬಿಟ್ಟ.

ಅಂದು ಸಾಯಂಕಾಲಕ್ಕೆಂದರೆ ಚಿಕ್ಕಣ್ಣನಿಗೆ ವಿಪರೀತ ಜ್ವರ. ಒಂದೆ ದಿನದಲ್ಲಿ ಮಗುವಿಗೆ ಎಚ್ಚರವೇ ತಪ್ಪಿಹೋಯಿತು. ಹೊನ್ನಮ್ಮ ಗಾಬರಿಗೊಂಡಳು. ಮಗುವನ್ನು ತೊಡೆಯ ಮೇಲೆ ಹಾಕಿಕೊಂಡು ಮೌನವಾಗಿ ಕಂಬನಿಗರೆಯುತ್ತ ಕುಳಿತುಕೊಂಡಳು. ಸಮೀಪದ ಹಳ್ಳಿಗೆ ಔಷಧ ಕೊಡಲಿಕ್ಕೆಂದು ಹೋದ ಚೆನ್ನಪ್ಪನು, ಅಂದು ರಾತ್ರಿಯ ಒಂಬತ್ತು ಗಂಟೆಗೆ ಮನೆಗೆ ಬಂದ. ಅವನು ಬರುವುದರಲ್ಲಿಯೆ ಚಿಕ್ಕಣ್ಣನ ಜ್ವರದ ಮೂಲಕ, ಮನೆಯಲ್ಲೆಲ್ಲ ಔದಾಸೀನ್ಯ ಹಬ್ಬಿಕೊಂಡಿದ್ದಿತು. ನೀಲಪ್ಪನಿಂದ ಸಂಗತಿಯು ಗೊತ್ತಾದೊಡನೆಯೆ ಚೆನ್ನಪ್ಪನು, ಮಗುವನ್ನು ನೋಡಲು ಹೊನ್ನಮ್ಮ ಕುಳಿತಲ್ಲಿಗೆ ಹೋದನು. ಮಗುವು ಆಕೆಯ ತೊಡೆಯ ಮೇಲೆ ಇರುವಾಗಲೇ ಅದರ ಪಕ್ಕಡಿಯನ್ನು ಮುಟ್ಟಿ ಜ್ವರವನ್ನು ನೋಡಿದನು. ಬಲಗೈಯನ್ನು ತೆಗೆದುಕೊಂಡು ನಾಡಿಗಳನ್ನು ಪರೀಕ್ಷಿಸಿದನು. ಪರೀಕ್ಷಿಸುತ್ತಿದ್ದಂತೆಯೆ ಮುಖವನ್ನು ಮುದುರಿಸಿ, ತನ್ನ ಕುತೂಹಲ ದೃಷ್ಟಿಗಳನ್ನು ಹೊನ್ನಮ್ಮನ ಕಡೆಗೆ ತಿರುಗಿಸಿದನು. ಆಕೆಯ ಮುಖದಲ್ಲಿ

ಸಂಕೋಚ-ಭೀತಿಗಳು ತುಂಬಿನಿಂತಿದ್ದುವು. ತಲೆಯನ್ನು ತಗ್ಗಿಸಿ ಅವಳು ಕಣ್ಣೀರು ಸುರಿಸುತ್ತಲಿದ್ದಳು. ಚೆಲುವೆಯಾದ ಹೆಂಗುಸು ನಕ್ಕರೂ ಒಂದು ಚೆಂದ; ಅತ್ತರೂ ಒಂದು ಚೆಂದ. ಚೆನ್ನಪ್ಪ ತನ್ನ ಕದಲದ ದೃಷ್ಟಿಯಿಂದ ಆ ದೈನ್ಯ-ಭಾವದ ಮೂರ್ತಿಯಾದ ಹೊನ್ನಮನನ್ನು ನುಂಗಿಬಿಡುವನೇನೋ ಎಂಬಂತೆ ನೋಡಿದ. ಆದರೆ ಆತನ ಆ ನೋಟಗಳನ್ನು ಹೊನ್ನಮ್ಮ ನೋಡಿರಲಾರಳು.

ಚಿಕ್ಕಣ್ಣನಿಗೆ ಚೆನ್ನಪ್ಪನ ಔಷಧೋಪಚಾರವೇ ನಡೆಯಿತು. ಅದೆಷ್ಟು ಆಸ್ಥೆ ಚೆನ್ನಪ್ಪನಿಗೆ ! ತಾಯಿಗಿಂತ ಹೆಚ್ಚಿನ ಮಮತೆಯನ್ನು ತೋರಿಸುತ್ತ, ಮಗುವಿನ ಶುಶ್ರೂಷೆಯನ್ನು ಮಾಡುತ್ತಿದ್ದ. ರಾತ್ರಿಯಲ್ಲಿ ನಿದ್ದೆಯನ್ನು ಕೂಡ ಸರಿಯಾಗಿ ಮಾಡದೆ, ಹತ್ತಾರು ಸಲ ಎದ್ದು ಎದ್ದು ಹೋಗಿ ಮಗವಿನ ಪ್ರಕೃತಿಯನ್ನು ನೋಡಿಬರುತ್ತಿದ್ದ. ಹೊನ್ನಮ್ಮನಿಗೆ ನಿದ್ದೆಯೆ ಇರಲಿಲ್ಲ. ಮಗುವಿನ ಮೈಮೇಲೆ ತನ್ನ ಪ್ರೀತಿಯ ಕೈಯನ್ನಾಡಿಸುತ್ತ ಹಾಗೆಯೆ ಕುಳಿತಿರುವಳು. ಮಿಕ್ಕವರ ವ್ಯವಹಾರಗಳೆಲ್ಲ ನಿತ್ಯನಿಯಮದಂತೆ ನಡೆದಿದ್ದುವು.

ಮೂರು ದಿನ ಕಳೆದುವು. ನಾಲ್ಕನೆಯ ದಿನ ನಾಲ್ಕು ತಾಸು ರಾತ್ರಿಗೆ ಚಿಕ್ಕಣ್ಣನ ಮೈಗೆ ಬೆವರು ಬಿಟ್ಟಿತು. ಈ ಸಂಗತಿ ತಿಳಿದೊಡನೆಯೆ ಚೆನ್ನಪ್ಪ ಹೋಗಿ, ತಿಳುವಾದ ತನ್ನ ಪಂಚೆಯಿಂದ ಮಗುವಿನ ಬೆವರನ್ನು ಒರಸಲು ತೊಡಗಿದನು. ಮುಂದೆ ಅರ್ಧಗಂಟೆಯಲ್ಲಿಯೆ ಜ್ವರವು ಪೂರ್ಣ ಇಳಿದುಹೋಗಿ, ಮಗುವು ಕಣ್ಣು ತೆರೆದು ನೋಡಿತು. 'ಯವ್ವಾ, ಎಂದು ಅಳಲುತೊಡಗಿತು. ಆಗ ಹೊನ್ನಮ್ಮ ಮಗನನ್ನು ಎದೆಗೆ ಅವಚಿಕೊಂಡಳು, ಆಕೆಯ ಕಂಠವು ಬಿಗಿದು ಬಂದಿದ್ದಿತು. ಆಗ ಚೆನ್ನಪ್ಪ ಸಹಜಸ್ವರದಲ್ಲಿ ಹೇಳಿದ :

"ಇನ್ನೇನೂ ಹೆದರಿಕೆ ಇಲ್ಲ. ಉರಿ ಬಾಳ ಕೆಟ್ಟ ಜಾತೀದು. ನಾನೂ ಏನಾದೀತೋ ಅಂತ ಹೆದರಿಹೋಗಿದ್ದೆ. ಅಂತೂ ನನ್ನ ಮದ್ದು ಸರಿಯಾಗಿ ಕೆಲಸಾ ಮಾಡಿತು."

ಹೊನ್ನಮ್ಮ ಕೃತಜ್ಞತೆ ತುಂಬಿದ ದೃಷ್ಟಿಗಳಿಂದ ಚೆನ್ನಪ್ಪನನ್ನು ನೋಡಿದಳು. ಮಾತನೇನೂ ಆಡದೆ ಮಗುವಿನ ಮೇಲೆ ಕೈಯನ್ನಾಡಿಸತೊಡಗಿದಳು. ಆಗಲೆ ಚೆನ್ನಪ್ಪ ಮತ್ತೊಂದು ಸಲ ಮಗುವಿನ ಮೈಯನ್ನು ಹಿಡಿದು ನೋಡಿದ. ಮಗುವು ಕಣ್ಣು ತೆರೆದು ಅವನನ್ನು ನೋಡಿ 'ಮಾವಾ, ಚಾ' ಎಂದಿತು.

ಮಗುವಿನ ವಿಷಯಕವಾದ ಮಮತೆ ಹೊನ್ನಮ್ಮನ ಮುಖದಲ್ಲಿ ಮೆಲುನಗೆಯನ್ನು ಮೂಡಿಸಿತು. ಹಾಗೆಯೆ ಮಗುವಿನ ಮುಖವನ್ನು ಮೇಲೆತ್ತಿ, ತುಂಬುಮಮತೆ ಯಿಂದ ಅದರ ಹಣೆಗೆ ಮುತ್ತಿಟ್ಟಳು. ಚೆನ್ನಪ್ಪ ಅರಳಿಸಿದ ಕಣ್ಣುಗಳಿಂದ ಇದೆಲ್ಲವನ್ನೂ ನೋಡುತ್ತಲಿದ್ದ. ಆಗ ಮನೆಯವರಿಗೆಲ್ಲ ತುಂಬ ನಿದ್ರೆ. ಮುದುಕ ನೀಲಪ್ಪನಂತೂ ತನ್ನ ನಡುನಿದ್ದೆಯಲ್ಲಿ ಯಾವ ಕನಸುಗಳನ್ನು ಕಾಣುತ್ತಲಿದ್ದನೊ !

ಆರೇಳು ದಿನಗಳಲ್ಲಿಯೆ ಮಗುವಿಗೆ ಸಂಪೂರ್ಣ ಗುಣವಾಯಿತು. ಮಗುವು ಎದ್ದು ತಿರುಗಾಡಲಿಕ್ಕೂ ಮೊದಲುಮಾಡಿತು. ಮಗುವಿಗೆ ಗುಣ-ವಾದ ಮೇಲಂತೂ ನೀಲಪ್ಪನ ಮನೆಯಲ್ಲಿ ಚೆನ್ನಪ್ಪನಿಗೆ ದೇವದೂತನ ಮರ್ಯಾದೆ ದೊರೆಯತೊಡಗಿತು- ಎಲ್ಲರೂ ಅವನನ್ನು ಆದರ–ವಿಶ್ವಾಸಗಳಿಂದ ನೋಡು ವವರೆ. . ಚೆನ್ನಪ್ಪನಿಗೆ ನಿತ್ಯದ ಬೆಳಗು-ಇಳಿಹೊತ್ತಿನ ಚಹವನ್ನು ಹೊನ್ನಮ್ಮನೇ ಮಾಡಿಕೊಡತೊಡಗಿದಳು. ಚಿಕ್ಕಣ್ಣನಿಗೆ ಅವನು ಚಹ ಕುಡಿಸುವುದನ್ನು ಮೆಲುನಗೆಯಿಂದ ನೋಡುತ್ತ ನಿಲ್ಲುವಳು. ಚೆನ್ನಪ್ಪನೊಂದಿಗೆ ಮಗುವು ಚಿನ್ನಾಟವಾಡುವುದನ್ನು ಮರೆಯಲ್ಲಿ ನಿಂತು ನೋಡಿ ನೋಡಿ, ಒಳಗೊಳಗೇ ಹಿಗ್ಗುವಳು.

ನೀಲಪ್ಪನ ಮನೆಯ ಹಿರಿಯತನವು ಚೆನ್ನಪ್ಪನ ಕಡೆಗೆ ಸ್ವಾಭಾವಿಕ ವಾಗಿಯೆ ಬಂದುಬಿಟ್ಟಿತು. ಇದರಿಂದ, ನೀಲಪ್ಪನ ಔದಾರ್ಯಗುಣದ ಪ್ರಯೋ ಜನವು ಹಳ್ಳಿಗರಿಗೆ ಸಿಕ್ಕದಂತಾಯಿತು. ನೀಲಪ್ಪನಿಂದ ಕಾಳು-ಕಡಿಗಳನ್ನೂ ಹಣವನ್ನೂ ಕೈಗಡವೆಂದು ಎಷ್ಟೋ ಜನರು ಒಯ್ಯುತ್ತಿದ್ದರು. ಈಗ ಕಾಳು-ಕಡಿ ಯಾರಿಗೂ ಸಿಗುತ್ತಿರಲಿಲ್ಲ. ಹಣವು ಬೇಕಾದರೆ, ಕಾಗದ ಬರೆಸಿಕೊಂಡೋ, ಒತ್ತೆಯಿರಿಸಿಕೊಂಡೋ ಹೆಚ್ಚಿನ ಬಡ್ಡಿಗೆ ಹಣವು ದೊರೆಯತೊಡಗಿತು. ಅಡಚಣೆ ಯಲ್ಲಿದ್ದ ಜನರು, ಬಡ್ಡಿಯನ್ನು ಗಣನೆಗೆ ತಾರದೆ ಹಣವನ್ನು ಒಯ್ಯು ತ್ತಿದ್ದರು. ಓದು-ಬರೆಹ ಬಲ್ಲ ಚೆನ್ನಪ್ಪನು, ಸಾಲದ ಕಾಗದಗಳನ್ನೆಲ್ಲ ತನ್ನ ಹೆಸರಿನಿಂದಲೇ ಬರೆಸಿಕೊಳ್ಳುತ್ತಿದ್ದನು. ತಮ್ಮ ಮನೆಯವನೇ ಆದ ಚೆನ್ನಪ್ಪನ ಮೇಲೆ ಸಂದೇಹವನ್ನು ಯಾರು ಪಡಬೇಕು ?

ಇದ್ದುದಿದ್ದ ಹಾಗೆಯೆ ಹೊನ್ನಮ್ಮನ ನಡತೆಯಲ್ಲಿ ಚಟುವಟಿಕೆ ತುಂಬ-

ತೊಡಗಿತು. ಮುಖದಲ್ಲಿ ಗೆಲವಿನ ಕಳೆಯು ಆಟವಾಡತೊಡಗ್ಗಿತು. ಮೊದಲಿನಂತೆ ಮನೆಗೆಲಸದಲ್ಲಿ ಸಂಪೂರ್ಣವಾಗಿ ಭಾಗವಹಿಸಲು ತೊಡಗಿದಳು. ಮಳೆಗಾಲ ಕಳೆದು ಸುಗ್ಗಿಯ ದಿನಗಳು ಬಂದುವು. ಒಂದಿಲ್ಲೊಂದು ಕಾರಣಗಳಿಂದ ಮನೆಯವರೆಲ್ಲರೂ ಹೊಲಗಳಿಗೆ ಹೋಗತೊಡಗಿದರು. ಆಗ ಹೊನ್ನಮ್ಮ ಒಬ್ಬಳೇ ಮನೆಯಲ್ಲಿರುವಳು. ಚೆನ್ನಪ್ಪ ಏನೇನೋ ಕೆಲಸಗಳನ್ನು ಮಾಡುವ ನೆಪದಿಂದ ಮನೆಯಲ್ಲಿಯೆ ಇರುತ್ತಿದ್ದನು. ಬೇಕೆನಿಸಿದಾಗ ಹೊಲ-ತೋಟಗಳತ್ತ ತಿರುಗಾಡಿ ಬರುತ್ತಿದ್ದನು.

* * * *

ನಾಗಣ್ಣನ ಹೆಂಡತಿಗೆ ಹೊನ್ನಮ್ಮನ ಮುಖ-ಕಣ್ಣುಗಳನ್ನು ಕಂಡು ಹೇಗೊ ಹೇಗೋ ಎನಿಸತೊಡಗಿತು. ಹೊನ್ನಮ್ಮ ಏನೋ ಒಂದು ಹೊಸ ಬಗೆಯವಳಾಗಿಯೆ ಕಾಣಲುತೊಡಗಿದ್ದಳು. ಒಂದು ದಿನ ಇಬ್ಬರೂ ಕೂಡಿ ಊಟಕ್ಕೆ ಕುಳಿತಾಗ, ಹೊನ್ನಮ್ಮ ನಡುವೇ ಎದ್ದು ವಾಂತಿಮಾಡಿಕೊಂಡಳು. ನಾಗಣ್ಣನ ಹೆಂಡತಿಗೆ ಅದು ಇನ್ನೂ ವಿಚಿತ್ರವಾಗಿ ಕಂಡಿತು. ಸಲುಗೆಯ ದನಿಯಲ್ಲಿಯೆ ಕೇಳಿದಳು :

" ಏನs ತಂಗೀ ! ಹೊಟ್ಟ್ಯಾಗ ನೊಣಾಗಿಣಾ ಹೋತೋ ಏನು ? ಹಿಂದಕ ಯಾಕ ಆತು ? "

ಹೊನ್ನಮ್ಮ ಉತ್ತರವನ್ನೇನೂ ಕೊಡಲಿಲ್ಲ. ಮಗುವು ಕೂಗಿದುದೇ ನೆನಪಾಗಿ ಅವಳು ಅಡಕಲ ಕೋಣೆಯನ್ನು ಸೇರಿದಳು. ನಾಗಣ್ಣನ ಹೆಂಡತಿಯ ಹೃದಯಕ್ಕೆ ಅದೇಕೋ, ಒಮ್ಮೆಲೆ ಬಿರುಗಲ್ಲು ಬಡಿದಂತಾಯಿತು. ಅವಳೂ ಊಟವನ್ನು ಸ್ವಲ್ಪದರಲ್ಲಿಯೇ ಮುಗಿಸಿದಳು. ದುಡಿದು ದಣಿದು ಬಂದ ಆ ಹೆಣ್ಣುಮಗಳಿಗೆ, ನಿದ್ದೆಬಂದು ಕಣ್ಣನ್ನು ಮುಚ್ಚಿಸುವ ವರೆಗೂ ಏನೇನೋ ಯೋಚನೆಗಳು.

ಮರುದಿನ ನಸುಕಿನಲ್ಲೆದ್ದು ನೋಡಿದರೆ, ಹೊನ್ನಮ್ಮ ಮನೆಯಲ್ಲಿ ಇಲ್ಲವೇ ಇಲ್ಲ. ಅವಳ ಹಾಸಿಗೆಯಲ್ಲಿ ಮಗುವೊಂದೇ ಮಲಗಿ ನಿದ್ರಿಸುತ್ತಿತ್ತು. ನಾಗಣ್ಣನ ಹೆಂಡತಿಗೆ ಅದೇಕೋ ಗಾಬರಿಯೆನಿಸಿತು. ಹಾಗೆಯೆ ಹೋಗಿ ತಲೆಬಾಗಿಲನ್ನು ನೋಡಿದಳು. ಅಗಳಿ, ಚಿಲಕ ಎರಡೂ ಹಾಕಿರಲಿಲ್ಲ. ಬಾಗಿಲನ್ನು

ಹಾಗೆಯೆ ಮುಂದೆ ಮಾಡಲಾಗಿತ್ತು. ನಡುಗುವ ಎದೆಯಿಂದ ಅವಳು ಗಂಡನನ್ನು ಎಬ್ಬಿಸಿ ಹೇಳಿದಳು :

" ಹೊನ್ನಮ್ಮ ಮನ್ಯಾಗ ಕಾಣೂದಿಲ್ಲ. ಎಲ್ಲಿ ಹೊರಗ ಹೋಗ್ಯಾಳೋ ಏನೋ ! "

ನಾಗಣ್ಣ ಸಹಜಸ್ವರದಲ್ಲಿಯೇ ಹೇಳಿದ :

" ಎಲ್ಲಿ ಹೋಗತಾಳು; ಚರಿಗೀ ಗಿರಿಗೀ ತೊಗೊಂಡು ಹೋಗಿದ್ದಾಳು ! "

ನಾಗಣ್ಣನ ಹೆಂಡತಿ ನಡುಗುದನಿಯಲ್ಲಿ ಹೇಳಿದಳು :

" ಉಹುಂ, ಹಾಂಗ ಒಬ್ಬಾಕೇ ಎಂದೂ ಹೋಗೂವಾಕೆಲ್ಲ ಆಕಿ. ಏನೋ ಗಾತ ಆದ್ಹಾಂಗ ಕಾಣತೈತಿ ನನಗ ! ಈ ಚೆನ್ನಪ್ಪ ಯಾವ ಮೂಲದ ಮ್ಯಾಲ ಬಂದು ನಮ್ಮ ಮನೀ ಹೊಕ್ಕನೋ ಏನೋ ! "

ನಾಗಣ್ಣ ಬೇಸರದ ದನಿಯಲ್ಲಿ ನುಡಿದ :

" ಇದೇನಽ ನಿನ್ನ ಮಾತು ? ಹೊನ್ನಮ್ಮ ಹೊರಗ ಹೋದರ ಚೆನ್ನಪ್ಪ-ಗ್ಯಾಕ ಅಂತೀ ನೀನು ? ಅಂವ ಏನ ಮಾಡ್ಯಾನ ಈಗ ! "

ನಾಗಣ್ಣನ ಹೆಂಡತಿ ಅಳುತ್ತಳುತ್ತಲೇ ಹೇಳಿದಳು :

" ನಿಮ್ಮಂತಾ ಗಂಡಸರಿಗೆಲ್ಲಾ ಏನು ಗೊತ್ತಾಗತೈತಿ ಮಣ್ಣು ! ನಮ್ಮ ಮನೀ ಮಾನಕ್ಕ ಮಸೀ ಹತ್ತುವ ಯಾಳೇ ಬಂದೈತ್ಯೋ ಏನೋ ಯಾರಿಗೆ ಗೊತ್ತು ? "

ನಾಗಣ್ಣ ಬೇಸರದಿಂದಲೇ ಹಾಸಿಗೆಯನ್ನು ಬಿಟ್ಟು ಎದ್ದ. ಮನೆಯಲ್ಲಿ ಯಾರಿಗೂ ಏನೂ ಹೇಳದೆ, ತಲೆಬಾಗಿಲನ್ನು ತೆರೆದು ಹೊರಗೆ ಕಾಲಿಟ್ಟ. ಇನ್ನೂ ಪೂರ್ತಿಯಾಗಿ ಬೆಳಕುಬಿದ್ದಿರಲಿಲ್ಲ. ನೆರೆ-ಹೊರೆಯ ಮನೆಗಳಲ್ಲಿ ತಿರುಗುವ ಬೀಸುವ ಕಲ್ಲುಗಳ ಸಪ್ಪಳೂ ಗರತಿಯರ ಬೀಸುವ ಹಾಡುಗಳ ಧ್ವನಿಯೂ ಕೇಳಿಸುತ್ತಿದ್ದುವು. ನಾಗಣ್ಣ ಹಾಗೆಯೆ ಚಾವಡಿಯ ಕಡೆಗೆ ಹೊರಟ. ನಿನ್ನೆಯ ರಾತ್ರಿಯಲ್ಲಿ ಬಂದಿದ್ದ ಪೋಲೀಸ್ ಜಮಾದಾರ ಅಲ್ಲಿ ಬೀಡಾರ ಬಿಟ್ಟಿದ್ದ. ಅಲ್ಲಿಯೆ ಚಾವಡಿಯ ಅಂಗಳದಲ್ಲಿ ಜಮಾದಾರನ ಕುದುರೆ "ಘುರ್ ಘುರ್ " ಎಂದು ಸಪ್ಪಳ ಮಾಡುತ್ತ ನಿಂತುಕೊಂಡಿತ್ತು. ನಾಗಣ್ಣ ಅದನ್ನು ದಾಟಿ ಮುಂದೆ ಹೋದ. ಪೂಜಾರಿ ತಮ್ಮಣ್ಣ ತಂಬಿಗೆ ತೆಗೆದುಕೊಂಡು ಎದುರಿಗೆ ಬಂದ; ಗಾಬರಿಯ ಸ್ವರದಲ್ಲಿ ಮಾತನಾಡಲು ತೊಡಗಿದ :

" ಯಾರು ? ನಾಗಪ್ಪಣ್ಣ ಏನು ? ಶರಣಪ್ಪಾ ! ಏನ ಮಂದಿ ಆತಪಾ ನಮ್ಮ ಊರಾಗ ! ತುಂಬೂ ಬಾವಿಯೊಳಗ ಯಾವಾಕ್ಯೋ ಹೆಣ್ಣುಮಗಳು ಬಿದ್ದುಬಿಟ್ಟಾಳ ನೋಡಪಾ ! ನಾ ಕೈಕಾಲು ತೊಳಕೋಬೇಕಂತ ದಿನದಾಂಗ ಬಾವ್ಯಾಗ ಇಳಿದು ನೋಡತೀನs; ಹಾಂಗs ತೇಲಾಕ ಹತ್ತ್ಯೈತೆಲಾ ಹೆಣಾ ! ನಾನು ಹೆದರಿಕೊಂಡು, ಹಾಂಗs ಮ್ಯಾಲ ಬಂದುಬಿಟ್ಟೆ. ಯಾರ ಮನೀ ಹೆಣ್ಣು ಮಗಳು ಇದ್ದಾಳಪಾ ಆಕಿ ! "

ನಾಗಣ್ಣನ ಕರುಳಿಗೆ ಒಮ್ಮೆಲೆ ಬರೆಯೆಳೆದಂತಾಯಿತು. ಅವನು ಪೂಜಾರಿಗೆ ಉತ್ತರವನ್ನೇನೂ ಕೊಡದೆ, ಓಟದ ನಡಿಗೆಯಿಂದ ತುಂಬುವ ಬಾವಿಯ ಕಡೆಗೆ ನಡೆದ. ಒಳಗೆ ಇಳಿದು, ಬಾವಿಯಲ್ಲಿ ಬಿದ್ದವಳು ತಮ್ಮ ಹೊನ್ನಮ್ಮನೇ ಎಂಬುದನ್ನು ಮನವರಿಕೆ ಮಾಡಿಕೊಂಡ. ನಾಗಣ್ಣನಿಗೆ ಮನೆಗೆ ಮರಳಿ ಹೋಗಲಿಕ್ಕೆ ಮನಸ್ಸೇ ಆಗಲೊಲ್ಲದು. ಹಾಗೆಯೆ ಹೊಲಕ್ಕೆ ಹೋಗಿ, ಆಳುಗಳ ಮುಖಾಂತರ ಮನೆಗೆ ವರ್ತಮಾನವನ್ನು ಕಳಿಸಿಕೊಟ್ಟ.

ಆಳು ವರ್ತಮಾನವನ್ನು ತೆಗೆದುಕೊಂಡು ಹೋದಾಗ ಮನೆಯಲ್ಲಿ ಪುಟ್ಟಣ್ಣನು ಎದ್ದು ' ಅವ್ವಾ ' ಎಂದು ಅಳುತ್ತಿದ್ದ. ನಾಗಣ್ಣನ ಹೆಂಡತಿ ಅವನನ್ನು ಎತ್ತಿಕೊಂಡು ಸಮಾಧಾನಪಡಿಸುತ್ತಿದ್ದಳು. ಹೊರಗೆ ಬೆಳ್ಳಗೆ ಬೆಳಗಾಗಿತ್ತು. ಕಾಗೆಗಳು ಕರ್ಕಶಸ್ವರದಿಂದ ಎಡೆಬಿಡದೆ ಕೂಗುತ್ತಲಿದ್ದುವು. ಆಳು ಅಳುತ್ತಳುತ್ತಲೇ ಬಂದು, ಆಗ ತಾನೇ ಎದ್ದು ಕುಳಿತ ನೀಲಪ್ಪನಿಗೆ ಹೇಳಿದ :

" ಹೊನ್ನಮ್ಮ ತುಂಬೂ ಬಾವ್ಯಾಗ ಬಿದ್ದು ತೀರಿಕೊಂಡಾಳ್ರಿ ! ಹೆಣಾ ತೇಲ್ಯಾಡಾಕ ಹತ್ತ್ಯೈತಿ ! "

ನೀಲಪ್ಪನಿಗೆ ಯಾವುದೂ ತಿಳಿಯದಂತಾಯಿತು. ಆಳಿನ ಮಾತು ಕಿವಿಗೆ ಬಿದ್ದ ನಾಗಣ್ಣನ ಹೆಂಡತಿಯು ' ಅಯ್ಯೋ ' ಎಂದು ಕೂಗಿ ಕೂಗಿ ಅಳತೊಡಗಿದಳು. ಹುಡುಗರೆಲ್ಲರೂ ಎಚ್ಚತ್ತರು; ನಡೆದುಹೋದುದನ್ನು ಅರಿತುಕೊಂಡು ಅಳಲು ಆರಂಭಿಸಿದರು. ಈ ಗದ್ದಲದಿಂದ ಎಚ್ಚತ್ತ ಚೆನ್ನಪ್ಪ ತನ್ನ ಕೋಣೆಯನ್ನು ಬಿಟ್ಟು ಹೊರಗೆ ಬಂದ. ವಸ್ತುಸ್ಥಿತಿಯು ಗೊತ್ತಾಗಲು ಕಂಗೆಟ್ಟವರಂತೆ ಸುಮ್ಮನೆ ನಿಂತುಕೊಂಡ. ನೀಲಪ್ಪನ ಮನೆಯಲ್ಲಿ ನೆರೆಹೊರೆಯ ಹೆಂಗುಸರು

ಗಂಡುಸರು ಸೇರಿದರು. ಎಲ್ಲರೂ ಹೊನ್ನಮ್ಮನ ಸದ್ಗುಣಗಳನ್ನೂ ಸೌಂದರ್ಯವನ್ನೂ ನೆನೆ-ನೆನೆದು ಕಣ್ಣೀರಿಡುವವರೆ!

* * * *

ಆಯಿತು. ಪದ್ಧತಿಯಂತೆ ಬಾವಿಯಿಂದ ಹೆಣವನ್ನು ತೆಗೆದು ಮೇಲೆ ಹಾಕಲಾಯಿತು. ಪಂಚಾಯತಿಗಾಗಿ ಗೌಡ–ಕುಲಕರ್ಣಿಯರು, ಪೋಲೀಸ್ ಜಮಾದಾರ, ಪೋಲೀಸ ಸಿಪಾಯಿಗಳು, ಓಲೆಕಾರರು—ಎಲ್ಲರೂ ಬಂದರು. ನೀಲಪ್ಪ ಸೊಸೆಯ ಹೆಣದ ಬಳಿಯಲ್ಲಿ ದಿಮ್ಮುಹಿಡಿದವನಂತಾಗಿ ಸುಮ್ಮನೆ ಕುಳಿತುಬಿಟ್ಟಿದ್ದ. ಒಬ್ಬರ ಕೂಡ ಮಾತಿಲ್ಲ—ಕತೆಯಿಲ್ಲ. ಚೆನ್ನಪ್ಪ ಪಂಚಾಯತಿಗೆಂದು ಬಂದ ಗೌಡ-ಕುಲಕರ್ಣಿಯರ ಬಳಿಯಲ್ಲಿ ಕುಳಿತುಕೊಂಡಿದ್ದ. ಅವನ ನಿತ್ಯದ ಮುಖದಲ್ಲಿ ಯಾವ ಅಂತಹ ಎದ್ದು ಕಾಣುವಂತಹ ವ್ಯತ್ಯಾಸಗಳೂ ತೋರುತ್ತಿರಲಿಲ್ಲ.

ರೀತಿಯಂತೆ ಪಂಚನಾಮೆಯ ಕೆಲಸವು ಪ್ರಾರಂಭವಾಯಿನು. ಶವದ ಪರೀಕ್ಷೆಯೂ ಆಯಿತು. ಶವವನ್ನು ರಹಸ್ಯರೀತಿಯಲ್ಲಿ ಪರೀಕ್ಷಿಸಿದ ಹೆಂಗಸು ಗೌಡರನ್ನು ಕರೆದು, ಅವರ ಕಿವಿಯಲ್ಲಿ ಎನೋ ಹೇಳಿದಳು. ಗೌಡರು ಜಮಾ-ದಾರರನ್ನು ಕರೆದು ಏನೇನೋ ಏಕಾಂತವಾಡಿದರು. ಆ ಮೇಲೆ ಪೋಲೀಸ ಜಮಾದಾರರು ದರ್ಪದಿಂದ ಬಂದು ಹೇಳಿದರು :

"ಸಾದಾ ರೀತಿಯಿಂದ ಬಾವೀಬಿದ್ದ ಕೇಸೇನೂ ಇದು ಅಲ್ಲ. ಈ ಹೆಣ್ಣುಮಗಳು ಗಂಡ ಸತ್ತಾಕಿ. ಮೂರು ತಿಂಗಳ ಬಸುರಿ ಅದಾಳಂತ. ಅದಕ್ಕ ಈ ಹೆಣಾನ ಈಗ ಡಾಕ್ಟರತಪಾಸಣಿಗೆ ಕಳಿಸಬೇಕು. ಮನಿಯವರು ಕೊಂದು ಬಾವ್ಯಾಗ ಒಗೆದಿರಬಾರದ್ಯಾಕ? ಗೌಡರ, ಬಂಡೀ ಒಂದು ತರಿಸಿರಿ. ಹೆಣಾ ಹೊರಿಸಿಬಿಡೂಣು! ನಮ್ಮ ಮ್ಯಾಲ ಒಣಾ ಜವಾಬ್‌ದಾರಿ ಬ್ಯಾಡ!"

ಚೆನ್ನಪ್ಪ ಗೌಡರನ್ನೂ ಕುಲಕರ್ಣಿಯನ್ನೂ ಕರೆದುಕೊಂಡು ದೂರಹೋಗಿ ಬಹಳ ಹೊತ್ತಿನ ವರೆಗೆ ಏನೇನೋ ಹೇಳಿದ. ಆ ಮೇಲೆ ಗೌಡರು ಪೋಲೀಸ ಜಮಾದಾರನನ್ನು ಕರೆದೊಯ್ದು ಕಿವಿಮಾತುಗಳನ್ನಾಡಿದರು; ಮುಂದೆ ಎಲ್ಲವೂ ಸರಾಗವಾಗಿ ಸಾಗಿತು. ಪಂಚಾಯತಿಯ ಕೆಲಸವೂ ಮುಗಿಯಿತು. ಶವದ ಸ್ಮಶಾನಯಾತ್ರೆಯ ವಿಧಾನಗಳೂ ಮುಗಿದುವು.

ಅದೇ ದಿನ ಮನೆಗೆ ಬಂದು ಹಾಸಿಗೆ ಹಿಡಿದ ನೀಲಪ್ಪನು ಮುಂದೆ ಮೇಲಕ್ಕೆ ಏಳಲೇ ಇಲ್ಲ. ಚೆನ್ನಪ್ಪನ ಯಾವ ಗಿಡ-ಮೂಲಿಕೆಯ ಮದ್ದುಗಳೂ ಅವನ ಮೇಲೆ ನಾಟಲಿಲ್ಲ. ಮಾತನಾಡಲು ಮನೆಗೆ ಬಂದ ಆಪ್ತೇಷ್ಟರೊಂದಿಗೆ, ಮುಖವನ್ನು ಮೇಲಕ್ಕೆತ್ತಿ ಮಾತನಾಡಲಿಕ್ಕೂ ನೀಲಪ್ಪನಿಗೆ ಸಾಧ್ಯವಾಗಲಿಲ್ಲ. ಆಗಾಗ ನಿಟ್ಟುಸಿರಿಡುವನು; ಮೌನವಾಗಿಯೆ ಕಂಬನಿಗರೆಯುವನು. ಅನ್ನವಿಲ್ಲ, ನೀರಿಲ್ಲ. ಚೆನ್ನಪ್ಪ ಮುಂದೆ ಬಂದಾಗ ತಗ್ಗಿದ ಕಂಠದಲ್ಲಿ ಅವನು ಹೇಳುವನು :

" ನನ್ನ ನಾಗಣ್ಣನ್ನ ಕೈಹಿಡಿದು ಕರಕೊಂಡು ಹೋಗಾಂವ ನೀನs ಅಪ್ಪಾ ಚೆನ್ನಣ್ಣಾ ! "

ಚೆನ್ನಪ್ಪ ಆತನಿಗೆ ಧೈರ್ಯದ ಮಾತುಗಳನ್ನು ಹೇಳುವನು. ಕೇಳಿ ನೀಲಪ್ಪ ಬಿಸಿಯುಸಿರನ್ನು ಬಿಡುವನು. ಹೊನ್ನಮ್ಮ ಹೋದ ಹದಿನೈದನೆಯ ದಿನ ನೀಲಪ್ಪನ ಜೀವಜ್ಯೋತಿಯೂ ನಂದಿಹೋಯಿತು.

ನೀಲಪ್ಪನ ಉತ್ತರ-ಕ್ರಿಯೆಗಳೆಲ್ಲ ಮುಗಿದ ಮೇಲೆ ಒಂದು ದಿನ ಚೆನ್ನಪ್ಪ ನಾಗಣ್ಣನಿಗೆ ಹೇಳಿದ :

" ಮನಿತನದ ಮರ್ಯಾದಿ ಹೋಗೂ ಪ್ರಸಂಗ ಇತ್ತು. ಹಲಕಟ್ ಹೆಂಗಸರ ಸಂಗತಿ. ಮ್ಯಾಲ ನೋಡಿದರ ಎಂಥಾ ಗರತಿ ಗಂಗವ್ವನಂಥಾ ಸೋಗು; ಒಳಗೊಳಗ ಇಂಥಾ ಕೊಳಕುತನ ! ಏನು ಮಾಡುದೈತಿ ? ನಮ್ಮ ದೈವಕ್ಕ, ಅಂದs ಪೋಲೀಸ ಜಮಾದಾರನ ಮುಕ್ಕಾಮು ಇರಬೇಕs ಇಲ್ಲೆ ! ಬರೇ ಗೌಡ-ಕುಲಕರಣೇರು ಆಗಿದ್ದರ, ಸೊಪ್ಪದರ ಮ್ಯಾಲs ಮುಗಿಸಿಬಿಡಲಾಕ ಬರತಿತ್ತು. ಪೋಲೀಸ ಜಮಾದಾರರ ಕೆಲಸ. ಏನು ಮಾಡೂದೈತಿ ? ಎರಡು ಸಾವಿರ ರೂಪಾಯಕ್ಕ ಆತನ್ನ ಒಪ್ಪಿಸಬೇಕಾದರ ಕುರಿ-ಕೋಣ ಬಿದ್ದು ಹೋತು ನನಗ ! ಈಗ ಅವರಿಗೆ ರೂಪಾಯಿ ಕೊಡಬೇಕು; ಹ್ಯಾಂಗ ಮಾಡೂಣಾಂತೀ? "

ನಾಗಣ್ಣ ನಿರ್ಯೋಚನೆಯಿಂದಲೇ ಹೇಳಿದ :

" ಅದೆಲ್ಲಾ ನನಗೇನು ಗೊತ್ತಾಗಬೇಕಪಾ ! ನೀ ಹ್ಯಾಂಗ ಮಾಡೂಣಂತಿಯೋ ಹಾಂಗ ಮಾಡು ! "

ಚೆನ್ನಪ್ಪ ಹೇಳತೊಡಗಿದ :

" ಈಗ ಮನಿಯೊಳಗ ಒಂದು ಕುರುಡು ದಮಡೀನೂ ಇಲ್ಲ. ಮಾವಂದು

ಇಲ್ಲದ ದೊಡ್ಡ ಮನಸು ! ಅವರಿಗೆ ಇವರಿಗೆ ಕೈಗಡ—ಸಾಲ—ಅಂತ ಖಟ್ಟಿ ಗಿರಾಕಿಗಳಿಗೆಲ್ಲಾ ಕೊಟ್ಟುಕುಂತಾನ. ಈಗ ಅವರೆಲ್ಲಾ ಸುಮ್ಮನ್ಽ ಕೇಳಿದರ ಕೊಡತಾರಽ ? ಗೌಡರ ಉಪದ್ರ ನನಗ ಭಾಳ ಆಗೆಯ್ತಿ. ಏನರೇ ಮಾಡಿ ಎರಡು ಸಾವಿರ ರುಪಾಯಿ ಭರತೀ ಮಾಡಿ ಕೊಡಲಾಕಽ ಬೇಕು ! ”

ನಿರುಪಾಯದ ಧ್ವನಿಯಲ್ಲಿ ನಾಗಣ್ಣ ಹೇಳಿದ :

“ ನಿನ್ನ ಮಾತು ಖರೇ ಐತಿ. ಈಗ ಏನು ಮಾಡಿ ಕೊಡಬೇಕಂತೀ ರೂಪಾಯಿ ? ”

“ ಇನ್ನೇನು ಮಾಡೂದೈತಿ ? ಈಗ ಎರಡು ಜೋಡು ಎತ್ತುಗಳನ್ನ ಸಂತಿಗೆ ಹೊಡದುಬಿಡೂಣ. ಅವನ್ನ ಮಾರಿದರ, ಹದಿನೈದು ಹದಿನಾರು ನೂರು ರೂಪಾಯಿ ಬಂದಽ ಬರತಾವ. ಇನ್ನ ಉಳಿದ ರೂಪಾಯಿಗಾಗಿ ಮನ್ಯಾಗಿನ ದಾಗೀನಾ ಮಾರಿ ಕೂಡಿಸೂಣ. ಕೆಟ್ಟ ಯಾಳೀ, ಮಾಡೂದೇನು ಹೇಳು ! ಮನಿತನದ ಮರ್ಯಾದಿ ಉಳೀತು, ಇದಽ ದೊಡ್ಡಮಾತು ! ಇಲ್ಲ ದಿದ್ದರ ಏನು ಕೇಳತೀ, ಡಾಕ್ಟರ್ ತಪಾಸ್‌ಗಿಪಾಸ್ ಆಗಿದ್ದರ, ಇಲ್ಲದ ಹರಲೀ ಹೊರುವ ಪ್ರಸಂಗ ಬರತಿತ್ತು. ”

ಚೆನ್ನಪ್ಪನ ಸಲಹೆಯಂತೆಯೆ ಎಲ್ಲ ವ್ಯವಸ್ಥೆಯಾಯಿತು. ತಲೆಯೆತ್ತಿನ ಎರಡು ಜೋಡಿಯನ್ನೆ ಮಾರಾಟ ಮಾಡಿಆಯಿತು. ನಾಗಣ್ಣನ ಹೆಂಡತಿ—ಹೊನ್ನಮ್ಮ—ಹುಡುಗರು—ಎಲ್ಲರ ಒಡವೆಗಳನ್ನೂ ಮಾರಿ ಆಯಿತು. ಹೊನ್ನಮ್ಮನ ಸಾವಿಗಾಗಿ ಮಾಡಿದ ಗೌಡರ ಋಣವು ಬಗೆಹರಿಯಿತು. ನಾಗಣ್ಣನ ಹಕ್ಕೆಯಲ್ಲಿ ನಾಲ್ಕೇ ನಾಲ್ಕು ಎತ್ತುಗಳು ಉಳಿದುವು. ಎತ್ತುಗಳೇ ಇಲ್ಲದಾಗ ಹೆಚ್ಚಿನ ಹೊಲಗಳನ್ನು ಇಟ್ಟುಕೊಂಡು ಮಾಡುವರೇನು ? ಆಗಲೇ ನಮ್ಮ ಒಡ್ಡಿನ ಹೊಲವನ್ನು ಬೇರೊಬ್ಬ ರೈತನಿಗೆ ಕೊಡಬೇಕಾಯಿತು.

ಚೆನ್ನಪ್ಪನಿಗೆ ತಾನಿನ್ನು ನಾಗಣ್ಣನ ಮನೆಯಲ್ಲಿ ಇರಬಾರದೆನಿಸಿತು. ನಾಗಣ್ಣನ ಹೆಂಡತಿ ತನ್ನನ್ನು ಸಂದೇಹದೃಷ್ಟಿಯಿಂದ ನೋಡುತ್ತಲಿದ್ದಾಳೆಂಬ ವಿಷಯ, ಆ ಚಾಣಾಕ್ಷನಿಗೆ ಬೇಗನೆ ಗೊತ್ತಾಯಿತು. ಆಗ ಅವನು ಬೇರೊಂದು ಮನೆ ಮಾಡಿ, ಅಲ್ಲಿ ಇರಲುತೊಡಗಿದ. ಊಟದ ಮಟ್ಟಿಗೆ ನಾಗಣ್ಣನ ಮನೆಗೆ ಹೋಗಿಬರುತ್ತಿದ್ದ. ಇಷ್ಟಾದರೂ ನಾಗಣ್ಣ ಇವನನ್ನು ಕೇಳದೆ ಯಾವ ಕೆಲಸ

ವನ್ನೂ ಮಾಡುತ್ತಿರಲಿಲ್ಲ. ಚೆನ್ನಪ್ಪನ ಮನೆಯಲ್ಲಿ ನಿತ್ಯವೂ ಹಳ್ಳಿಯ ನಿರುದ್ಯೋಗಿ ತರುಣರು ಕೂಡತೊಡಗಿದರು. ಅವರಿಗಾಗಿ ಅಲ್ಲಿ ಚಹದ ಪಾತ್ರೆಗಳು ಆಗಾಗ ಒಲೆಯ ಮೇಲೆ ಏರಿ ಇಳಿಯತೊಡಗಿದುವು. ಚಹದ ಸವಿಯ ಮೂಲಕ, ಹಳ್ಳಿಯಲ್ಲಿ ಚೆನ್ನಪ್ಪನ ಸ್ನೇಹಿತರ ಬಳಗ ಬೆಳೆಯತೊಡಗಿತು.

* * * *

ಚೆನ್ನಪ್ಪ ಒಂದು ಸಲ ಹುಬ್ಬಳ್ಳಿಗೆ ಹೋಗಿ ಬಂದ. ಬರುವಾಗ ಒಂದು ಥಳುಕು-ಬೆಳಕಿನ ಹೆಣ್ಣನ್ನು ಜೊತೆಗೆ ಕರೆದುಕೊಂಡು ಬಂದ. ಕೇಳಿದವರಿಗೆಲ್ಲ 'ನನ್ನ ಮದುವೆಯ ಹೆಂಡತಿಯಿವಳು; ನನಗೆ ಅನುಕೂಲತೆಯಿರದುದರಿಂದ ಇದುವರೆಗೆ ತವರಮನೆಯಲ್ಲಿಯೆ ಬಿಟ್ಟಿದ್ದೆ. ಈಗ ಹೇಗೂ ಬೇರೆಯ ಮನೆ ಮಾಡಿದ್ದೇನೆ. ಎಂತಲೇ ಕರೆದುಕೊಂಡು ಬಂದುಬಿಟ್ಟೆ !' ಎಂದು ಹೇಳಿದನು. ಅಂದಿನಿಂದ ಚೆನ್ನಪ್ಪನ ಊಟವೂ ಅವನ ಮನೆಯಲ್ಲಿಯೇ ಆಗತೊಡಗಿತು. ಇದರಿಂದ ನಾಗಣ್ಣನಿಗೆ ವಿಷಾದವಾಯಿತಾದರೂ ನಾಗಣ್ಣನ ಹೆಂಡತಿಗೆ ಒಂದು ಬಗೆಯಿಂದ ನಿಶ್ಚಿಂತೆಯೆನಿಸಿತು.

ನೀಲಪ್ಪನ ಹಣದ ಸಾಲದ ಪತ್ರಗಳನ್ನೆಲ್ಲ ಚೆನ್ನಪ್ಪ ತನ್ನ ಹೆಸರಿನಿಂದಲೇ ಬರೆಯಿಸಿಕೊಂಡಿದ್ದನಲ್ಲವೆ ? ಬೇರೆಯ ಸಂಸಾರ ಹೂಡಿದ ಮೇಲೆ ಹಣವಿಲ್ಲದೆ ಹೇಗೆ ನಡೆಯುವುದು ? ಎಂತಲೇ ಅವನು ಸಾಲಗಾರರನ್ನು ಕರೆಯಿಸಿ ಹಣಕ್ಕೆ ತಗಾದೆ ಹಚ್ಚಿದನು. ಕೈಯಲ್ಲಿ ಇಲ್ಲದ ಜನರು ಒಮ್ಮೆಲೆ ಎಲ್ಲಿಂದ ಹಣವನ್ನು ಕೊಟ್ಟಾರು ! ಚೆನ್ನಪ್ಪ ಕೆಲವು ಸಾಲಗಾರರ ಮೇಲೆ ವ್ಯಾಜ್ಯವನ್ನು ಹೂಡಿದನು. ಅವರಲ್ಲಿ ಕೆಲವು ಜನರು ಅರ್ಧಮರ್ಧ ಹಣವನ್ನು ನಾಗಣ್ಣನಿರುವಾಗ ಕೊಟ್ಟಿದ್ದರಾದರೂ, ಕೊಟ್ಟಬಗ್ಗೆ ಪ್ರಮಾಣಗಳೇನೂ ಇರಲಿಲ್ಲ. ವ್ಯಾಜ್ಯಗಳು ನಡೆದುವು. ಪಕ್ಷಗಾರರೂ ಸಾಕ್ಷೀದಾರರೂ ಪಟ್ಟಣಕ್ಕೆ ಹೋಗಿಬರಲು ಪ್ರಾರಂಭಿಸಿದರು. ಎರಡೂ ಪಕ್ಷದ ವಕೀಲರೂ ಇವರು ಕೊಟ್ಟ ಹಣದಿಂದ ಚೀಲಗಳನ್ನು ತುಂಬತೊಡಗಿದರು.

ವ್ಯಾಜ್ಯಗಳೆಲ್ಲ ಚೆನ್ನಪ್ಪನಿಗೆ ಅನುಕೂಲವಾಗಿಯೇ ತೀರ್ಪನ್ನು ಪಡೆದುವು. ಬಡ್ಡಿ, ಗಂಟು, ಕೋರ್ಟಿನ ವೆಚ್ಚ ಎಲ್ಲವನ್ನೂ ಬಡರೈತರು ತೆರಬೇಕಾಯಿತು. ಇದನ್ನು ಕಂಡ ಮಿಕ್ಕ ಸಾಲಗಾರರು ಮನೆಯಲ್ಲಿ ಇದ್ದ-ಬಿದ್ದುದನ್ನೆಲ್ಲ ಮಾರಿ

ಚೆನ್ನಪ್ಪನ ಸಾಲವನ್ನು ತೀರಿಸಿ ಬರಿ ಮನೆಯವರಾದರು. ಚೆನ್ನಪ್ಪನ ಕೈಯಲ್ಲಿ ಹಣದ ಗಂಟು ಬೆಳೆಯತೊಡಗಿತು. ಒಳ್ಳೆಯ ಸ್ಥಳದಲ್ಲಿ ಎಡೆಯನ್ನು ತೆಗೆದು ಕೊಂಡು, ಹಳ್ಳಿಗರನ್ನು ಬೆರಗುಗೊಳಿಸುವಂತಹ ಹೊಸ ಮನೆಯನ್ನು ಕಟ್ಟಿಸಿದ. ಮನೆಯಲ್ಲಿ ಹೊಳೆ-ಹೊಳೆಯುವ ಕಾಜಿನ ದೀಪಗಳನ್ನು ತಂದುಹಾಕಿದ. ಮಲಗಲು ಚಪ್ಪರಪಲ್ಲಂಗ-ಗಾದಿಗಳನ್ನು ಮಾಡಿಸಿದ. ಚೆನ್ನಪ್ಪನ ಜೀವನವು ಎಲ್ಲರ ಬಾಯಲ್ಲಿಯೂ ನೀರುತರಿಸುವಂತಹದಾಯಿತು. ಹಳ್ಳಿಯಲ್ಲಿ ಆತನ ಪ್ರಭಾವವು ಗೌಡ-ಕುಲಕರ್ಣಿಯರಿಗಿಂತ ಹೆಚ್ಚಿನದಾಯಿತು. ಗಂಡ-ಹೆಂಡತಿಯರ ಜಗಳಗಳನ್ನು ತೀರಿಸುವ ಮರ್ಯಾದೆಯು ಕೂಡ ಚೆನ್ನಪ್ಪನಿಗೆ ಸಹಜವಾಗಿಯೆ ಸಿಕ್ಕಿಬಿಟ್ಟಿತು.

ಅಂದಿನಿಂದ ಇಂದಿನವರೆಗೆ ಚೆನ್ನಪ್ಪನ ಪ್ರಚೋದನೆಯಿಂದ ಎಷ್ಟೋ ಜಗಳ-ಕದನಗಳು ಹಳ್ಳಿಯಲ್ಲಿ ಹುಟ್ಟಿಕೊಂಡುವು. ಅವೆಲ್ಲ ಕಚೇರಿ-ಕಟ್ಟೆಗಳ ಮುಖವನ್ನು ಕಂಡುಕಂಡೂ ಬಂದುವು. ನಾಗಣ್ಣನಂತಹ ನಾಗಣ್ಣನು ಕೂಡ ಸೀಮೆಯ ಸಲುವಾಗಿ ನೆರೆಯ ಹೊಲದವನ ಮೇಲೆ ಜಗಳ ಹೂಡಿದ. ಅದಕ್ಕೆಲ್ಲ ಚೆನ್ನಪ್ಪನೇ ಸೂತ್ರಧಾರ. ಈ ಜಗಳದಲ್ಲಿ ನಾಗಣ್ಣನಿಗೆ ಲಾಭವೇನೂ ಆಗಲಿಲ್ಲ; ವೆಚ್ಚಕ್ಕಾಗಿ ಇನ್ನೆರಡು ಎತ್ತುಗಳನ್ನು ಕಳೆದುಕೊಂಡ.

ಚೆನ್ನಪ್ಪನ ಸಂಸಾರವೂ ಈಗ ಬೆಳೆದಿದೆ. ಆರು ಮಕ್ಕಳ ತಂದೆಯಾತ. ಹಿರಿಯ ಮಗ ಇಪ್ಪತ್ತು ಇಪ್ಪತ್ತೊಂದು ವರ್ಷದ ವಯಸ್ಸಿನವನು. ಹಳ್ಳಿಯ ಶಾಲೆಯ ಶಿಕ್ಷಣವನ್ನು ಮುಗಿಸಿ ಮನೆ ಹಿಡಿದು ಕುಳಿತುಕೊಳ್ಳಲು, ಚೆನ್ನಪ್ಪ ಅವನಿಗಾಗಿ ಚಹದ ಅಂಗಡಿಯನ್ನು ತೆಗೆದುಕೊಟ್ಟಿದ್ದಾನೆ. 'ವಸಂತ ವಿಲಾಸ ಭವನ' ಎಂದು ಅದರ ಹೆಸರು. ಗಿರಾಕಿಗಳ ಮನಸ್ಸನ್ನು ಸೆಳೆದುಕೊಳ್ಳುವಂತಹ ಎಲ್ಲ ವಸ್ತುಗಳಿಗೂ ಅಲ್ಲಿ ಎಡೆಯನ್ನು ಕಲ್ಪಿಸಿ ಕೊಡಲಾಗಿದೆ. ಚೆನ್ನಪ್ಪನ ಹದಿನೆಂಟು ವರ್ಷದ ಮಗಳು ರಾಜಹಂಸಾ, ಅಲ್ಲಿ ಹೋಗಿ ಗಿರಾಕಿಗಳಿಂದ ಹಣವನ್ನು ತೆಗೆದುಕೊಳ್ಳುತ್ತ ಕುಳಿತಿರುತ್ತಾಳೆ.

ಹೊನ್ನಮ್ಮನ ಮಗ ಚಿಕ್ಕಣ್ಣನಿಗೆ ಈಗ ಮುವತ್ತೈದು ವರ್ಷದ ವಯಸ್ಸು. ಅವನು ಚೆನ್ನಪ್ಪನ 'ವಸಂತ ವಿಲಾಸ ಭವನ'ಕ್ಕೆ ನೀರನ್ನು ಪೂರಯಿಸುವ ನೌಕರಿಯನ್ನು ಹಿಡಿದಿದ್ದಾನೆ. ಇನ್ನೂ ಅವನಿಗೆ ಮದುವೆಯಿಲ್ಲ. ಚಿಕ್ಕತನದಲ್ಲಿ

ಚೆನ್ನಪ್ಪ ಕಲಿಸಿದ ಚಹದ ಚಟವೇ ಅವನನ್ನು ಈ ಅಂಗಡಿಯಲ್ಲಿ ಕೆಲಸ ಮಾಡಲು ಹಚ್ಚಿದೆ. ನಾಗಣ್ಣನ ಇಬ್ಬರು ಮಕ್ಕಳಲ್ಲಿ ಒಬ್ಬನು ಮಂದಿಯ ಹೊಲದಲ್ಲಿ ದುಡಿಯಲು ಹೋಗುತ್ತಾನೆ. ಇನ್ನೊಬ್ಬನು ನೀಲಪ್ಪನ ಎಂಟೆತ್ತಿನ ಒಕ್ಕಲುತನದ ನೆನಪನ್ನು ಕಾಯಲು, ಎರಡು ಬಡಕಲು ಎತ್ತುಗಳ ಕಮತವನ್ನು ನಡೆಸಿದ್ದಾನೆ........

ಈ ಕತೆಯನ್ನೆಲ್ಲ ಕೇಳಿದಾಗ ನನ್ನ ಕರುಳುಗಳಿಗೆ ಸಾವಿರಾರು ಚೇಳು ಕುಟುಕಿದಷ್ಟು ಸಂಕಟವಾಯಿತು. ನೀಲಪ್ಪನ ಜೀವನದ ದುರಂತ ನನ್ನನ್ನು ಕಂಗೆಡಿಸಿಬಿಟ್ಟಿತು. ಆದರೆ ನಾನೇನು ಮಾಡುವಂತಿದ್ದೇನೆ? ನನ್ನ ಸ್ವಾರ್ಥವನ್ನು ಸಾಧಿಸಿಕೊಳ್ಳುವುದಕ್ಕಾಗಿ, ಆ ಉದಾರಿ ನೀಲಪ್ಪನನ್ನು ಕಚ್ಚಿಕೊಂಡ ವಿಷದ ಹುಳುವನ್ನೇ ಒಲಿಸಿಕೊಳ್ಳಬೇಕಾಗಿ ಬಂದಿತು. ಅದಕ್ಕೇ ಸಲ್ಲಬೇಕಾದ ಪೂಜೆ-ಪುರಸ್ಕಾರಗಳನ್ನು ಸಲ್ಲಿಸಿದೆ. ನನಗೆ ಬರಬೇಕಾಗಿದ್ದ ಮುನ್ನೂರು ರೂಪಾಯಿಗಳಲ್ಲಿ ಇನ್ನೂರನ್ನೇ ದೈವ ನನ್ನ ಹಣೆಯಲ್ಲಿ ಬರೆದಿದೆಯೆಂದು ಸಮಾಧಾನಪಟ್ಟುಕೊಂಡು, ಅಷ್ಟನ್ನೇ ತೆಗೆದುಕೊಂಡು ಹಳ್ಳಿಯಿಂದ ಹೊರಟು ನಡೆದೆ.

# ದೈವದ ಸಂಸಾರ



ಕತೆಗಾರನ ಕತೆಗಳೆಲ್ಲ, ಒಂದು ದೃಷ್ಟಿಯಿಂದ ನೋಡಿದರೆ...ಆತನ ಕನಸುಗಳೇ ಆಗಿರುವುವು. ಒಮ್ಮೊಮ್ಮೆ ಆತನ ಕನಸುಗಳೇ ಕತೆಗಳಾಗಿರುವುವು. ಆತನ ಹಗಲುಗನಸುಗಳು ವಾಸ್ತವ ರಮ್ಯಕತೆಗಳಿಗೆ ವಸ್ತುಗಳನ್ನು ಒದಗಿಸಿಕೊಟ್ಟರೆ, ಇರುಳುಗನಸುಗಳು ಅದ್ಭುತ ರಮ್ಯಕತೆಗಳನ್ನೇ ಹೆಣೆದುಕೊಡುವುವು. ಹಗಲು-ಗನಸುಗಳಲ್ಲಿಯೆ ಆಗಲಿ, ಇರುಳುಗನಸಿನಲ್ಲಿಯೆ ಆಗಲಿ, ಕತೆಗಾರನ ವ್ಯಕ್ತಿತ್ವವೂ ಮನಸ್ಸು-ಹೃದಯಗಳ ಸಂಸ್ಕೃತಿಯೂ ಮೂಡಿಕೊಂಡಿರುವುವೆಂಬುದು ಬಹುಜನ ಕನಸಿಗರ ಅನುಭವವಾಗಿದೆ. ಲೈಂಗಿಕಕಾಮವು ಕನಸುಗಳಿಗೆ ಮೂಲಕಾರಣವಾಗಿರುವುದೆಂದು ಸುಪ್ರಸಿದ್ಧ ಮನಶ್ಶಾಸ್ತ್ರಜ್ಞನಾದ ಫ್ರಾಯಿಡನು ಹೇಳಿರುವುದು ಸಂಪೂರ್ಣ ಸತ್ಯವಲ್ಲವೆಂಬುದು ನನ್ನ ಮತವಾಗಿದೆ. ಮನಸ್ಸಿನ ಯಾವ ಉತ್ಕಟ ಭಾವನೆಯೂ ನಿದ್ದೆಯಲ್ಲಿ ಕನಸುಗಳನ್ನು ತಂದು ಮುಂದೆ ನಿಲ್ಲಿಸುತ್ತಿರುವುದು; ತಾನು ಕೇಂದ್ರಬಿಂದುವಾಗಿ ನಿಂತು, ಯಾವು-ಯಾವುವೋ ಪಾತ್ರಗಳನ್ನು ನಿರ್ಮಿಸಿ, ಏನೇನೋ ಚಿತ್ರ-ವಿಚಿತ್ರವಾದ ಸನ್ನಿವೇಶಗಳನ್ನು ರಚಿಸಿ, ಆ ಭಾವನೆ ಮತ್ತಿಷ್ಟು ಕೆರಳಿ ನಿಲ್ಲುವುದು; ಒಮ್ಮೊಮ್ಮೆ ಸಮಾಧಾನವನ್ನು ತಾಳುವುದು. ಮಾನವನ ಕನಸುಗಳು ಆತನ ಅಭಿರುಚಿ-ಸಂಸ್ಕೃತಿಗಳನ್ನು ತಿಳುಹುವ ಮುಖ್ಯ ಸಾಧನಗಳು.

ಮೊನ್ನೆ ಮೊನ್ನೆಯೆ ನಡೆದ ಒಂದು ಸಂಗತಿಯಿದು: ಅಂದು ಮನೆಗೆ ಬಂದ ದೈನಂದಿನ ವರ್ತಮಾನ ಪತ್ರವನ್ನು, ಬೆಳಗಿನ ಚಹಾಪಾನದ ಕಾಲದಲ್ಲಿಯೆ ಸಂಪೂರ್ಣವಾಗಿ ಓದಲಿಕ್ಕೆ ಆಗಿರಲಿಲ್ಲ. ಮುಖ್ಯ ಮುಖ್ಯ ರಾಜಕೀಯ ವಾರ್ತೆ-ಗಳನ್ನಷ್ಟು ಓದಿ ಮುಗಿಸಿ, ಪ್ರಾತರ್ವಿಧಿಗಳನ್ನೂ ಸ್ನಾನವನ್ನೂ ತೀರಿಸಿಕೊಂಡು ಕಾರ್ಯಾಲಯದ ಕಡೆಗೆ ಹೊರಟೆ. ಹೋಗಿ ನನ್ನ ಕುರ್ಚಿಯ ಮೇಲೆ ಕುಳಿತುಕೊಂಡೆ. ಸಾಹೇಬರ ಸಿಪಾಯಿ, ಮೊದಲುದಿನ ಅಂಚೆಗೆ ಬಂದಿದ್ದ ಅನೇಕ

ಕಾಗದಗಳನ್ನು ನನ್ನ ಟೇಬಲ್ಲಿನ ಮೇಲೆ ಇರಿಸಿಹೋದ. ಹಳ್ಳಿಗಳ ಶಾಲೆಯ ಶಿಕ್ಷಕರ ಅರ್ಜಿಗಳೆಲ್ಲ ನನ್ನ ಕಡೆಗೆ ಬರುವುವು. ಅವುಗಳನ್ನೆಲ್ಲ ನಾನು ಓದಿ-ನೋಡಬೇಕು; ಪ್ರತಿಯೊಂದು ಅರ್ಜಿಯ ಅಡಿಯಲ್ಲಿಯೂ ಅದರ ಸಾರವನ್ನು ಎರಡೇ ಮಾತುಗಳಲ್ಲಿ ಬರೆದಿಟ್ಟು, ಸಾಹೇಬರಿಗೆ ಅವುಗಳನ್ನೆಲ್ಲ ಓದಿ ತೋರಿಸಬೇಕು. ಆ ಮೇಲೆ ಒಂದೊಂದಕ್ಕೂ ಸಾಹೇಬರು ಕೊಡುವ ಉತ್ತರಗಳನ್ನು ಅರ್ಜಿಗಳ ಮೇಲೆ ಬರೆದು, ಅವುಗಳನ್ನು ಅಂಚೆಗೆ ಹಾಕಿಸುವ ಏರ್ಪಾಡನ್ನು ಮಾಡಬೇಕು. ಇದೆಲ್ಲ ನನ್ನ ಕಾರ್ಯಾಲಯದ ಕಾರಕೂನಿಕೆಯ ಯಾಂತ್ರಿಕ ಕಾರ್ಯ.

ನಿತ್ಯದ ಯಾಂತ್ರಿಕ ಪದ್ಧತಿಯಲ್ಲಿಯೆ ನನ್ನ ಕೈ, ಅಂದಿನ ಅಂಚೆಗೆ ಬಂದಿದ್ದ ಒಂದು ಅರ್ಜಿಯನ್ನು ತೆಗೆದುಕೊಂಡು ಕಣ್ಣೆದುರು ಹಿಡಿಯಿತು. ಕಣ್ಣುಗಳು ಓದಿದುವು, ಅದರಲ್ಲಿಯ ವಿಷಯವಿದು :

“ ನಾನು ಸದ್ಯ ಕೆಲಸ ಮಾಡುತ್ತಿರುವ ಊರು ಸಂಪೂರ್ಣ ಬಯಲು-ಸೀಮೆ. ನನ್ನ ಹೆಂಡತಿಯು ತೀರ ನಡುಮಲೆನಾಡಿನವಳು. ಆದುದರಿಂದ ಇಲ್ಲಿಯ ಹವೆಯು ಅವಳಿಗೆ ತಡೆಯಲೊಲ್ಲದು. ಬಂದಾಗಿನಿಂದಲೂ ಹಾಸಿಗೆ ಹಿಡಿದುಬಿಟ್ಟಿದ್ದಾಳೆ. ಖಾವಂದರವರು ನನ್ನನ್ನು ಬೇರೆ ತಂಪುಪ್ರದೇಶದ ಹಳ್ಳಿಗೆ ವರ್ಗಮಾಡಿ, ಈ ಬಡವನ ಸಂಸಾರವು ಸರಿಯಾಗಿ ಸಾಗುವಂತೆ ಉಪ-ಕಾರ ಮಾಡಬೇಕಾಗಿ ನಮ್ರವಿನಂತಿ. ”

ಸರಿ ! ಅದಕ್ಕೆ ಮಾಡಬೇಕಾದ ವಿಧಿಯನ್ನು ಮಾಡಿ, ಇನ್ನೊಂದನ್ನು ಕೈಗೆ ತೆಗೆದುಕೊಂಡು ನೋಡಿದೆ. ಆ ಅರ್ಜಿಯಲ್ಲಿಯ ಬೇಡಿಕೆಯು ಮೊದಲಿನದಕ್ಕೆ ತೀರ ವಿರುದ್ಧವಾದುದು :

“ ನಾನು ಶಿಕ್ಷಕನಾಗಿ ಇರುವುದು ಈ ಮಲೆನಾಡಿನ ಹಳ್ಳಿಯಲ್ಲಿ. ಇಲ್ಲಿಗೆ ಬಂದ ಮರುದಿನದಿಂದಲೇ ನಾನು ಮಲೇರಿಯಾ ಜ್ವರದಿಂದ ಮಲಗಿಕೊಂಡಿದ್ದೇನೆ. ಶಾಲೆಯ ಕೆಲಸ ನಿಲ್ಲಬಾರದೆಂದು ಜ್ವರದಲ್ಲಿಯೇ ಶಾಲೆಗೆ ಹೋಗಿ ಕುಳಿತುಕೊಳ್ಳುತ್ತೇನೆ. ನಾಲ್ಕೆಂಟು ಸಲ ಕ್ವಿನೀನು ತೆಗೆದುಕೊಂಡರೂ ಜ್ವರವೇನೂ ನಿಲ್ಲಲೊಲ್ಲದು. ದಯೆಯಿಟ್ಟು ನನ್ನನ್ನು ಒಂದು ಬೆಳುವಲದ ಹಳ್ಳಿಗೆ ವರ್ಗಮಾಡಿ, ಮಹನೀಯರಾದ ತಾವು ಪುಣ್ಯಕಟ್ಟಿಕೊಳ್ಳಬೇಕು. ”

ಆಯಿತು. ಅದರ ಸಾರವನ್ನೂ ಕೆಂಪು ಮಸಿಯಿಂದ ಬರೆದು, ಮತ್ತೊಂದು ಅರ್ಜಿಯನ್ನು ಕೈಯಲ್ಲಿ ತೆಗೆದುಕೊಂಡೆ. ಅದರಲ್ಲಿಯ ಸಂಗತಿ ಹೀಗಿತ್ತು ;

" ನಾನು ಕೆಲಸ ಮಾಡುತ್ತಿರುವ ಈ ಹಳ್ಳಿಯಲ್ಲಿ ಬಾವಿ-ಕೆರೆಗಳು ಬತ್ತಿಹೋಗಿವೆ. ಕುಡಿಯಲಿಕ್ಕೆ ಒಂದು ಕೊಡ ನೀರನ್ನು ತರಬೇಕಾದರೆ ನಾಲ್ಕು ಮೈಲು ದೂರಹೋಗಿ ಹೊತ್ತುಕೊಂಡು ಬರಬೇಕಾಗುವುದು; ಒಪ್ಪತ್ತಿನ ವೇಳೆಯನ್ನು ನೀರಿಗಾಗಿಯೆ ಕಳೆಯಬೇಕಾಗುವುದು. ಆದುದರಿಂದ, ಮಳೆ-ಗಾಲ ಬರುವ ವರೆಗೆ ಶಾಲೆಯನ್ನು ಒಂದೆಹೊತ್ತು ಹಾಕಲಿಕ್ಕೆ ಅಪ್ಪಣೆ ದಯೆ-ಪಾಲಿಸಬೇಕು. "

ಸರಿ ! ಆದರ ಹಣೆಬರೆಹ—ಅಲ್ಲಲ್ಲ—ಅಡಿಬರೆಹವನ್ನೂ ಬರೆದಾಯಿತು. ಇನ್ನೊಂದನ್ನು ತೆಗೆದುಕೊಂಡು ನೋಡಲುತೊಡಗಿದೆ; ವಿಚಿತ್ರವಾದ ಸಂಗತಿ :

" ನಮ್ಮ ಊರಲ್ಲಿ ಉತ್ತಮ ಕಂಬಳಿಗಳು ತಯಾರಾಗುತ್ತವೆ. ಮೊನ್ನೆಯ ಸಲ ಎ. ಡಿ. ಇ. ಐ. ಸಾಹೇಬರು ನಮ್ಮ ಶಾಲೆಯ ಇನ್‌ಸ್ಪೆಕ್ಶನ್ನಿಗೆ ಬಂದಾಗ, ತಮಗೆರಡು ಕಂಬಳಿಗಳನ್ನು ಕೊಡಿಸಲಿಕ್ಕೆ ಹೇಳಿದರು. ನಾನು ಒಳ್ಳೆಯ-ವೆರಡು ಕಂಬಳಿಗಳನ್ನು ತರಿಸಿಕೊಟ್ಟು, ಅದರ ಬೆಲೆಯ ಹಣವನ್ನು ಕೊಡಲು ಕೇಳಿದೆ. ಅವರು ಹಣವನ್ನು ಕೊಡಲಿಲ್ಲವಿಷ್ಟೇ ಅಲ್ಲ; ನನ್ನ ವಿಷಯದಲ್ಲಿ ಕೆಟ್ಟ ಶರಾ ಬರೆದು 'ನಿನ್ನನ್ನು ಈ ಊರಿಂದ ಎತ್ತಿ ಒಗೆಯುತ್ತೇನೆ' ಎಂದು ಬೈದು-ಹೋಗಿದ್ದಾರೆ. ನಾನು ಬಡವ. ನನ್ನ ಈ ಇದ್ದೂರಲ್ಲಿ ಇದ್ದರೇ ನನಗೆ ಹೆಚ್ಚು ಅನುಕೂಲವಾಗುವುದು. ಮಹಾತ್ಮರಾದ ತಾವು ಈ ವಿಷಯವನ್ನು ವಿಚಾರ-ಮಾಡಿ, ಅವರಿಂದ ಕಂಬಳಿಯ ಬೆಲೆ ಕೊಡಿಸಬೇಕಲ್ಲದೆ, ನನ್ನನ್ನು ಬೇರೆಕಡೆಗೆ ವರ್ಗಮಾಡಬಾರದಾಗಿ ಬೇಡಿಕೊಳ್ಳುತ್ತೇನೆ. ಒಂದುವೇಳೆ ಹಣವು ಬಾರ-ದಿದ್ದರೂ ಅದನ್ನು ನಾನು ಹೇಗಾದರೂ ಮಾಡಿ ಕೊಟ್ಟು ತೀರಿಸುತ್ತೇನೆ. ದಯೆ-ಯಿಟ್ಟು ನನ್ನನ್ನು ಇಲ್ಲಿಯೆ ಇಡುವ ಉಪಕಾರಮಾಡಬೇಕು.

ಈ ಅರ್ಜಿಯನ್ನು ಓದಿದಾಗ ಸ್ವಲ್ಪ ನಗೆಯೂ ಬಂದಿತು. ನಗೆ ಬರ-ಬಾರದೆ? ಕಾರಕೂನನಾದರೇನಾಯಿತು; ನಾನೂ ಮಾನವನೇ ಅಲ್ಲವೆ? ಕಿರು-ನಗೆಯ ಮೊಗದಲ್ಲಿಯೆ ಅದರ ಮೇಲೂ ಟಿಪ್ಪಣಿಯನ್ನು ಬರೆದೆ. ಇನ್ನೊಂದು ಅರ್ಜಿಯನ್ನು ಕೈಯಲ್ಲಿ ತೆಗೆದುಕೊಂಡೆ. ಅದು ಒಬ್ಬ ಶಿಕ್ಷಿಕೆಯ ಬಿನ್ನಹ :

" ನಾನೀಗ ಶಿಕ್ಷಿಕೆಯಾಗಿರುವ ಹಳ್ಳಿಯಲ್ಲಿ ಜನರು ಬಹಳ ಕೆಟ್ಟವರು. ಊರ ಮುಂದಾಳಾಗಿ ಇರುವವರೇ ಹೇಳಿಮಾಡಿಸಿದ ಪುಂಡರಾಗಿ ಇರುವರು. ಹೆಣ್ಣುಮಕ್ಕಳು ಇಲ್ಲಿ ಮಾನಕಾಯ್ದುಕೊಂಡು ಇರುವುದೆಂದರೆ ಅಸಾಧ್ಯವಾದ ಮಾತೇ ಎನಿಸುವಂತಿದೆ. ನನಗಿಂತ ಮೊದಲು ಇಲ್ಲಿ ಶಿಕ್ಷಿಕೆಯಾಗಿ ಇದ್ದವಳು, ತನ್ನ ಕೆಲಸಕ್ಕೆ ರಾಜೀನಾಮೆಕೊಟ್ಟು ಈ ಊರ ಗೌಡರ ಮಗನೊಂದಿಗೆ ಉಡಿಕೆಮಾಡಿಕೊಂಡದ್ದು ಖಾವಂದರವರಿಗೆ ಗೊತ್ತಿದ್ದ ವಿಷಯ. ಅವಳಿಗಿಂತ ಹಿಂದೆ ಇದ್ದವಳು ಶಾಲೆಯ ಕೋಣೆಯಲ್ಲಿಯೆ ಉರುಲು ಹಾಕಿಕೊಂಡ ಸಂಗತಿಯೂ ಸರಕಾರಕ್ಕೆ ವಿದಿತವಿದೆ. ನನಗೆ ಈ ಊರಲ್ಲಿ ಇರುವುದೆಂದರೆ ಸಾಧ್ಯವೇ ಇಲ್ಲ. ಕೂಡಲೆ ನನ್ನನ್ನು ಬೇರೆ ಕಡೆಗೆ ವರ್ಗಮಾಡಬೇಕು. ಇಲ್ಲ-ವಾದರೆ ನನಗೆ ಆರುತಿಂಗಳ ರಜೆಯನ್ನು ಮಂಜೂರ್‌ಮಾಡಬೇಕು. "

ಓದಿ ನನ್ನ ಎದೆಯು ನಡುಗಿತು. ಆ ಹಳ್ಳಿಯ ಶಿಕ್ಷಿಕೆಯ ದುರ್ದಶೆಯ ಕಲ್ಪನೆ ನನ್ನ ಕರುಳನ್ನು ಇರುವೆಯಾಗಿ ಕಚ್ಚತೊಡಗಿತು. ಮತ್ತೆ ಕಾರಕೂನಿ-ಕೆಯ ಯಂತ್ರವಾಗಿ, ಆದರ ಮೇಲೆಯೂ ಅಡಿಬರೆಹವನ್ನು ಬರೆದಿಟ್ಟೆ. ತಲೆ-ಯಲ್ಲಿ ಹೊಸವಿಚಾರವೊಂದು ಮಿಂಚಿನಂತೆ ಸುಳಿಯಿತು : ಈ ಬರುವ ಅರ್ಜಿ-ಗಳನ್ನೆಲ್ಲ ಮನಸ್ಸುಗೊಟ್ಟು ಅಭ್ಯಾಸಮಾಡುತ್ತಹೋದರೆ, ನಮ್ಮ ಹಳ್ಳಿಯ ಸಮಾಜದ ಅನೇಕ ವಿಷಯಗಳು ತಿಳಿಯುವುವಲ್ಲದೆ, ಅನೇಕ ವ್ಯಕ್ತಿಗಳ ಸ್ವಭಾವಗಳೂ ಗೊತ್ತಾಗುವುವು ! ನಾನು ಲೇಖನಕಲೆಯನ್ನು ಬೆಳೆಸಿಕೊಂಡರೆ, ಈ ಅರ್ಜಿಗಳ ಅಭ್ಯಾಸದಿಂದಲೇ ಅನೇಕ ಕತೆ-ಕಾದಂಬರಿಗಳಿಗೆ ವಸ್ತುಗಳನ್ನು ಪಡೆದುಕೊಳ್ಳಬಹುದು.

ಓ! ಲೇಖನಕಲೆಯನ್ನು ಬೆಳೆಸಿಕೊಂಡರೆ !.... ಹೇಗೆ ಬೆಳೆಸಿಕೊಳ್ಳಬೇಕು ನಾನು. ಕಣ್ಣುಮುಚ್ಚುವ ವರೆಗೂ ಕರಡುಗಳನ್ನು ಗೀಚುವ ನನಗೆ ಲೇಖನ-ಕಲೆ ಒಲಿಯುವುದೆ ? 'ಕಾಗೆ ಕೋಗಿಲವಾಗಲು ಹವಣಿಸುವಂತಹ ಹುಚ್ಚು ಹಂಬಲವಿದು ! '— ಎಂದುಕೊಂಡು ನಿಟ್ಟುಸಿರೊಂದನ್ನು ಹೊರಕ್ಕೆ ಹಾಕಿದೆ. ಮತ್ತೆ ನನ್ನ ಓದುವ ಬರೆಯುವ ನಿತ್ಯದ ಹೋರೆಗೆ ತೊಡಗಿದೆ. ಯಾವ ಅರ್ಜಿ ಯನ್ನು ತೆಗೆದುಕೊಂಡು ಓದಿದರೂ, ಪ್ರತಿಯೊಂದರ ವಿಷಯವೂ ನನ್ನ ಹೃದ ಯಕ್ಕೆ ಹೋಗಿ ತಾಗುತ್ತಲಿತ್ತು. ಅಂದು ನಾನೇಕೆ ಹಾಗೆ ಆಗಿದ್ದೆನೋ ನನ್ನದು

ನನಗೇ ತಿಳಿಯದಂತಾಯಿತು. ಬೆಳಗಿನಲ್ಲಿ ಎದ್ದು ನಾನು ಯಾರ ಮುಖವನ್ನು ನೋಡಿದ್ದೆನೋ—ಎಂಬುದನ್ನು ಜ್ಞಾಪಿಸಿಕೊಂಡೆ. ಮತ್ತಾವ ದುರ್ಮುಖವನ್ನೂ ನಾನು ಕಂಡಿರಲಿಲ್ಲ. ಚಹವನ್ನು ಮಾಡಿ ನನ್ನನ್ನು ಎಬ್ಬಿಸಲು ಬಂದ ನನ್ನ ಪ್ರೇಯಸಿಯ ಮೆಲುನಗೆಯ ಮೊಗವನ್ನೇ ನಾನಂದು ಮೊದಲು ಕಂಡುದು. ಆಕೆಯ ಮುಖದರ್ಶನದಲ್ಲಿ ಇಂತಹ ಗುಣವಿರುವುದೆ ?

ಇನ್ನೊಂದು ಅರ್ಜಿಯನ್ನು ತೆಗೆದುಕೊಂಡು ಓದಲು ತೊಡಗಿದೆ. ಅದರಲ್ಲೊಂದು ವಿಚಿತ್ರ :

"ನಾನು ಇಲ್ಲಿ ಬಂದಮೇಲೆ ಒಂದು ಬಾಡಿಗೆಯ ಮನೆಯಲ್ಲಿ ಇರತೊಡಗಿದೆ. ಬಾಡಿಗೆಯೇನು ಹೆಚ್ಚಲ್ಲವಾದರೂ, ಗೊತ್ತಿಲ್ಲದೆ ನಾನು ದೊಡ್ಡದೊಂದು ತೊಂದರೆಗೆ ಒಳಗಾಗಿದ್ದೇನೆ. ನಾನು ಬಾಡಿಗೆಗೆ ಹಿಡಿದ ಮನೆಯು ದೆವ್ವದ ಮನೆಯಂತೆ. ಆ ಮನೆಯಲ್ಲಿ ಅತ್ತೆ ಸೊಸೆ ಇಬ್ಬರೂ ಸತ್ತು ದೆವ್ವವಾಗಿದ್ದಾರಂತೆ. ಎಂಟುದಿನಗಳಲ್ಲಿಯೆ ಆ ಎರಡೂ ದೆವ್ವಗಳು ನನ್ನ ಹೆಂಡತಿಗೆ ಗಂಟು-ಬಿದ್ದಿವೆ. ಒಮ್ಮೆ ಅತ್ತೆಯ ದೆವ್ವ ಬಂದು ಬಡಬಡಿಸಹತ್ತುತ್ತದೆ; ಇನ್ನೊಮ್ಮೆ ಸೊಸೆಯ ದೆವ್ವ ಬಂದು ಕುಣಿದಾಡಲು ಹಚ್ಚುತ್ತದೆ. 'ನಾನು ಈ ಊರಿಗೇಕೆ ಬಂದೆನೋ ದೇವರೇ ! ' ಎನಿಸಿಬಿಟ್ಟಿದೆ ನನಗೆ. ಈಗ ಹೆಂಡತಿಗೆ ಬಡಿದು ಕೊಂಡ ದೆವ್ವಗಳನ್ನು ಬಿಡಿಸಲಿಕ್ಕೆ ಮಿರಜಿಯ ಮಾಂತ್ರಿಕರ ಕಡೆಗೆ ಹೋಗ-ಬೇಕಾಗಿದೆ. ಆದುದರಿಂದ ದಯೆಯಿಟ್ಟು ನನಗೆ ಒಂದು ತಿಂಗಳ ಹಕ್ಕಿನ ರಜೆಯನ್ನು ಮಂಜೂರ ಮಾಡಬೇಕಾಗಿ ವಿನಯದಿಂದ ಪ್ರಾರ್ಥಿಸುತ್ತೇನೆ. "

ದೆವ್ವದ ಅಸ್ತಿತ್ವದಲ್ಲಿ ವಿಶ್ವಾಸವಿಲ್ಲದ ನನಗೆ, ಆ ಶಿಕ್ಷಕನ ಹೆಂಡತಿಯನ್ನು ಹಿಡಿದ ದೆವ್ವಗಳನ್ನು ನೋಡಬೇಕೆಂದು ಮನಸ್ಸು ಹರಿದಾಡಿತು. ಆದರೆ ಆ ಶಿಕ್ಷಕನಿರುವ ಹಳ್ಳಿ ಎಂಬತ್ತು ಮೈಲುಗಳ ಅಂತರದ ಮೇಲೆ. ಅಷ್ಟೊಂದು ದೂರ ಹೋಗಿಬರಬೇಕಾದರೆ ಹತ್ತಿಪ್ಪತ್ತು ರೂಪಾಯಿಗಳಾದರೂ ವೆಚ್ಚಕ್ಕೆ ಬೇಡವೆ ? ವಿದ್ಯಾವಿಭಾಗದಲ್ಲಿ ಕಾರಕೂನನಾಗಿ ಕೆಲಸ ಮಾಡುವ ನನ್ನ ಜೇಬಿನಲ್ಲಿ, ಹೆಚ್ಚಿನ ಹಣವು ಎಲ್ಲಿಯದು ಉಳಿಯಬೇಕು ? ಹಾಗೆ ಉಳಿಯುತ್ತಿದ್ದರೆ, ಮೊನ್ನೆ-ಮೊನ್ನೆಯೆ ಜ್ವರದಿಂದ ಮಲಗಿದಾಗಿನ ಡಾಕ್ಟರ್ ಬಿಲ್ಲು ಇನ್ನೂ ಬಿಲ್ಲಾಗಿಯೆ ಎದೆಗೆ ಏಕೆ ಚುಚ್ಚುತಿತ್ತು ? ಬಡವನ ಎದೆಯ ಹಾರಯಿಕೆ

ಮಡುವಿನಲ್ಲಿದ್ದ ಬೊಬ್ಬುಳಿಕೆ—ಎರಡಕ್ಕೂ ಅಷ್ಟೇ ಆಯುಷ್ಯ; ಒಂದೆ ಬಗೆಯ ಫಲ!

ಬಂದ ಎಲ್ಲ ಕಾಗದಗಳನ್ನೂ ಓದಿ ಆಯಿತು; ಸಾಹೇಬರ ಪರಾಮರಿಕೆಗಾಗಿ ಬರೆಯಬೇಕಾದುದನ್ನು ಬರೆದಾಯಿತು. ಅಂದು ಬೆಳಗಿನ ಆಫೀಸು. ಹನ್ನೊಂದುವರೆಯ ಗಂಟೆಯು ಹೊಡೆದಾಕ್ಷಣವೇ ಕಾರ್ಯಾಲಯವನ್ನು ಬಿಟ್ಟು ಹೊರಬಿದ್ದೆ. ತಲೆಯಲ್ಲಿ ಅಂದಿನ ಅರ್ಜಿಗಳಲ್ಲಿಯ ವಿಷಯಗಳೇ ಒಂದರ ಹಿಂದೊಂದು ಸುಳಿದಾಡುತ್ತಿದ್ದುವು.

ಸಂತೆಯಾಯಿತು; ಊಟವಾಯಿತು; ವಾಮಕುಕ್ಷಿಯಾಯಿತು. ಇನ್ನೂ ಎರಡುವರೆಯಾಗಿರಲಿಲ್ಲ; ಅಷ್ಟರಲ್ಲಿಯೆ ಸ್ಟೋವ್ ಹತ್ತಿಸಿದ ಸಪ್ಪುಳ ಕೇಳಿಸಿತು. ನನಗದರ ಸೂಚನೆ ಗೊತ್ತು. ಮೂರು ದಿನಗಳಿಂದಲೂ 'ಬಾಲನಾಗಮ್ಮ'ನ ಮಾಹಾತ್ಮ್ಯಕಥನ ನನ್ನೆದುರು ನಡೆದೇ ನಡೆದಿತ್ತು. ಎದ್ದು ಒಳಗೆ ಹೋಗಿ ನೋಡುತ್ತೇನೆ: ನಮ್ಮಾಕೆ ನಿಬ್ಬಣಿಗರಂತೆ ಸಿಂಗರಿಸಿಕೊಂಡು ಚಲಚ್ಚಿತ್ರಯಾತ್ರೆಗಾಗಿ ಸಿದ್ಧಳಾಗಿದ್ದಳು. ಆಗಿನ ಆಕೆಯ ಬೆಡಗು-ಬಿನ್ನಾಣಗಳನ್ನು ಕಣ್ಣರಳಿಸಿ ನೋಡುತ್ತ ನಿಂತ ನನಗೆ, 'ಈಗ ಸಿನೇಮಾಕ್ಕೆ ಹೋಗುವುದು ಬೇಡ' ಎಂದು ಹೇಳುವ ಧೈರ್ಯವಾದೀತೆ? ಮುಖ ತೊಳೆದುಕೊಂಡು ಚಹವನ್ನು ಗುಟುಕರಿಸಿದೆ. ಇದ್ದುದರಲ್ಲಿಯೆ ಒಳ್ಳೆಯ ಉಡಿಗೆ-ತೊಡಿಗೆ ಮಾಡಿಕೊಂಡು ನಾನೂ ಸಿದ್ಧನಾದೆ. ಅಂತಹ ಬೆಡಗಿನ ಹೆಣ್ಣಿನ ಪತಿಯೆನಿಸಿಕೊಳ್ಳಬೇಕಾದರೆ, ನಾನೂ ಸ್ವಲ್ಪ ಸೋಗುಗಾರಿಕೆಯನ್ನು ಮಾಡಲೇಬೇಕಲ್ಲವೆ? ನನಗೆ ಬೇಕಾಗದೆ ಹೋದರೂ ಆಕೆಗೆ ಇದೆಲ್ಲ ಬೇಕು. ಮಧುರದಾಂಪತ್ಯ ಬೇಕಾದರೆ ಒಬ್ಬರಿಗಾಗಿ ಇನ್ನೊಬ್ಬರು, ತಮಗೆ ಬೇಡವೆನಿಸಿದುದನ್ನೂ ಮಾಡಬೇಕಾಗುವುದೆಂಬುದನ್ನು ಇತ್ತೀಚೆಗೆ ಅರಿತುಕೊಂಡಿದ್ದೇನೆ.

*　　*　　*　　*

ಸಿನೇಮಾ ನೋಡಿಕೊಂಡು ಮನೆಗೆ ಮರಳಿ ಬಂದಾಗ ಎಂಟುಗಂಟೆ ರಾತ್ರಿಯೆ ಆಗಿತ್ತು. 'ಬಾಲನಾಗಮ್ಮ" ಚಿತ್ರವೆಂದರೆ ಒಂದು ಚಿತ್ರದ ಟಿಕೀಟು ಕೊಂಡು ಎರಡುಚಿತ್ರ ನೋಡಿದಂತೆ. ನಾಲ್ಕೈದು ತಾಸಿನ ಡೊಂಬರಾಟವದು! ಅದರೊಳಗಿನ ಮಾಂತ್ರಿಕ, ಭೂತಗಳು, ಪಿಶಾಚಗಳು ಇವುಗ-

ಕೆಲ್ಲದರ ಅದ್ಭುತ-ಭಯಾನಕ ಸನ್ನಿವೇಶಗಳು, ನನಗೆ ರುಚಿಸಲಿಲ್ಲವಾದರೂ, ನನ್ನ ಮನಸ್ಸಿನ ಮೇಲೆ ಅವು ಪರಿಣಾಮಮಾಡದೆ ಬಿಡಲಿಲ್ಲ. ಮನೆಗೆ ಬಂದಾಗ ದೇಹ-ಮನಸ್ಸುಗಳೆರಡೂ ಬಲಗುಂದಿ ಹೋಗಿದ್ದುವು. ನಮ್ಮಾಕೆ ಮಾತ್ರ ಅದೊಂದು ಲೀಲೆಯೆಂದು ಭಾವಿಸಿದ್ದಳೇನೊ ! ಚಿತ್ರವನ್ನು ನೋಡಿಬಂದ ಉತ್ಸಾಹ ಅವಳನ್ನು ನಲಿದಾಡಿಸತೊಡಗಿತ್ತು. ಉತ್ಸಾಹದ ಭರದಲ್ಲಿಯೆ ವಿಶೇಷಪ್ರಸಾಧನಗಳನ್ನೆಲ್ಲ ಕಳಚಿ ಇಟ್ಟು, ನಿತ್ಯದ ಗರತಿಯಾಗಿ ಮನೆಗೆಲಸಕ್ಕೆ ತೊಡಗಿದಳು. ನಾನು ಬಟ್ಟೆ-ಬರೆ ತೆಗೆದು ಆರಾಮ ಕುರ್ಚಿಯ ಮೇಲೆ ಬಿದ್ದು-ಕೊಂಡೆ. ಹತ್ತಿರದ ಟೇಬಲ್ಲಿನ ಮೇಲೆ ಇದ್ದ ಅಂದಿನ ದೈನಿಕಪತ್ರವನ್ನು ತೆಗೆದುಕೊಂಡು ಅದರ ಅಂಕಣಗಳ ಮೇಲೆ ಕಣ್ಣಾಡಿಸತೊಡಗಿದೆ. ಮೂರನೆಯ ಪುಟದಲ್ಲಿ ' ದೆವ್ವ-ಭೂತಗಳ ಅಸ್ತಿತ್ವ ' ಎಂಬ ವಿಶೇಷ ಲೇಖನವೊಂದು ಪ್ರಕಟ-ವಾಗಿತ್ತು. ಅನೇಕ ಜನ ಪಾಶ್ಚಿಮಾತ್ಯರು ಅನುಭವಿಸಿದ—ದೆವ್ವಗಳ ಅಸ್ತಿತ್ವದ ವಿಷಯಕ—ಕತೆಗಳು ಆ ಲೇಖನದಲ್ಲಿ ಉದಾಹೃತವಾಗಿದ್ದುವು. ಕುತೂಹಲ ಭಾವದಿಂದಲೇ ಆ ಲೇಖನವನ್ನು ಓದಿದೆ. ಅದರ ಪರಿಣಾಮವೆಂದರೆ, ನನ್ನಾಕೆ ಊಟಕ್ಕೆಂದು ಎಬ್ಬಿಸಿದಾಗ ಕುರ್ಚಿಯನ್ನು ಬಿಟ್ಟು ಮೇಲಕ್ಕೆದ್ದೆ; ಆಗ ನನ್ನ ನೆರಳನ್ನೇ ನಾನು ಕಂಡು ಬೆಚ್ಚಿಬಿದ್ದೆ; ಎದೆ ಗಡಗಡನೆ ನಡುಗಿತು. ಮತ್ತೆ ನನ್ನ ಭೀತಿಗಾಗಿ ನಾನೇ ನಕ್ಕುಬಿಟ್ಟು, ಒಳಗೆ ಹೋಗಿ ಊಟವನ್ನು ತೀರಿಸಿದೆ. ಕೈಗಳನ್ನು ತೊಳೆದುಕೊಳ್ಳಲು ಕತ್ತಲೆಯಲ್ಲಿ ಹೊರಗೆ ಹೋಗಲಿಕ್ಕೂ ನನ್ನ ಮನಸ್ಸು ಹಿಂಜರಿಯಿತು. ಹತ್ತಿರದ ಕಿರುಬಚ್ಚಲಲ್ಲಿಯೇ ಕೈಗಳನ್ನು ತೊಳೆದು-ಕೊಂಡು, ಶತಪದವನ್ನಿಡುವ ಉತ್ಸಾಹವೂ ಇಲ್ಲದವನಾಗಿ, ಕೋಣೆಗೆ ಹೋಗಿ ಮಂಚದ ಮೇಲೆ ಬಿದ್ದುಕೊಂಡೆ.

ಮನಸ್ಸಿನಲ್ಲಿ ದೆವ್ವ-ಭೂತಗಳ ಯೋಚನೆಯೇ ಯೋಚನೆ. ಬೆಳಗಿನಲ್ಲಿ ಓದಿದ, ಶಿಕ್ಷಕನ ಅರ್ಜಿಯಲ್ಲಿಯ ಆತನ ಹೆಂಡತಿಯನ್ನು ಹಿಡಿದುಕೊಂಡ ಜೋಡುದೆವ್ವಗಳ ವಿಷಯವೂ ಹೃದಯವನ್ನು ಕೆಣಕಲುತೊಡಗಿತು. ಅದ-ರೊಂದಿಗೆ ಮಿಕ್ಕ ಅರ್ಜಿಗಳಲ್ಲಿ ಓದಿದ ಬೇರೆಬೇರೆ ಶಿಕ್ಷಕರ ಕಷ್ಟ-ಕಾರ್ಪಣ್ಯಗಳ ಚಿತ್ರಗಳೂ ನೆನಪಿನ ಪಟದ ಮೇಲೆ ಮೂಡತೊಡಗಿದುವು. ಹಳ್ಳಿಗಳಲ್ಲಿ ಕೆಲಸ ಮಾಡುವ ಶಿಕ್ಷಕರ ಬಗೆಗೆ ನನ್ನ ಹೃದಯದಲ್ಲಿ ಕಳವಳ-ಕನಿಕರಗಳು ಮೂಡಿ

ನಿಂತುವು. ಏನೇನೋ ಒಂದರ ಹಿಂದೊಂದು ಯೋಚನೆಗಳು :

" ನಮ್ಮ ಸಾಹೇಬ ಕಲ್ಲೆದೆಯವ. ಹಳ್ಳಿಯ ಶಿಕ್ಷಕರ ಕಷ್ಟ-ನಷ್ಟಗಳ ವಿಚಾರವನ್ನೇ ಆತ ಮಾಡಲಾರ........

" ಪಾಪ, ಆ ಶಿಕ್ಷಕರು ಇಷ್ಟೊಂದು ತಮ್ಮ ತೊಂದರೆಗಳನ್ನು ತೋಡಿ-ಕೊಂಡಿದ್ದಾರೆ. ನಾಳೆಯ ದಿನ ಅವರಿಗೆಲ್ಲ ಏನೆಂದು ಉತ್ತರ ಬರೆಯಿಸುವನೋ ಮಹಾರಾಯ !........

" ಪಾಪ, ಆ ಶಿಕ್ಷಿಕೆಗೆ ಹಳ್ಳಿಯ ಪುಂಡರು ಏನೇನು ಕಷ್ಟಕೊಡು-ತ್ತಿದ್ದಾರೊ ! ........

" ಆ ದೆವ್ವ ಹಿಡಿದ ಹೆಂಡತಿಯ ಗಂಡನಿಗೆ ರಜೆಯನ್ನು ಮಂಜೂರ-ಮಾಡದೆ ಹೋದರೆ, ಆ ಬಡವ ಎಂತೆಂತಹ ತೊಂದರೆಗಳಿಗೆ ಒಳಗಾಗುತ್ತಾನೋ.-

" ಬಾಲನಾಗಮ್ಮ....ಮಂತ್ರವಾದಿ....ದೆವ್ವಗಳು....ದೆವ್ವಗಳು ಸತ್ಯ.... ಮಾಸ್ತರು....ಅವನ ಹೆಂಡತಿ....ಎರಡು ದೆ–..ವ್ವ........ಘುರ್ ಘುರ್........ ಘುರ್........ಘುರ್........"

‡ ‡ ‡ ‡ ‡

ಕತ್ತಲೆಯೊ ? ಕತ್ತಲೆಯಲ್ಲ. ಬೆಳಕೋ ? ಬೆಳಕೂ ಅಲ್ಲ. ಬೂದು-ಬಣ್ಣದ ಮಂಜುಬೆಳಕು ಎಲ್ಲಕಡೆಗೂ ಹಬ್ಬಿಕೊಂಡಿದೆ. ನಾನು ಒಬ್ಬನೇ ಒಬ್ಬ, ಒಂದು ದಾರಿಯನ್ನು ಹಿಡಿದು ನಡೆದಿದ್ದೇನೆ. ದಾರಿಯ ಎಡ-ಬಲಗಳಲ್ಲಿ ಎಂತೆಂತಹವೋ ಮರಗಳ ಗುಂಪೇ ಗುಂಪು ! ಈಚಲುಮರಗಳ ಸಾಲು ಎಲ್ಲೆಲ್ಲಿಯೂ ಕಾಣುತ್ತಲಿವೆ. ಗಾಳಿಯ ಸುಳಿದಾಟವೇ ಇರದುದರಿಂದ, ಮರಗಳೆಲ್ಲ ಚಲನೆಯಿಲ್ಲದೆ ನಿಂತುಕೊಂಡಿವೆ. ನಡೆಯುತ್ತಿರುವ ದಾರಿ ಕಾಣುತ್ತಿದ್ದಿತಾದರೂ, ಎಡ-ಬಲಗಳ ಮರಗಳು ಕತ್ತಲಲ್ಲಿಯೆ ನಿಂತುಕೊಂಡಿದ್ದುವು. ದಾರಿ-ನಡೆಯುತ್ತಿದ್ದ ನನಗೆ ಕಳ್ಳರ ಭಯ; ಹಾವು-ಹುಳುಗಳ ಹೆದರಿಕೆ; ದೆವ್ವ-ಭೂತಗಳ ಅಂಜಿಕೆ! ನಿಡಿದಾಗಿ ನಿಂತುಕೊಂಡ ಈಚಲ ಮರಗಳು, ದೆವ್ವಗಳ ದಂಡಿನ ನೆನ-ಪನ್ನು ತಂದುಕೊಡುತ್ತಲಿದ್ದುವು. ನಾನು ದಾರಿಯನ್ನು ನಡೆದೇ ನಡೆಯುತ್ತಿದ್ದೆ.

ಅದೇ ದಾರಿಯಲ್ಲಿಯೆ ಒಂದು ಊರು ಸಿಕ್ಕಿತು. ನನಗೆ ತೀರ ಪರಿಚಿತ ವಾದ ಹಳ್ಳಿಯದು. ನಮ್ಮ ಹಿರಿಯಣ್ಣ ಅಲ್ಲಿ ಶಿಕ್ಷಕರಾಗಿ ಇದ್ದುದರಿಂದ, ನನ್ನ

ಚಿಕ್ಕತನದ ಮೂರು-ನಾಲ್ಕು ವರ್ಷಗಳು ಅಲ್ಲಿಯೇ ಹೋಗಿವೆ. ಅಲ್ಲಿಯ ಕಬ್ಬಿನ ತೋಟಗಳು, ಮೂರು-ನಾಲ್ಕು ತಿಂಗಳು ಎಡೆಬಿಡದೆ ನಡೆಯುವ ಆಲಿ-ಮನೆಗಳು, ಹೊಂಬಣ್ಣದ ಬೆಲ್ಲದ ಪೆಂಟಿಗಳು, ಬೆಲ್ಲದಂತೆಯೆ ಸವಿಯಾಗಿದ್ದ ಅಲ್ಲಿಯ ಜನರ ನಡೆ-ನುಡಿಗಳು, ಇವೆಲ್ಲ ನನ್ನ ನೆನಪಿನಿಂದ ಎಂದೂ ತೊಲಗದಂತಹವು. ಅಲ್ಲದೆ ಆ ಹಳ್ಳಿಯ ಮುಂಗಡೆಯಲ್ಲಿ ಹಾಯ್ದು ಮುಂದುವರೆದ ರಾಜಮಾರ್ಗ, ಅದಕ್ಕೆ ಹೊಂದಿಯೆ ಇದ್ದ ಗಾಡಿಗಳ ಪಾಳೆಯ, ಗೌಡರ ವಿಶ್ರಾಂತಿಧಾಮ—ಇವೆಲ್ಲ ನನ್ನ ಮನದಲ್ಲಿ ಮನೆಮಾಡಿಕೊಂಡೇ ಇದ್ದುವು. ಆ ವಿಶ್ರಾಂತಿಧಾಮದ ಮುಂಬದಿಯಲ್ಲಿರುವ ಮರಕ್ಕೆ ಕಟ್ಟಿದ ಜೋಕಾಲಿ, ಹಿಂದೆ ನನ್ನನ್ನು ಆನಂದಲಹರಿಯ ಮೇಲೆ ತೇಲಾಡಿಸುತ್ತಿತ್ತು !

ಬೆಲ್ಲಬಾಳು ! ಬೆಲ್ಲಬಾಳು ! ಆ ಹಳ್ಳಿಯ ಹೆಸರು ಬೆಲ್ಲಬಾಳು ! ದಾರಿಯಲ್ಲಿ ಸಿಕ್ಕಿದುದು ಬೆಲ್ಲಬಾಳೆಂದು ನೆನಪಾದೊಡನೆಯೆ, ಅದನ್ನೊಮ್ಮೆ ಕಂಡು ಹಿಂದಿನ ಆನಂದವನ್ನು ಮತ್ತೆ ಪಡೆಯಬೇಕೆಂಬ ಅಪೇಕ್ಷೆಯುಂಟಾಯಿತು. ನಡೆದಿರುವ ದಾರಿಯನ್ನು ಬಿಟ್ಟು ಊರಕಡೆಗೆ ಹೆಜ್ಜೆಗಳನ್ನು ಹಾಕಿದೆ. ಅಗಸೆಯ ಬಾಗಿಲನ್ನು ದಾಟಿ ಒಳಹೊಕ್ಕು ನೋಡುತ್ತೇನೆ; ಊರಲ್ಲಿ ಜನರ ಸುಳಿವೇ ಇಲ್ಲ. ಮನೆಗಳೆಲ್ಲ ಸಾಲು-ಸಾಲಾಗಿ ಪಾಳುಬಿದ್ದಿವೆ. ದಾರಿಯಲ್ಲೆಲ್ಲ ಮುಳ್ಳು ಕಂಟಿಗಳು ಬೆಳೆದು ನಿಂತಿವೆ. ಹಾಳುಮನೆಗಳೊಳಗಿಂದ ಕೊಡರುಕೊಂಚೆಗಳ ಕೂಗು ಕರ್ಕಶವಾಗಿ ಕೇಳಬರುತ್ತಿದೆ. ಆ ದೃಶ್ಯವನ್ನೆಲ್ಲ ನೋಡುತ್ತಿರುವಾಗ ನನ್ನ ಎದೆಯು ದಡದಡಿಸತೊಡಗಿತು. ತುಂಬು-ತುಂಬಾಗಿ ಇದ್ದ ಬೆಲ್ಲ-ಬಾಳು ಹೀಗೆ ಹಾಳುಕೊಂಪೆಯಾಗಲು ಕಾರಣವೇನಿರಬಹುದು ?— ಎಂಬ ವಿಚಾರ, ನನ್ನಲ್ಲಿ ಆಶ್ಚರ್ಯದ ಅಲೆಗಳನ್ನು ಎಬ್ಬಿಸತೊಡಗಿತು. ಕಾರಣವನ್ನು ಕೇಳಬೇಕೆಂದಾಶೆ; ಯಾರನ್ನು ಕೇಳಬೇಕು? ಒಂದೆ ಒಂದು ಮನುಷ್ಯಪ್ರಾಣಿಯ ಸುಳಿವೂ ಕಣ್ಣಿಗೆ ಕಾಣಲೊಲ್ಲದು.

ಚಿಕ್ಕತನದಲ್ಲಿ ನಾವು ಬೀಡಾರ ಮಾಡಿಕೊಂಡಿದ್ದ ಕಲ್ಮೇಶ್ವರನ ಗುಡಿಯ ಪವುಳಿಯಾದರೂ ಹೇಗಿದೆಯೇನೊ—ಎಂಬ ವಿಚಾರ ಮನದಲ್ಲಿ ಮೂಡಿತು. ಅದನ್ನು ನೋಡಬೇಕೆಂಬ ಅಪೇಕ್ಷೆ ಉತ್ಕಟವಾಯಿತು. ಈ ಹಳ್ಳಿಯಲ್ಲಿ ಶಿಕ್ಷಕನಾಗಿ ಬರುವವನಿಗೆ ಊರಲ್ಲಿ ಮನೆಯೇ ಸಿಗುತ್ತಿರಲಿಲ್ಲ. ಆದುದರಿಂದ, ಪ್ರತಿ-

ಯೊಬ್ಬ ಶಿಕ್ಷಕನು ಕಲ್ಮೇಶ್ವರನ ಗುಡಿಯ ಪವುಳಿಯನ್ನೇ ತನ್ನ ನಿವಾಸವನ್ನಾಗಿ ಮಾಡಿಕೊಳ್ಳುತ್ತಿದ್ದನು. ಬಲಭಾಗದ ಪವುಳಿಯಲ್ಲಿ ಶಾಲೆ; ಎಡಭಾಗದ ಪವುಳಿಯಲ್ಲಿ ಶಿಕ್ಷಕನ ವಸತಿ ! ಗುಡಿಯ ಎದುರು ವಿಶಾಲವಾಗಿ ಬೆಳೆದ ಎತ್ತರವಾದ ಅರಳಿಯ ಮರವಿತ್ತು. ಆ ಅರಳಿಯ ಮರದ ತಣ್ಣೆಳಲಲ್ಲಿ, ಶಾಲೆಯ ಬಾಲಕರೊಂದಿಗಿನ ಆಟಪಾಟಗಳಲ್ಲಿ, ನಾನು ನನ್ನ ಎಷ್ಟೋ ಸವಿದಿನಗಳನ್ನು ಕಳೆದಿದ್ದೇನೆ. ಅದನ್ನೆಲ್ಲ ಕಣ್ಣಾರೆ ಕಾಣಬೇಕೆನಿಸಿತು. ದಾರಿಯ ಮುಳ್ಳುಗಳನ್ನು ಲೆಕ್ಕಿಸದೆ, ಒತ್ತರದಿಂದ ಹೆಜ್ಜೆಗಳನ್ನು ಹಾಕಲು ತೊಡಗಿದೆ. ಅದೇನು ವಿಚಿತ್ರವೊ, ಒಂದು ಮುಳ್ಳೂ ನನ್ನ ಕಾಲಲ್ಲಿ ಚುಚ್ಚಲಿಲ್ಲ. ಆದರೆ ಚುಚ್ಚಬಹುದೆಂಬ ಭಾವನೆ ಮಾತ್ರ ಮೈಯನ್ನು ಜುಮ್ಮೆದಟ್ಟಿಸುತ್ತಿತ್ತು.

ಭವ್ಯವಾಗಿದ್ದ ಹೆಬ್ಬಾಗಿಲು ಕಣ್ಣಿಗೆ ಕಂಡಿತು. ಅದೇ ಕಲ್ಲಿನ ಹೆಬ್ಬಾಗಿಲು ! ಹಚ್ಚಿದ್ದ ಸುಣ್ಣ-ಬಣ್ಣಗಳೆಲ್ಲ ಮಸುಕು-ಮಸುಕಾಗಿವೆ. ಮುಂಬದಿಯಲ್ಲಿಯೆ ಇದ್ದ ಪೂಜಾರಿಯ ಮನೆಯೂ ಊರಲ್ಲಿಯ ಮಿಕ್ಕ ಮನೆಗಳಂತೆ ಹಾಳುಹಾಳಾಗಿ ಹೋಗಿದೆ. ಅರಳಿಯ ಮರದಲ್ಲಿ ಒಂದು ಎಲೆ ಕೂಡ ಇಲ್ಲ. ಎಲ್ಲ ಕೊಂಬೆಗಳೂ ಬರಲು ಬರಲು. ಅಲ್ಲಲ್ಲಿ ಹಾಳೆಹದ್ದಿನ ಗೂಡುಗಳು ಕಣ್ಣಿಗೆ ಬಿಭತ್ಸವಾಗಿ ಕಾಣುತ್ತಲಿವೆ. ಅರಳಿಯ ಮರದ ಬೊಡ್ಡೆಯ ಪೊಟ್ಟರೆಯೊಳಗಿಂದ ತಲೆಯನ್ನು ಹೊರಗೆ ಹಾಕಿ, ಕರಿಯ ಹಾವೊಂದು ಹೆಡೆತೆಗೆದು ಫೂತ್ಕರಿಸುತ್ತಲಿದೆ. ಅದರ ಫೂತ್ಕಾರದೊಂದಿಗೆ ಹೊಗೆಯೆದ್ದು ಅಲ್ಲಿಯ ವಾತಾವರಣವನ್ನೆಲ್ಲ ಮಂಜುಮಂಜುಗೊಳಿಸುತ್ತಲಿದೆ.

ಮತ್ತೆ ನನ್ನೆದೆ ನಡುಗಿತು. ಎಂತಹ ಭಯಾನಕವಾದ ನೋಟವದು ! ಆದರೂ ನನ್ನ ನಿಶ್ಚಯದಿಂದ ನಾನು ಕದಲಲಿಲ್ಲ. ಹಾಗೆಯೆ ಅಡಿಗಳನ್ನು ಮುಂದಿರಿಸಿ ಹೆಬ್ಬಾಗಿಲನ್ನು ದಾಟಿ ಒಳಗೆ ಹೋದೆ. ಗುಡಿಯೇನೋ ಮೊದಲಿನಂತೆಯೆ ಇದೆ. ಆದರೆ ಒಳಗೆಲ್ಲ ಕತ್ತಲೆಯ ಕಾಳು! ಕಣ್ಣುಕಪ್ಪಡಿಗಳು ಹಿಂಡು-ಹಿಂಡಾಗಿ ಒಳಗಿಂದ ಹೊರಗೆ ಹಾರಿಹಾರಿ ಬರುತ್ತಿದ್ದುವು; ಮತ್ತೆ ಒಳಗೆ ಹಾರಿ ಹೋಗುತ್ತಿದ್ದುವು. ಗುಡಿಯ ಮಧ್ಯರಂಗದಲ್ಲಿದ್ದ ಭವ್ಯವಾದ ಬಸವಣ್ಣನ ವಿಗ್ರಹ, ಏನೇನೊ ವಿಕಾರ ರೂಪವನ್ನು ಪಡೆದಂತೆ ಎನಿಸಿತು ! ಅಂಗಳದಲ್ಲೆಲ್ಲ ಏಡಿಯಂತಹ ಕೊಂಡೆಗಾಲಿನ ಪ್ರಾಣಿಗಳಾವುವೋ ತಿರುಗಾಡುತ್ತಿದ್ದುವು. ಅವು

ಗಳನ್ನು ತಪ್ಪಿಸಿ ತಪ್ಪಿಸಿ ಹೆಜ್ಜೆ ಹಾಕುತ್ತ ಗುಡಿಯ ಮೆಟ್ಟಿಲುಗಟ್ಟೆಯ ಬಳಿ ಬಂದೆ. ಹಿಂದೆ ನಾನು ಕಂಡ ದೇವಾಲಯದಲ್ಲಿಯ ಪೂಜೆ-ಪುರಸ್ಕಾರಗಳ ಗುರುತುಗಳು ಒಂದೂ ಕಾಣಲಿಲ್ಲ.

ಓ ! ಅಂದಿನ ಕಾಲದ ದೇವಾಲಯದ ವೈಭವವೆಂತಹದು ! ಸೌಂದರ್ಯ ವೆಂತಹದು ! ಸಾಲು-ಸಾಲಾಗಿ ನಂದಾದೀಪಗಳು ಮಿರುಗುತ್ತಿದ್ದುವು. ಭಕ್ತರ ತಂಡವು ಕಟ್ಟಿದ ತಳಿರು-ತೋರಣಗಳೇನು, ಕಬ್ಬು-ಬಾಳೆಗಳ ಹಂದರಗಳೇನು, ಊದುವ ಕಹಳೆ-ತುತೂರಿಗಳೇನು, ಬಾರಿಸುವ ಡೋಳು-ನಗಾರಿಗಳೇನು, ಉರಿಯುವ ದೀವಟಿಗೆಗಳ ಸಾಲೇನು, ಪಲ್ಲಕ್ಕಿಯ ಉತ್ಸವವೇನು, ಮುತ್ತೈದೆಯರ ಶೋಭನಗೀತಗಳೇನು—ಒಂದೇ ಎರಡೇ ಕಲ್ಮೇಶ್ವರನ ವೈಭವ ! ಇಂದು ಅವಾವುವೂ ಇಲ್ಲ. ಕಲ್ಮೇಶ್ವರನು ಕತ್ತಲೆಯ ರಾಜ್ಯದ ಕಳ್ಳೇಶ್ವರನಾಗಿದ್ದಾನೆ.

ಶಾಲೆಯನ್ನು ಹಾಕುತ್ತಲಿದ್ದ ಬಲಗಡೆಯ ಪವುಳಿಯ ಚಪ್ಪರವೆಲ್ಲ ಬಿದ್ದು ಹೋಗಿದೆ. ಬರಿ ಗೋಡೆಗಳು ವಿಕಾರಾಕಾರದಿಂದ ನಿಂತುಕೊಂಡಿವೆ. ನಮ್ಮ ಮನೆಯಾಗಿದ್ದ ಎಡಗಡೆಯ ಪವುಳಿ ತನ್ನ ಮೊದಲಿನ ಸೌಂದರ್ಯವನ್ನು ಕಳೆದು-ಕೊಂಡಿದೆಯಾದರೂ ಹಾಳಾಗದೆ ಉಳಿದಿದೆ. ಇದ್ದುದರಲ್ಲಿಯೆ ನನಗೆ ಸಮಾ-ಧಾನವೆನಿಸಿತು. ನಾವು ಮನೆ ಮಾಡಿಕೊಂಡು ಕೆಲ ದಿನಗಳನ್ನು ಕಳೆದ ಆ ಚಿಕ್ಕ ಪವುಳಿಯ ಬಗೆಗೆ ಏನೋ ಒಂದು ಬಗೆಯ ಆತ್ಮೀಯತೆ ಹುಟ್ಟಿಕೊಂಡಿತು. ಅದನ್ನು ನೋಡಬೇಕೆಂದು ಅತ್ತ ಕಡೆಗೆ ನಡೆದೆ. ಕೋಣೆಯ ಮುರುಕು ಬಾಗಿಲು ಮುಚ್ಚಿಕೊಂಡಿತ್ತು. ಹತ್ತಿರ ಹೋಗಿ ಅದನ್ನು ದೂಡಿದೆ; ಒಳಗಿನಿಂದ ಮಾತೊಂದು ಕೇಳಿಸಿತು.

“ ಯಾರು ? ಬರ್ರಿ ಒಳಗ ! ”

ಮನುಷ್ಯರ ಮಾತು ಕಿವಿಗೆ ಬಿದ್ದೊಡನೆಯೆ ನನಗೆ ಒಂದು ಬಗೆಯ ಸಮಾಧಾನವೂ ಎನಿಸಿತು; ನಿರ್ಭೀತಿಯೂ ಉದಯಿಸಿತು. ಬಾಗಿಲನ್ನು ದೂಡಿ ಒಳಗೆ ಹೋದೆ. “ ಯಾರು....ನೀವ ? ಬರ್ರಿ ಬರ್ರಿ ! ” ಎಂಬ ಸ್ವಾಗತದ ಮಾತು ಕಿವಿಗೆ ಬಿದ್ದಿತು; ಆದರೆ ಅಲ್ಲಿ ಯಾರೂ ಇದ್ದಂತೆ ಕಾಣಲಿಲ್ಲ. ಚಿಕ್ಕದಾದ ಕೋಣೆ. ಅಚ್ಚುಕಟ್ಟಾಗಿ ಸಾರಿಸಿ ಗುಡಿಸಲಾಗಿದೆ. ಮೂಲೆಯಲ್ಲೊಂದು ಮೂರು ಕಲ್ಲಿನ ಒಲೆಯಿದೆ. ಒಲೆಯಲ್ಲಿ ಎರಡು ಮೂರು ಕಟ್ಟಿಗೆಗಳು ಹತ್ತಿ

ಉರಿಯುತ್ತಲಿವೆ. ಒಲೆಯ ಮೇಲೊಂದು ಮಣ್ಣಿನಮಡಕೆ. ಅದರಲ್ಲಿ ಏನೋ ಕುದಿಯುತ್ತಿರುವಂತೆ 'ಕೊತಕೊತ' ಸಪ್ಪಳವಾಗುತ್ತಲಿದೆ. ಅಲ್ಲಿ ಯಾರೋ ಇದ್ದ ಗುರುತುಗಳು ಕಾಣುತ್ತಿದ್ದುವಾದರೂ, ಯಾರೂ ಅಲ್ಲಿ ಕಣ್ಣಿಗೆ ಕಾಣುತ್ತಿರಲಿಲ್ಲ. ಮತ್ತೆ ನನಗೆ ಮಾತುಗಳು ಕೇಳಿಸಿದುವು :

"ಹಹಹಹ! ಎಷ್ಟು ದೊಡ್ಡವರಾಗಿದ್ದೀರಲಾ! ನೀವು ಆ ರಾಮಣ್ಣ ಮಾಸ್ತರ ಚಿಕ್ಕ ತಮ್ಮ ಅಲ್ಲವೆ ?"

ನಾನು ಬೆರಗು-ಭೀತಿಗಳಿಂದ ಸುತ್ತು-ಮುತ್ತಲೂ ನೋಡತೊಡಗಿದೆ. ಮತ್ತೆ ನಗೆಯ ತೆರೆಗಳು ಎದ್ದುವು :

"ಹಹಹಹಹಹ! ನನ್ನ ಮಾತನ್ನ ಕೇಳಿ ನಿಮಗ ಆಶ್ಚರ್ಯ ಅನಿಸತಿರಬಹುದಲ್ಲವೆ ?"

ಹೋದ ಧೈರ್ಯವನ್ನೆಲ್ಲ ಒಟ್ಟುಗೂಡಿಸಿಕೊಂಡು ಗಾಬರಿಯ ಧ್ವನಿಯಲ್ಲಿಯೆ ಕೇಳಿದೆ :

"ಇಲ್ಲಿ ಮಾತು ಮಾತ್ರ ಕೇಳಿಸುತ್ತವೆ. ಆದರೆ ಯಾರೂ ಇದ್ದಂತೆ ಕಾಣುವುದಿಲ್ಲವಲ್ಲ ?"

"ಅದ್ಯಾಕೆ ? ನಾನು ಇಲ್ಲಿಯೆ ಇದ್ದೇನೆ. ಒಲೆಯ ಮುಂಗಡೆಯಲ್ಲಿಯೆ ಕುಳಿತಿದ್ದೇನೆ. ನಾನು ನಿಮ್ಮ ಕಣ್ಣಿಗೆ ಕಾಣುವುದಿಲ್ಲವೆ ?"

ನಾನು ಕಣ್ಣರಳಿಸಿ ಒಲೆಯ ಕಡೆಗೆ ನೋಡಿದೆ. ಬೆರಗು-ಗಾಬರಿಗಳಿಂದಲೇ ಹೇಳಿದೆ :

"ನನಗಿಲ್ಲಿ ಯಾರೂ ಕಾಣುವುದಿಲ್ಲ. ಮಾತು ಮಾತ್ರ ಕೇಳುತ್ತವೆ!"

ಮತ್ತೆ ಧ್ವನಿಯು ಕೇಳಿಸಿತು :

"ಸರಿ ಸರಿ! ಅನೇಕರ ಕಣ್ಣಿಗೆ ನಾನು ಕಾಣುವುದಿಲ್ಲ. ಅಂತಹರಲ್ಲಿ ನೀವೂ ಒಬ್ಬರೆಂದು ಕಾಣುತ್ತದೆ. ನನಗೆ ಮಾತ್ರ ನೀವು ಸ್ಪಷ್ಟವಾಗಿ ಕಾಣುತ್ತೀರಿ; ಎಂತಲೇ ನಿಮ್ಮನ್ನು ರಾಮಣ್ಣ ಮಾಸ್ತರ ತಮ್ಮ—ಎಂದು ಒಮ್ಮೆಲೆ ಗುರುತು ಹಿಡಿದೆ."

ಏನೋ, ಸ್ವಲ್ಪ ಬೆದರಿಕೆ ಕಡಿಮೆಯಾದಂತೆನಿಸಿತು. ನಾನು ಮೆಲ್ಲಗೆ ನುಡಿದೆ :

"ಅಹುದು, ನಾನು ರಾಮಣ್ಣ ಮಾಸ್ತರ ಚಿಕ್ಕ ತಮ್ಮ! ನೀವು ಯಾರು?"

ಮತ್ತೆ ಮಾತು ಕೇಳಿಸಿತು :

" ನಿಮಗೆ ನೆನಪಿರಬಹುದು. ರಾಮಣ್ಣನವರಿಗೆ ಇಲ್ಲಿಂದ ವರ್ಗವಾದ ಮೇಲೆ, ನಾನು ಇಲ್ಲಿಗೆ ಮಾಸ್ತರನಾಗಿ ಬಂದಿದ್ದೆ. ನಾಲ್ಕೈದು ದಿನ ನಿಮ್ಮ ಮನೆಯಲ್ಲಿಯೆ ಊಟ ಮಾಡಿಕೊಂಡು ಇದ್ದೆ. ನಿಮ್ಮ ಮುದ್ದುಮುದ್ದಾದ ಇಂಪಾದ ಹಾಡುಗಳನ್ನು ಕೇಳಿ ನಿಮ್ಮನ್ನು ತುಂಬ ಪ್ರೀತಿಸುತ್ತಿದ್ದೆ ! "

" ಅಂದರೆ ? ನೀವು ಆ ಜೀವಣ್ಣ ಮಾಸ್ತರೇನು ? ಈ ಹಾಳೂರಲ್ಲಿಯೆ ಏಕೆ ಇದ್ದೀರಿ ? ನನಗೆ ನೀವು ಕಾಣುವುದಿಲ್ಲವೇಕೆ ? "

" ಹಹಹಹಹಹ " ರೌದ್ರಹಾಸ್ಯ. "ಕಾಣುವುದಿಲ್ಲವೇಕೆ! ನಿಮ್ಮ ಕಣ್ಣಿಗೆ ಅಂದು ಕಂಡ ನನ್ನ ಎಲುವು-ಚರ್ಮದ ದೇಹ ಹೊರಟುಹೋಗಿದೆ. ಈಗಲೂ ನನಗೆ ದೇಹವು ಇಲ್ಲದೆ ಇಲ್ಲ. ನಿಮಗೆ ಕಾಣುವುದಿಲ್ಲವಷ್ಟೆ! ನಿಮಗೆ ಭೀತಿಯೆನಿಸ ದಿದ್ದರೆ ಇಲ್ಲಿ ಕೂತುಕೊಳ್ಳಿರಿ. "

ಮಾತಿನ ಕೊನೆಯೊಂದಿಗೆ ಎಲ್ಲಿಂದಲೋ ಒಂದು ಸುಂದರವಾದ ಚಾಪೆ ಬಂದು ನೆಲದ ಮೇಲೆ ಬಿದ್ದುಕೊಂಡಿತು. ನನ್ನ ದೇಹ, ಮನಸ್ಸು ಎಲ್ಲವೂ ಗಡಗಡನೆ ನಡುಗಿತು. ಕಂಗೆಟ್ಟವನಾಗಿ ನಿಂತಲ್ಲಿಯೇ ನಿಂತಿದ್ದೆ. ಮರಳಿ-ಹೊರಟುಹೋಗಬೇಕೆಂದರೆ ಕಾಲುಗಳೇ ಎತ್ತಲೊಲ್ಲವು. ಮತ್ತೆ ಮಾತು ಕೇಳಿಸತೊಡಗಿತು :

" ಹಾಳೂರಲ್ಲಿ ಏಕೆ ಇದ್ದೀರೆಂದು ಕೇಳಿದಿರಲ್ಲವೆ? ನನಗೆ ಇದೇ ತುಂಬಿದ ಊರು ! ಮನುಷ್ಯರಿಂದ ತುಂಬಿದ ಊರಲ್ಲಿ ವಾಸ ಮಾಡುವುದಕ್ಕೆ ನನಗೆ ಮನಸ್ಸೇ ಆಗುವುದಿಲ್ಲ. ಹತ್ತಿರದಲ್ಲಿಯೇ ಭೂತಪತಿಯ ಆವಾಸವಿದೆ. ನಾವು ಆತನ ನೆರೆಯಲ್ಲಿಯೇ ಇರುವವರು ! "

" ಹಾಗಾದರೆ ನೀವು ಭೂತವೆ ? " ಹೆದರುತ್ತಲೆ ನಾನು ಕೇಳಿದೆ.

" ನೀವೇನೂ ಹೆದರುವ ಕಾರಣವಿಲ್ಲ. ಬದುಕಿರುವ ದೇಹೀಜೀವಿಗಳು ನನ್ನಂತಹ ಜೀವಗಳನ್ನು ಭೂತಗಳೆಂದು ಹೇಳುತ್ತವೆ. ಆದರೆ ದೇಹೀಜೀವಿ ಗಳಷ್ಟು ನಾವೇನು ಕೆಟ್ಟವರಲ್ಲ. ಕಾರಣವಿಲ್ಲದೆ ಯಾರಿಗೂ ಯಾವ ತೊಂದರೆ ಯನ್ನೂ ಕೊಡದಿರುವುದು ನಮ್ಮ ಸ್ವಭಾವ. ನಿಂತಿರೇಕೆ ? ಕುಳಿತುಕೊಳ್ಳಿರಿ!

ಬಾಯಾರಿಕೆಯಾದಂತೆ ಕಾಣುತ್ತದೆ. ನೀರು ಬೇಕೇನು ? ಚಾಪೆಯ ಬಳಿಯಲ್ಲಿ ಒಂದು ತುಂಬಿದ ತಂಬಿಗೆ, ಒಂದು ಥಾಲಿ ಕಂಡುವು. ನನಗೆ ತುಂಬ ಬಾಯಾರಿಕೆಯಾದುದು ನಿಜ. ತುಂಬಿದ ತಂಬಿಗೆಯನ್ನು ಕಂಡವನೇ ಹೋಗಿ ಚಾಪೆಯ ಮೇಲೆ ಕುಳಿತುಕೊಂಡೆ. ನಾಲ್ಕೈದು ಥಾಲಿಗಳಷ್ಟು ನೀರನ್ನು ಗಟಗಟನೆ ಇಳಿಸಿದೆ. ಆದರೂ ನೀರಡಿಕೆ ಹಿಂಗಲೇ ಒಲ್ಲದು. ಮತ್ತೆ ಮಾತುಗಳು ಕೇಳಿಸಿದುವು :

" ಈಗ ನನ್ನ ರೂಪ ನಿಮಗೆ ಕಾಣುತ್ತಿರಬಹುದು ! "

ನಾನು ಒಲೆಯ ಕಡೆಗೆ ನೋಡಿದೆ. ಏನೋ ಒಂದು ಛಾಯಾರೂಪ ಕಂಡಿತು. ಎದೆಯ ನಡುಕ ಹೆಚ್ಚಿಕೊಂಡಿತು. ಕಂಪಿಸುವ ಧ್ವನಿಯಲ್ಲಿಯೇ ಹೇಳಿದೆ:

" ಏನೋ ಒಂದು ನೆರಳು ಕಾಣುತ್ತಲಿದೆ. ಅದು ನಿಮ್ಮ ನೆರಳೇ ಏನು?"

" ಅದು ನನ್ನ ನೆರಳಲ್ಲ. ನಾನೇ ! ನಮಗೆ ನೆರಳೆಂಬುದು ಇರುವುದೇ ಇಲ್ಲ ! ದೇಹೀಜೀವಗಳಿಗೆ ಮಾತ್ರ ನೆರಳೆಂಬುದು ಪ್ರತ್ಯೇಕವಾಗಿರುವುದು. "

" ನಿಮಗೆ ದೇಹವೇಕೆ ಇಲ್ಲದಂತಾಯಿತು ? "

" ಎಲ್ಲ ದೇಹೀಜೀವಗಳ ದೇಹಗಳೂ ಒಂದಿಲ್ಲೊಂದು ದಿನ ಇಲ್ಲದಂತಾಗುವುವು ! ಹುಂ, ನಿಮ್ಮ ಹೆಸರು ಗೋಪಣ್ಣ—ಅಲ್ಲವೆ ? "

" ಅಹುದು, ಗೋಪಣ್ಣ ! ದೇಹಗಳು ಇಲ್ಲದಂತಾಗುವುದು ಮಾನವರು ಸತ್ತಮೇಲೆ ಅಲ್ಲವೆ ? ಹಾಗಾದರೆ ನೀವೂ ಸತ್ತಿದ್ದೀರಾ ?"

" ಹಹಹಹಹಹಹಹ ! " ಒಮ್ಮೆಲೆ ಭೀಕರವಾದ ಹಾಸ್ಯ ಹೊರಹೊಮ್ಮಿತು : " ಅಹುದು ಗೋಪಣ್ಣಾ, ನಾನೂ ಸತ್ತಿದ್ದೇನೆ; ನನ್ನ ಹೆಂಡತಿಮಕ್ಕಳೂ ಸತ್ತಿದ್ದಾರೆ. ಬದುಕಿ ಇರುವವರೆಗೂ ನಮಗೇನೂ ಸಮಾಧಾನದ ಬದುಕು ಇರಲಿಲ್ಲ. ಸತ್ತಮೇಲೆ ಮಾತ್ರ ಈಗ ಸಮಾಧಾನದಿಂದ ನಾವು ಬದುಕಿಕೊಂಡು ಇದ್ದೇವೆ. ಜೀವಿಸಿದ್ದಾಗ ನಾವು ಪಟ್ಟ ಕಷ್ಟ, ನಷ್ಟ, ಅಪಮಾನ, ಅಸಮಾಧಾನಗಳನ್ನು ನೆನೆದುಕೊಂಡರೆ, ಈಗಲೂ ನನ್ನ ಹೃದಯದಲ್ಲಿ ಕಳವಳವು ಏಳುತ್ತದೆ. ಸಂತಾಪವು ಮನಸ್ಸನ್ನು ಕುದಿಸುತ್ತದೆ. ಬದುಕಿ ಮಾನವರಾಗಿ ಇರುವುದಕ್ಕಿಂತ, ಸತ್ತು ಭೂತಗಳಾಗಿ ನಮ್ಮಂತೆ ಇರುವುದು ಒಳ್ಳೆಯದೆಂದು ನನಗೆ ಸಂಪೂರ್ಣ ಮನವರಿಕೆಯಾಗಿದೆ. "

ನಾನು ಮೆಲುನುಡಿಗಳಲ್ಲಿ ಕೇಳಿದೆ :

ಭೂತಗಳು ಮಾನವರನ್ನು ಕಾಡುವುವೆಂದು ಹೇಳುತ್ತಾರಲ್ಲ ?"

" ಹಹಹಹಹಹ ! ಇದು ಹುಸಿಮಾತು ಗೋಪಣ್ಣಾ ! ಬದುಕಿ ಇರುವ ಮಾನವರೇ ಮಾನವರನ್ನು ಕಾಡುವವರು ! ಭೂತಗಳು ತಮ್ಮನ್ನು ಬದುಕಿ ಇರುವಾಗ ಕಾಡಿದವರ ಸೇಡನ್ನು ಮಾತ್ರ ತೀರಿಸಿಕೊಳ್ಳುವುವು! ಆದರೆ ಬದುಕಿರುವ ಮಾನವನು ಸ್ವಾರ್ಥಸಾಧನೆಗಾಗಿ ಎಲ್ಲರನ್ನೂ ಕಾಡುವನು; ಪೀಡಿಸುವನು; ಪಿಶಾಚಕ್ಕಿಂತ ಪಿಶಾಚನಾಗಿ ತನ್ನವರನ್ನೇ ಹರಿದು ತಿನ್ನುವನು! ಇಂತಹ ಮಾನವನೊಬ್ಬನ ಪೀಡೆಗಾಗಿಯೇ ನನ್ನ ಹೆಂಡತಿ-ಮಕ್ಕಳು ಸಾಯಬೇಕಾಯಿತು. ಅವರಿಗಾಗಿ ನಾನು ಸಾಯಬೇಕಾಯಿತು. ಈಗ ನಾವು ಎಲ್ಲರೂ ಕೂಡಿ ಸುಖದಿಂದ ಜೀವಿಸುತ್ತಿದ್ದೇವೆ. ಬದುಕಿದ ಮನುಷ್ಯರಿಂದ ನಮಗೀಗ ಯಾವ ಭಯವೂ ಇಲ್ಲ. "

ನನ್ನ ಭೀತಿಯು ಕ್ರಮವಾಗಿ ಹಿಮ್ಮೆಟ್ಟುತ್ತ ನಡೆಯಿತು. ವಿಸ್ಮಯ-ಕುತೂಹಲಗಳು ತಲೆಯೆತ್ತಿ ನಿಂತುವು. ನಿದಾನವಾಗಿಯೆ ಕೇಳಿದೆನು.

" ಇಲ್ಲಿ ನೀವು ಒಬ್ಬರೇ ಇದ್ದಂತಿದೆಯಲ್ಲ ? ನಿಮ್ಮ ಹೆಂಡತಿ-ಮಕ್ಕಳು ಎಲ್ಲಿದ್ದಾರೆ ? "

" ಹಹಹಹಹಹ ! " ಮತ್ತೆ ವಿಕಟವಾದ ಹಾಸ್ಯ. " ನನ್ನ ಹೆಂಡತಿ.... ಮಕ್ಕಳು ! ಆಕೆ ನನ್ನ ಬಳಿಯಲ್ಲಿ ಇರಲಿಕ್ಕೆ ಒಲ್ಲೆನೆನ್ನುತ್ತಾಳೆ ! ಗೋಪಣ್ಣಾ, ಆಕೆಯ ಪೂರ್ವಜೀವನದ ಸಾಂಪ್ರದಾಯಿಕ ಸ್ವಭಾವ ಈಗಲೂ ಕಡಿಮೆಯಾಗಿಲ್ಲ. ತಾನೇನೋ ಅಪವಿತ್ರಳಾಗಿದ್ದಾಳಂತೆ; ನಾನು ಪವಿತ್ರನಾಗಿಯೆ ಇದ್ದೇನಂತೆ. ಅದಕ್ಕಾಗಿ ನನ್ನ ಹತ್ತಿರದಲ್ಲಿಯೆ ಇರಲು ಒಲ್ಲೆನೆನ್ನುತ್ತಾಳೆ. ತನ್ನೆರಡು ಮಕ್ಕಳನ್ನು ಕಟ್ಟಿಕೊಂಡು ಅಗೋ, ಎದುರುಗಡೆಯ ಪವುಳಿಯ ಆ ಗೋಡೆಯ ಮೇಲೆ ವಾಸಿಸುತ್ತಾಳೆ. ಅಗೋ, ಅಲ್ಲಿ ನೋಡಿರಿ ! "

ನಾನು ಎದುರುಗಡೆಯ ಪವುಳಿಯ ಹಾಳುಗೋಡೆಯ ಕಡೆಗೆ ನೋಡಿದೆ. ಗೋಡೆಯ ಮೇಲೆ ಮೂರು ದೀವಿಗೆಗಳು ಕಂಡುವು. ಮಧ್ಯದ ದೀವಿಗೆ ದೊಡ್ಡದಾಗಿ ಥಳಥಳಾಗಿ ಇತ್ತು. ಎಡಬಲದಲ್ಲಿರುವ ಕಿರುದೀವಿಗೆಗಳು ಮಿಣುಕುಮಿಣುಕಾಗಿ ಇದ್ದುವು. ನಾನು ನುಡಿದೆ :

" ಅಲ್ಲಿ ಬರೀ ಮೂರು ದೀವಿಗೆಗಳು ಮಾತ್ರ ನನಗೆ ಕಾಣುತ್ತಲಿವೆ ! "

" ಸರಿ ಸರಿ ! ಮಧ್ಯದಲ್ಲಿ ಇರುವವಳೇ ನನ್ನ ಹೆಂಡತಿ. ಎಡ-ಬಲದಲ್ಲಿ ಇರುವುವು ನನ್ನ ಮಕ್ಕಳು. ಬದುಕಿ ಇರುವಾಗ ಒಂದು ಮಗು ಒಂದು ವರ್ಷದ್ದಿತ್ತು. ಇನ್ನೊಂದು ಮೂರು ವರ್ಷದ್ದಿತ್ತು. ಈ ಕೂಳನ್ನು ಬೇಯಿಸುತ್ತಿರುವುದು ಅವರಿಗಾಗಿಯೆ. ಅವರು ಬಂದು ಉಂಡುಹೋದರೆಂದರೆ, ಮಿಕ್ಕುದನ್ನು ನಾನು ಉಣ್ಣುತ್ತೇನೆ. ನಿಮಗೂ ಹಸಿವು ಆಗಿರಬಹುದು, ಅಲ್ಲವೆ ? "

" ಛೇಛೇ ! ನನಗೇನೂ ಹಸಿವು ಇಲ್ಲ. ಹೊಟ್ಟೆತುಂಬಿಹೋಗಿದೆ. ನಿಮ್ಮ ಮಾತು ಒಂದೊಂದೂ ನನ್ನಲ್ಲಿ ಕುತೂಹಲಗಳನ್ನು ಕೆರಳಿಸುತ್ತಲಿದೆ. ನಿಮ್ಮ ಹೆಂಡತಿ ತನ್ನನ್ನು ' ಅಪವಿತ್ರ ' ಎಂದು ಏಕೆ ತಿಳಿದುಕೊಂಡಿದ್ದಾರೆ?"

" ಓ ! ಅದೊಂದು ಬದುಕಿ ಇರುವಾಗಿನ ನಮ್ಮ ಕರ್ಮದ ಕಥೆಯ ಪರಿಣಾಮ ! ಅದನ್ನೆಲ್ಲ ನಿಮಗೆ ಆ ಮೇಲೆ ಹೇಳುತ್ತೇನೆ. ಈಗ ನನ್ನ ಆ ಹೆಂಡತಿ-ಮಕ್ಕಳು ಹಸಿದಿದ್ದಾರೆ. ಅವರನ್ನು ಕರೆದು ಮೊದಲು ಊಟಕ್ಕೆ ಬಡಿಸುತ್ತೇನೆ. ನೀವೇನೂ ಹೆದರುವುದಿಲ್ಲವಷ್ಟೆ ? "

ನಾನು ಮೆಲುನಗೆಯೊಂದಿಗೆ ಹೇಳಿದೆ :

" ಭೂತಗಳೆಲ್ಲ ನಿಮ್ಮ ಹಾಗೆಯೆ ಇದ್ದರೆ, ನನ್ನ ಹೆದರಿಕೆಗೆ ಕಾರಣವೇ ಇಲ್ಲ! "

" ಹಹಹಹಹಹ ! " ಎಂದು ನಕ್ಕು, ಆ ಛಾಯಾಮೂರ್ತಿ ಕೈಬೀಸಿ ಕರೆದಂತೆ ಮಾಡಿತು. ಮೂರೂ ದೀವಿಗೆಗಳು ನಮ್ಮ ಕಡೆಗೆ ಸಾಗಿಬರತೊಡಗಿದುವು. ಮತ್ತೆ ನನ್ನ ಹೃದಯವು ದಡದಡನೆ ಹೊಡೆದುಕೊಳ್ಳಲುತೊಡಗಿತು. ದೀವಿಗೆಗಳು ಬಂದು ಬಾಗಿಲಲ್ಲಿ ನಿಂತುವು ! "

ಛಾಯಾಮೂರ್ತಿ ಕೂಡಲೆ ಒಡನುಡಿಯಿತು :

" ಸಂಕೋಚಪಟ್ಟುಕೊಳ್ಳಲಿಕ್ಕೆ ಕಾರಣವೇನೂ ಇಲ್ಲ. ನಿಮಗೆ ಇವರು ಯಾರೆಂಬುದು ಗೊತ್ತಾಗಿರಬಹುದು. ಒಳಗೆ ಬಂದು ಊಟಕ್ಕೆ ಕುಳಿತುಕೊಳ್ಳಿರಿ ! "

ಮೂರೂ ದೀವಿಗೆಗಳು ಸಾಲಾಗಿ ಬಂದು, ಕೋಣೆಯ ಒಂದೆಡೆಯಲ್ಲಿ ದೂರ ಕುಳಿತುವು. ಛಾಯಾರೂಪ ಎದ್ದು ಏನೇನೋ ಬಡಿಸಿದಂತೆ ಮಾಡ-

ತೊಡಗಿತು. ಸೊಡ್ಡದೀವಿಗೆ ಅದೇಕೋ ಕಳೆಗುಂದಿದಂತೆ ಕಂಡಿತು. ಆಗಲೇ ಛಾಯಾರೂಪ ಹೇಳಿತು :

" ನೋಡಿರಿ ಗೋಪಣ್ಣಾ, ಇವಳದೊಂದು ನಿತ್ಯದ ಗೋಳಾಟ ! ತಾನು ಅಡಿಗೆ ಮಾಡಿ ನನಗೆ ಊಟಕ್ಕೆ ಬಡಿಸಬೇಕಾಗಿದ್ದಿತಂತೆ; ಅದು ಹೋಗಿ ನಾನು ಮಾಡಿದುದನ್ನು ನೀಡಿಸಿಕೊಂಡು ತಾನು ಉಣ್ಣಬೇಕಾಗಿದೆಯಂತೆ ! ಇದಕ್ಕಾಗಿ ನಿತ್ಯವೂ ಕಳವಳಪಡುತ್ತಾಳೆ. ಕೂಳು ಕುದಿಸಿ ಇವರಿಗೆ ನೀಡುವುದರಲ್ಲಿ ನನಗೆ ಯಾವ ತೊಂದರೆಯೂ ಇಲ್ಲ; ಇಷ್ಟೇ ಅಲ್ಲ, ಒಂದು ಬಗೆಯ ಸಂತೃಪ್ತಿ ನನಗೆ ! ಈಕೆ ಮಕ್ಕಳೊಂದಿಗೆ ನನ್ನ ಬಳಿಯಲ್ಲಿ ಇದ್ದರೆ ನಾಕು. ಇನ್ನಾರಾದರೂ ಆಗಿದ್ದರೆ, ಇವಳಿಗಾಗಿ ಜುಗುಪ್ಸೆಪಟ್ಟುಕೊಂಡು, ದೂರ-ದೂರವಾಗಿಯೆ ಇದ್ದು-ಬಿಡುತ್ತಿದ್ದರೋ ಏನೋ ! ಜನರು ಈಕೆಗೆ ಏನೇ ಹೆಸರಿಟ್ಟು ಆಡಿಕೊಳ್ಳಲಿ; ನನಗೆ ನನ್ನ ಶಾರದೆಯ ಸರಳಹೃದಯವೆಂತಹದೆಂಬುದು ಗೊತ್ತಿಲ್ಲವೆ? ........"

ಬಿಕ್ಕಿ ಬಿಕ್ಕಿ ಅಳುತ್ತಿರುವ ಶಬ್ದ ನನಗೆ ಕೇಳಿಸಿತು. ಆಗಲೇ ಛಾಯಾ-ರೂಪ ನುಡಿಯಿತು :

" ನೀನು ಭೂತಕುಲಕ್ಕೆ ಹೊರತಾಗಿ ಇರುತ್ತೀ ನೋಡು. ಎಲ್ಲಿಯ ಆ ಪೂರ್ವಜೀವನದ ನೆನಪನ್ನು ಈಗ ಯಾಕೆ ಇಟ್ಟುಕೊಳ್ಳಬೇಕು ನಾವು? ದುಃಖ-ವೆಂಬುದು ಆ ದೇಹೀಜೀವಿಗಳಿಗಷ್ಟೇ ಇರಲಿ ! ನಾವೀಗ ತಿಂದುಂಡು ನಲಿದಾಡ ಬೇಕು; ಹಾಡಿ ಹಾರಾಡಬೇಕು. ಹುಂ, ಬಲಿಂ ಭಕ್ಷಯ ! "

ನಸುವೇಳೆ ನೀರವತೆ ತಲೆದೋರಿತು. ದೀವಿಗೆಗಳು ಮತ್ತೆ ಮರಳಿ ಹೊರ ಟುವು; ಹೋಗಿ ಮೊದಲಿನ ಗೋಡೆಯ ಮೇಲೆ ಏರಿ ಕುಳಿತುಕೊಂಡುವು. ಥಾಳಾಗಿ ಉರಿಯುತ್ತಿದ್ದ ದೊಡ್ಡ ದೀವಿಗೆಯು ಕಳೆಗುಂದಿದುದಾಗಿಯೆ ಕಂಡಿತು. ಛಾಯಾರೂಪ ಹೇಳತೊಡಗಿತು :

" ಗೋಪಣ್ಣಾ, ಆಕೆಯದು ತುಂಬ ಮೃದುಮನಸ್ಸು. ತನ್ನ ಪೂರ್ವ-ಜೀವನಕ್ಕಾಗಿ ಆಗಾಗ ಕಂಬನಿಗರೆಯುತ್ತಾಳೆ. ತನ್ನ ಬದುಕನ್ನು ಕೆಡಿಸಿದ ವ್ಯಕ್ತಿಯನ್ನು ಸಂಪೂರ್ಣ ಹುಡಿಗೂಡಿಸಿ ಬಿಡಬೇಕೆಂಬ ತನ್ನ ಹಟವನ್ನು, ಎಷ್ಟು ಹೇಳಿದರೂ ಅವಳು ಬಿಡಲೊಲ್ಲಳು. ಆಕೆಯ ಅತೃಪ್ತ ಆಶೆಯು ಪೂರ್ಣವಾದ ಹೊರತು ಆಕೆಗೆ ಈ ಸ್ವರೂಪದಿಂದ ಮುಕ್ತಿಯಿಲ್ಲ. ಆಕೆಯ

ಪ್ರೀತಿಯ ಪ್ರಭಾವಕ್ಕೆ ಒಳಗಾದವನಾದುದರಿಂದ, ಆಕೆಯನ್ನು ಬಿಟ್ಟು ಹೋಗುವುದಕ್ಕೆ ನನ್ನಿಂದ ಸಾಧ್ಯವಿಲ್ಲ. ಅದಕ್ಕಾಗಿಯೆ ಈ ಹಾಳೂರಿನಲ್ಲಿ ನಮ್ಮ ನಿವಾಸವನ್ನು ಮಾಡಿಕೊಂಡಿರಬೇಕಾಗಿದೆ ! ”

ನಾನು ತವಕಗೊಂಡು ಕೇಳಿದೆ :

“ ಅಲ್ಲಾ....ಎಷ್ಟೊಂದು ತುಂಬಿದ ಊರಿದು; ಹಾಳಾಗಲಿಕ್ಕೆ ಕಾರಣವೇನು ? ”

“ ಇನ್ನೇನು ಕಾರಣ ? ತಾಯಿ ಘಟಪ್ರಭೆಯ ಕ್ಷೋಭ ! ನನ್ನ ಹೆಂಡತಿಯು ತನ್ನ ಹಸುಗೂಸುಗಳೊಂದಿಗೆ ಘಟಪ್ರಭೆಯ ಒಡಲಲ್ಲಿ ಸೇರಿದ ಮರುವರುಷವೇ ಹಿರಿನೆರೆ ಬಂದಿತು. ಈ ಊರನ್ನು ಸಂಪೂರ್ಣವಾಗಿ ಮುಳುಗಿಸಿಬಿಟ್ಟಿತು........”

ದೂರದಲ್ಲಿ ಯಾರೋ ಗಟ್ಟಿಯಾಗಿ ಅಳುತ್ತಿರುವಂತೆ ಕೇಳಿಸಿತು:

“ ಅಯ್ಯೋ, ಅಯ್ಯಯ್ಯೋ ! ನನ್ನ ಹತ್ತು ಸಾವಿರ ರೂಪಾಯಿಗಳ ಬೆಲ್ಲ ನೀರಪಾಲಾಗಿ ಹೋಯಿತು !........”

ನಾನು ಗಾಬರಿಗೊಂಡು ಕೇಳಿದೆ:

“ ಇದೇನಿದು ಅಳುವ ಕೂಗು ಯಾರದು ? ”

ಛಾಯಾರೂಪ ಮತ್ತೆ ನಕ್ಕಿತು : “ ಹೆಹೆಹೆಹೆಹೆ ! ಅದೋ ! ಇಲ್ಲಿಯ ಹಿರಿಯ ರೈತ ಒಬ್ಬ ಕಾಸಣ್ಣ ಎಂಬವನಿದ್ದ....ನಿಮಗೆ ನೆನಪಿದೆಯೆ ? ”

“ ಹಾಂ, ಹೌದು, ಸಂಪೂರ್ಣ ನೆನಪಿದೆ ! ಆತನ ಮಗ ದಾನಪ್ಪ ನನ್ನೊಂದಿಗೆ ಆಡಲು ಬರುತ್ತಿದ್ದ. ನಾನೂ ಆಗಾಗ ಅವರ ಮನೆಗೆ ಆಡಲಿಕ್ಕೆ ಹೋಗುತ್ತಿದ್ದೆ ! ”

“ಅದೇ ಅವನೇ ಕಾಸಪ್ಪ ! ಮಿಕ್ಕವರೆಲ್ಲರೂ ಮಾರಿದರೂ, ಹೆಚ್ಚು ಹಣದ ಆಶೆಯಿಂದ ಆ ವರ್ಷದ ಬೆಲ್ಲವನ್ನೆಲ್ಲ ಹಾಗೆಯೇ ಇಟ್ಟಿದ್ದ. ಹಿರಿನೆರೆಯ ನೀರು ಅದನ್ನೆಲ್ಲ ಕೊಚ್ಚಿಕೊಂಡು ಹೋಯಿತು. ಬೆಲ್ಲವನ್ನು ಉಳಿಸಿಕೊಳ್ಳಬೇಕೆಂಬ ದುರಾಶೆಗಾಗಿ, ಆ ಕಾಸಪ್ಪ ತನ್ನ ಪ್ರಾಣವನ್ನೂ ಕಳೆದುಕೊಂಡ. ಈಗ ಘಟಪ್ರಭೆಯ ದಂಡೆಗುಂಟ ತಿರುಗಾಡುತ್ತಲಿದ್ದು, ಆಗಾಗ ಕೂಗಿ ಕೂಗಿ ಅಳುತ್ತಿರುತ್ತಾನೆ. ಸ್ನೇಹ-ಪ್ರೀತಿಗಳಿಗಾಗಿ ಭೂತವಾದವರು ಸಮಾಧಾನದಿಂದ ಬಾಳು

ತ್ತಾರೆ ಗೋಪಣ್ಣ ! ಆಶೆ-ಲೋಭಗಳಿಂದ ಪಿಶಾಚಿಗಳಾದವರು, ಯಾವಾಗಲೂ ಹೀಗೆಯೆ ಅತೃಪ್ತಿಯಿಂದ ಅಳುವರು, ಕೂಗುವರು, ಕಿರಿಚುವರು. ತನ್ನ ಬೆಲ್ಲ ಕ್ಕಾಗಿ ಅಳುವ ಪಿಶಾಚವದು; ನಿನ್ನನ್ನೇನೂ ಮಾಡಲಾರದು. ನೀನೇನೂ ಹೆದರಬೇಡ ! "

ಅಳುವಿನ ಕೂಗು ಹಾಗೆಯೆ ಕೇಳುತ್ತಲಿತ್ತು. ಭೀತಿಯಿಂದ ನಿರ್ಭೀತಿಗೆ ನಾನು ಹೇಗೆ ಹೋಗುತ್ತಿದ್ದೆನೋ ನನ್ನದು ನನಗೇ ತಿಳಿಯದಂತಾಯಿತು; ನಾನು ಮತ್ತೆ ಕೇಳಿದೆನು :

" ನೆರೆಯಲ್ಲಿ ಸಿಕ್ಕು ಈ ಊರ ಜನವೆಲ್ಲ ತೇಲಿಹೋದರೇ ? "

" ಎಲ್ಲರೂ ಏನೂ ತೇಲಿಹೋಗಲಿಲ್ಲ. ಜೀವ ಬೇಕಾಗಿದ್ದವರೆಲ್ಲ ಪಾರಾಗಿ ಹೋದರು; ಮನೆ-ಸಂಪತ್ತು ಬೇಕಾಗಿದ್ದವರೆಲ್ಲ ನೆರೆಯಲ್ಲಿ ಕೊಚ್ಚಿಹೋದರು. ಹಹಹಹಹಹ ! ನನಗೆ ಜೀವವು ಬೇಕಾಗಿರಲಿಲ್ಲ; ಸಂಪತ್ತು ಇರಲೇ ಇಲ್ಲ. ಆದರೆ ಹೆಂಡತಿ-ಮಕ್ಕಳ ಆಶೆ ಮಾತ್ರ ಹೃದಯವನ್ನು ಕೊರೆಯುತ್ತಿತ್ತು. ಆದುದ ರಿಂದಲೇ ನೆರೆ ಬಂದರೂ ನಾನು ನನ್ನ ಈ ಮನೆಯನ್ನು ಬಿಡಲಿಲ್ಲ. ಘಟ- ಪ್ರಭೆಯ ಹುಚ್ಚುಹೊನಲು ನನ್ನ ದೇಹವನ್ನು ಕೊಚ್ಚಿಕೊಂಡು ಹೋಯಿತು. ದೇಹವನ್ನು ಕಳೆದುಕೊಂಡ ಮೇಲೆ ನಾನು ನನ್ನ ಹೆಂಡತಿ-ಮಕ್ಕಳನ್ನು ಕಂಡು- ಕೊಂಡೆ. ಕರೆತಂದು ನನ್ನ ಬಳಿಯಲ್ಲಿಯೇ ಇರೆಂದು ಹೇಳಿದೆ. ಆದರೆ ತಾನು ಅಪವಿತ್ರಳಾಗಿ ಇದ್ದೇನೆ—ಎಂಬ ಭಾವನೆ ನನ್ನ ಹೆಂಡತಿಯ ಹೃದಯವನ್ನು ಕೊರೆಯುತ್ತಾ ಇದೆ. ಅವಳನ್ನು ಆ ಭಾವನೆಯ ಹುಚ್ಚಿನಿಂದ ಹೊರಗೆ ತೆಗೆಯ ಲಿಕ್ಕೇ ಬಾರದಂತಾಗಿದೆ ! "

ನಾನು ಹೆದರಿಕೆಯ ಧ್ವನಿಯಲ್ಲಿಯೆ ಕೇಳಿದೆ :

" ಹಾಗೆ ಅವರ ಭಾವನೆಯಾಗಲಿಕ್ಕೆ ಕಾರಣವೇನು ? "

'ದೇಹೀಜೀವಿಗಳ ಅಸಂಸ್ಕೃತ ಆಚಾರ-ವಿಚಾರಗಳೇ ಕಾರಣ! ಇನ್ನೇನು?

" ಅಂತಹ ವಿಪರೀತ ಘಟನೆಯೇನಾದರೂ ಘಟಿಸಿತೆ ? "

ಛಾಯಾರೂಪ ಹೇಳತೊಡಗಿತು :

" ಅದು ಅವಳಿಗೇ ಗೊತ್ತು ಗೋಪಣ್ಣಾ ! ಬದುಕಿರುವ ವರೆಗೂ ನನಗೆ ಆಕೆಯ ಸಾವಿನ ವಿಷಯ ಒಂದು ಒಡೆಯದ ಒಗಟವೇ ಆಗಿತ್ತು. ಸತ್ತಮೇಲೆ,

ನನಗೆ ಅದರ ಅರಿವು ಸ್ವಲ್ಪ ಸ್ವಲ್ಪ ಆಗಿದೆ. ನನ್ನ ಹೆಂಡತಿಯ ದೇಹ ಬಹಳ ಅಂದವಾಗಿತ್ತು. ಒಳ್ಳೇ ಕೇದಗಿಯ ಮೈಬಣ್ಣ. ನಿಡಿದಾಗಿ ಇರುವ ಮೂಗು. ಕೊಂಕು-ಕೊಂಕಾದ ಹುಬ್ಬಿನ ಕೆಳಗೆ ಕಳೆಗೂಡಿದ ಕಣ್ಣುಗಳು. ಉಂಗುರ-ಉಂಗುರವಾದ ಕಪ್ಪಗಿನ ತಲೆಗೂದಲು ! ಗೋಪಣ್ಣಾ, ಮಹಾರಾಣಿಯದಾಗಿರಬೇಕು—ಅಂತಹದು ನನ್ನ ಹೆಂಡತಿಯ ದೇಹ. ಆದರೆ ಸೋದರತ್ತೆಯ ಮಗಳಾಗಿ ಹುಟ್ಟಿದುದರಿಂದ, ಆಕೆ ರಾಣಿಯ ಪದವಿಯನ್ನು ಆಶಿಸದೆ, ಈ ಜೀವಣ್ಣ ಮಾಸ್ತರನನ್ನು ಮೆಚ್ಚಿ ಮದುವೆಮಾಡಿಕೊಂಡಿದ್ದಳು........"

"ವರ್ಗವಾಗಿ ನಾನು ಈ ಊರಿಗೆ ಬಂದೆ. ಒಂದೆರಡು ತಿಂಗಳುಗಳಲ್ಲಿಯೆ ಇಲ್ಲಿ ಮನೆ ಮಾಡಿದೆ. ಚೆಲುವೆಯಾದ ಹೆಂಡತಿಯನ್ನೂ ಕರೆತಂದೆ. ಅಷ್ಟರಲ್ಲಿಯೆ ಎರಡು ಮುತ್ತಿನಂತಹ ಮಕ್ಕಳ ತಾಯಾಗಿದ್ದಳು ನನ್ನ ಶಾರದೆ. ಊರಲ್ಲಿಯ ಅನೇಕ ಜನ ಸಿರಿವಂತರಿಗೆ ನನ್ನ ಶಾರದೆಯಂತಹ ಚೆಲುವೆಯರಾದ ಹೆಂಡಂದಿರು ಇರಲಿಲ್ಲ. ಪರದೇಶದಿಂದ ಬಂದು ಇರುವ ಬಡ ಮಾಸ್ತರನ ಹೆಂಡತಿ ಇಷ್ಟೊಂದು ಚೆಲುವೆಯಿರಬೇಕೆ ?....

"ಊರಲ್ಲಿಯ ಅನೇಕ ಜನ ತರುಣರು ನನ್ನೊಂದಿಗೆ ಸ್ನೇಹ ಬೆಳಸಿದರು; ಹೆಚ್ಚು ಕಾಲವನ್ನು ನಮ್ಮ ಶಾಲೆಯಲ್ಲಿಯೇ ಕಳೆಯತೊಡಗಿದರು. ಶಾರದೆ ನಿತ್ಯವೂ ನೀರಿಗಾಗಿ ಹೊಳೆಗೆ ಹೋಗುವಳು. ನನ್ನ ಶಾಲೆಯ ವೇಳೆಯಲ್ಲಿ, ಏನಾದರೂ ನಾವಾನು ಬೇಕಾದರೆ ಅಂಗಡಿಗೆ ಹೋಗಿ ತೆಗೆದುಕೊಂಡು ಬರುವಳು. ಮಿತ್ರರ ಮನಸ್ಸನ್ನು ಪ್ರಸನ್ನಗೊಳಿಸಬೇಕೆಂದು ನನಗೆ ಆಶೆಯುಂಟಾದಾಗ, ನನ್ನ ಹೇಳಿಕೆಯಂತೆ ಅವರಿಗೆಲ್ಲ ಚಹ-ಉಪಾಹಾರಗಳನ್ನು ಮಾಡಿ ಒದಗಿಸುವಳು. ಒಂದೊಂದು ಸಲ ಊಟಕ್ಕೂ ಬಡಿಸುವಳು. ....

"ಸ್ನೇಹಿತರ ಬಳಗ ಹೆಚ್ಚಿತೆಂದು ನನಗೆ ತುಂಬ ಉಲ್ಲಾಸ. ಶಾರದೆಯ ಎದುರು ಈ ಊರ ಜನರ ಸ್ನೇಹಮಯ ಸ್ವಭಾವವನ್ನು ಆಗಾಗ ಹೊಗಳಿ ಹಾಡುತ್ತಲಿದ್ದೆನು. ಎಂತಲೇ ಆಕೆ ನನ್ನ ಸ್ನೇಹಿತರೊಂದಿಗೆ ನಿಃಸಂಕೋಚಭಾವದಿಂದಲೇ ವರ್ತಿಸುತ್ತಿದ್ದಳು. ಆಗಾಗ ತಂದುಕೊಡುವ ಸ್ನೇಹಿತರ ಕಾಣಿಕೆ-ಉಡುಗೊರೆಗಳಿಂದ ನನ್ನ ಬಡತನದ ಕೊರತೆ ಕಡಿಮೆಯಾಗತೊಡಗಿತು. ....

"ನೀವು ಇಲ್ಲಿ ಇದ್ದಾಗ, ಊರ ಮುಂಗಡೆಯಲ್ಲಿ ರಾಜಮಾರ್ಗಕ್ಕೆ ಹೊಂದಿ ಒಂದು ಕಿರಾಣಿಯ ಅಂಗಡಿಯಿದ್ದಿತು—ನೆನಪಿದೆಯೆ ?"

"ಅಹುದು, ದಂಡಿಗೀ ಕುಮಾರಪ್ಪನ ಅಂಗಡಿ !"

"ಹಾಂ ಹಾಂ ! ಅದೇ ಕುಮಾರಪ್ಪನ ಹಿರಿಯ ಮಗನೊಬ್ಬನು ಇದ್ದ !"

"ಸರಿ ಸರಿ ! ರಾಜಣ್ಣ ಅಹುದಲ್ಲೊ ? ನಾನು ಅಂಗಡಿಗೆ ಹೋದಾಗಲೆಲ್ಲ ನನ್ನಿಂದ ಹಾಡು ಹೇಳಿಸುತ್ತಿದ್ದ; ತಿನ್ನಲು ಕೈತುಂಬ ಪೆಪ್ಪರಮಿಂಟು ಕೊಡುತ್ತಿದ್ದ."

"ನಿಮ್ಮ ನೆನಪಿನ ಶಕ್ತಿಯೂ ಘನವಾದುದು ಗೋಪಣ್ಣಾ ! ಆ ರಾಜಣ್ಣನಂತೂ ನನಗೆ ತೀರ ಜೀವದ ಗೆಳೆಯನಾಗಿದ್ದ. ನಾನು ಅವನನ್ನು ಬೆನ್ನಲ್ಲಿ ಬಿದ್ದ ತಮ್ಮನೆಂದೇ ತಿಳಿದುಕೊಂಡಿದ್ದೆ. ನಾನು ಊರಲ್ಲಿ ಇಲ್ಲದಾಗ ನಮ್ಮ ಮನೆಯ ಯೋಗ-ಕ್ಷೇಮಗಳನ್ನೆಲ್ಲ ನೋಡಿಕೊಳ್ಳುವವನು ಅವನೇ ! ಒಂದು ಸಲ ಶಿಕ್ಷಕರ ಸಮ್ಮೇಲನಕ್ಕೆಂದು ನಾನು ತಾಲೂಕಿನ ಪಟ್ಟಣಕ್ಕೆ ಹೋಗಿದ್ದೆ. ಮೂರು-ನಾಲ್ಕು ದಿನಗಳ ವರೆಗೆ ಅಲ್ಲಿಯೆ ಇರಬೇಕಾಗಿ ಬಂತು. ನಾಲ್ಕನೆಯ ದಿನ ಒಬ್ಬ ಓಲೆಕಾರ ಗೌಡರ ಚೀಟಿಯೊಂದನ್ನು ತೆಗೆದುಕೊಂಡು ಬಂದ. ಆ ಚೀಟಿ ನನ್ನ ಶಾರದೆಯು ಮಕ್ಕಳೊಂದಿಗೆ ಹೊಳೆಗೂಡಿದ ಸಮಾಚಾರವನ್ನು ತಂದಿದ್ದಿತು. ಅಂದು ನಾನು ಎಷ್ಟು ಅತ್ತೆನೆಂಬುದನ್ನು ನೆನೆದುಕೊಂಡರೆ, ಈಗ ನನಗೆ ನಗೆ ಬರುತ್ತದೆ........

"ನನ್ನ ಹೆಂಡತಿ-ಮಕ್ಕಳ ದೇಹವನ್ನು ಘಟಪ್ರಭೆಯ ಪ್ರವಾಹ ಎಲ್ಲಿ ಒಯ್ದು ಒಗೆಯಿತೆಂಬುದು ಕೊನೆಯ ವರೆಗೂ ಗೊತ್ತಾಗಲಿಲ್ಲ. ಶಾರದೆಯಿರುವಾಗ ನನ್ನ ಸುತ್ತುಮುತ್ತು ಯಾವಾಗಲೂ ಸುಳಿದಾಡುತ್ತಿದ್ದ ಸ್ನೇಹಿತರು, ಆಕೆ ಸತ್ತಮೇಲೆ ಯಾರೂ ಬರಲಿಲ್ಲ. ರಾಜಣ್ಣನಂತೂ ಅನೇಕ ತಿಂಗಳ ಕಾಲ ಊರನ್ನು ಬಿಟ್ಟೇ ಹೋಗಿದ್ದನು. ಕೃಷ್ಣಾತೀರಕ್ಕೆ ಹೋಗಿ ಶಾರದೆಯ ಉತ್ತರ-ಕ್ರಿಯೆಗಳನ್ನು ಮುಗಿಸಿದೆನು. ಮತ್ತೆ ಮರಳಿ ನನ್ನ ಶಾಲೆಯ ಕೆಲಸಕ್ಕೆ ತೊಡಗಿಕೊಂಡೆನು. ಶಾರದೆಯಿದ್ದಾಗಿನ ನನ್ನ ಬದುಕು ಆಶೆ-ಸಂತೃಪ್ತಿಗಳಿಂದ ತುಂಬಿ ತುಳುಕುತ್ತಿತ್ತು. ಅವಳ ಅಭಾವದಿಂದ ನನ್ನ ಒಂದೊಂದು ದಿನವೂ ನಿರಾಶೆ-ಅತೃಪ್ತಿಗಳಲ್ಲಿ ಭಾರವಾಗಿ ಸಾಗಲುತೊಡಗಿತು. ಶಾಲೆಯ ಕೆಲಸ ನನ್ನಿಂದ ಸರಿಯಾಗಿ ಸಾಗಲೊಲ್ಲದಾಯಿತು. ಮೊದಲು ನನ್ನ ಸ್ನೇಹಿತರೆನಿಸಿಕೊಳು

ತ್ತಿದ್ದವರೇ ಆಗ ನನ್ನ ವಿರುದ್ಧವಾಗಿ ಅನೇಕ ಗುಲ್ಲುಗಳನ್ನೆಬ್ಬಿಸಿ, ಸರಕಾರಕ್ಕೆ ಬರೆದು ತಿಳುಹಿದರು. ನಾನು ನೊಂದ ಮನಸ್ಸಿನವನೆಂದೋ ಏನೋ, ಸರಕಾ ಊರ ಜನರ ದೂರುಗಳ ಕಡೆಗೆ ಗಮನವನ್ನೇ ಕೊಡಲಿಲ್ಲ. ಮುಂದೆ ಒಂದ ವರ್ಷದ ಕಾಲವನ್ನು ಸತ್ತವನಂತೆಯೆ ಕಳೆದೆ. ಆದರೆ ಮರುವರ್ಷ ಬಂ ಮಹಾಪೂರವು ನನ್ನನ್ನು ನನ್ನ ಹೆಂಡತಿ-ಮಕ್ಕಳೊಂದಿಗೆ ಕೂಡಿಸಿತು...."

ಛಾಯಾರೂಪ ವಿಕಾರರೂಪವನ್ನು ಪಡೆಯುತ್ತ ನಡೆಯಿತು. ಕಪ್ಪು ಕಪ್ಪಾದ ದೀರ್ಘದೇಹ........ಬರೀ ಬಿಳಿಯ ಗುಡ್ಡೆಯ ದೊಡ್ಡ ಕಣ್ಣುಗಳು ತೆರೆದ ಬಾಯಿಂದ ಹೊರಬಿದ್ದ ಕೋರೆಹಲ್ಲುಗಳು ! ' ಹಹಹಹಹಹ ! ' ಎಂದು ಪಿಶಾಚನಗೆಯನ್ನು ನಕ್ಕಿತು. " ನೀನೇ ಆ ರಾಜಣ್ಣ ! ನಿನ್ನ ಕತ್ತನ್ನು ಹಿಸುಕುತ್ತೇನೆ...." ಎಂದು ಉದ್ದ ಬೆರಳಿನ ಕೈಗಳನ್ನು ಮುಂದೆ ಮಾಡಿ ಹತ್ತಿ ರಕ್ಕೆ ಬಂತು. ನಾನು ಹೆದರಿ ಗಟ್ಟಿಯಾಗಿ ಕಿರಿಚಿಕೊಂಡೆ. ಕೂಡಲೇ ಎಚ್ಚ ರಾಯಿತು. ಎದೆಯು ಒಂದೆಸವನೆ ಹೊಡೆದುಕೊಳುತ್ತಿತ್ತು. ಎದ್ದು ಕುಳಿತು ಸ್ವಲ್ಪ ವೇಳೆ ಸಾವರಿಸಿಕೊಂಡೆ. ಹತ್ತಿರದ ಗುಂಡಿಯನ್ನು ಒತ್ತಿ ದೀಪ ಬೆಳಗಿ ಸಿದೆ. ನನ್ನ ರಾಣಿ ಯಾವಾಗ ಬಂದು ಮಲಗಿಕೊಂಡಿದ್ದಳೋ ಏನೋ; ಅವಳ ಚೆಲುವಾದ ಮುಖ, ಜೀವಣ್ಣ ಮಾಸ್ತರನ ಹೆಂಡತಿಯ ಮುಖವನ್ನು ನೆನಪಿಗೆ ತಂದುಕೊಟ್ಟು, ಮತ್ತೆ ಎದೆಯನ್ನು ನಡುಗಿಸಿತು.

# ನೆತ್ತರ ಕೊಡುಗೆ

'ನೆತ್ತರ ಕೊಡುಗೆ' ಎಂದರೆ ರಕ್ತದ ದಾನವಲ್ಲ; ರಕ್ತದ ದಾನಕ್ಕಾಗಿ ಪಡೆದ ಉಂಬಳಿ. ಕನ್ನಡ ನಾಡಿನ ಪೂರ್ವದ ಚರಿತ್ರೆಯಲ್ಲಿ, ನೆತ್ತರ ಕೊಡುಗೆಯ ಉಂಬಳಿಯನ್ನು ಪಡೆದ ಬಂಟರ ಹೆಸರು ಹಲವಾರು ಕಂಡುಬರುವುವು. ಹೆಸರಿಲ್ಲದೆ ಕಾಲದ ತೆರೆಯಲ್ಲಿ ಮರೆಯಾದ ಕನ್ನಡ ಬಂಟರಿಗೆ ಲೆಕ್ಕವೆ ಇಲ್ಲ. ಇದೊಂದು ನಮ್ಮ ನಾಡಿನ ವೈಶಿಷ್ಟ್ಯ. ಶೋಧಕಬುದ್ಧಿಯನ್ನು ಹದನು-ಗೊಳಿಸಿಕೊಂಡು ಮರವೆಯ ಪರದೆಗಳನ್ನು ಹರಿದು ಓದುತ್ತ ಹೋದರೆ, ನೆತ್ತರ ಕೊಡುಗೆಯನ್ನು ಪಡೆದ ಕನ್ನಡ ಬಂಟರ ಪವಾಡವನ್ನು ಬರೆದುಕೊಂಡ ಇತಿ-ಹಾಸದ ಪುಟಗಳು ಬೇಕಾದಷ್ಟು ದೊರೆಯುವುವು. ನೋಡುವ ಶಕ್ತಿಯನ್ನು ಸಂಪಾದಿಸಿದ ಒಳಗಣ್ಣು ಮಾತ್ರ ಬೇಕು ನಮಗೆ.

ನಮ್ಮೂರ ತಳವಾರ ಕೆಂಚಣ್ಣನದೊಂದು ಎಂಟು ಕೂರಿಗೆಯ ವಿಶಾಲವಾದ ಹೊಲವಿದೆ. ಒಳ್ಳೆ ಬೆಣ್ಣೆಯಂತಹ ಮಿದುಮಣ್ಣಿನ ಎರೆಯ ಹೊಲ; ಎಂತಹ ಬರಗಾಲದಲ್ಲಿಯೂ ಕೆಂಚಣ್ಣನ ಹೊಟ್ಟೆಯನ್ನು ಬರಿಯದಾಗಿ ಇರಿಸದಂತಹ ದೇವಭೂಮಿ. ಅದೊಂದು ಹೊಲವು ಇಲ್ಲದೆ ಹೋಗಿದ್ದರೆ, ತಳವಾರ ಕೆಂಚಣ್ಣ ಊರ ಜನರಿಂದ 'ಕೆಂಚಣ್ಣ' ಎಂದು ಕರೆಯಿಸಿಕೊಳ್ಳುತ್ತಿರಲಿಲ್ಲ. 'ಕೆಂಚ'ನಾಗಿಯೋ 'ಕೆಂಚ್ಯಾ' ಆಗಿಯೋ ಇರುತ್ತಿದ್ದ. ಆದರೆ, ಅವನ ನಾಲ್ಕು ಎತ್ತುಗಳ ಕಮತವು, ಊರಲ್ಲಿ ಅವನನ್ನೊಂದು ಗಣ್ಯವಾದ ಒಕ್ಕಲನ್ನಾಗಿ ಮಾಡಿದ್ದಿತು. ಬೆಳುಗಾಲದಲ್ಲಿ ನಮ್ಮ ಊರ ಜನರೆಲ್ಲರ ಬಾಯಲ್ಲಿಯೂ 'ನೆತ್ತರ ಕೊಡಿಗೀ ಹೊಲ'ದ ಬೆಳೆಯ ಬಣ್ಣನೆಯ ಮಾತುಗಳೇ ಆಡುತ್ತಿರುವುವು. ಆ ಹೊಲದ ಒಂದು ಪಕ್ಕದಲ್ಲಿ ಇರುವ ಆ ಹಾಳುಬಾವಿಯನ್ನು ನೋಡಿದರೆ, ಬಹಳ ದಿನಗಳ ಹಿಂದೆ ಈ ಹೊಲದ ಕೆಲವು ಭಾಗವು ತೋಟವಾಗಿ ಇದ್ದಿರಬಹುದೆಂದೂ ಊಹಿಸುವಂತಿದೆ.

ನಮ್ಮೂರಲ್ಲಿ 'ನೆತ್ತರ ಕೊಡಿಗೀ ಹೊಲ'ವನ್ನು ಅರಿಯದವರು ಯಾರೂ ಇಲ್ಲ. ಆದರೆ, ಆ ಹೊಲಕ್ಕೆ ಹಾಗೆ ಹೆಸರು ಏಕೆ ಬಂದಿರಬಹುದೆಂಬುದನ್ನು

ಅರಿತವರು ಒಬ್ಬರೂ ಇಲ್ಲ. ಅರಿತುಕೊಳ್ಳಬೇಕೆಂಬ ಕುತೂಹಲವನ್ನು ಇದು-ವರೆಗೂ ಯಾರೂ ತೋರಿಸಿದಂತಿಲ್ಲ. ಕುತೂಹಲ ಬುದ್ಧಿಯಿಂದ ಯಾರಾದರೂ 'ಈ ಹೊಲಕ್ಕೆ ಈ ಹೆಸರು ಬರಲು ಕಾರಣವೇನು ?' ಎಂದು ಕೇಳಿದರೆ, ಕೆಂಚಣ್ಣ ಹೇಳುವ ಮಾತಿದು : "ಅದೇನ್ರಿ ! ಒಂದೊಂದು ಹೊಲಕ್ಕ ಹಿಂಗs ಏನಾರೇ ಹೆಸರು ಬಿದ್ದಿರತಾವ ಏಳ್ರಿ !"

ನಾನು ದೊಡ್ಡವನಾದ ಮೇಲೆ, ಕನ್ನಡ ಇತಿಹಾಸ-ಸಂಸ್ಕೃತಿಗಳನ್ನು ಅಭ್ಯಾಸ ಮಾಡುವ ಹುಚ್ಚು ಹಿಡಿದಾಗ, ಕೆಂಚಣ್ಣನ ಹೊಲಕ್ಕಿರುವ ಹೆಸರು ನನ್ನನ್ನು ತುಂಬ ಕುತೂಹಲದಲ್ಲಿ ಕೆಡಹಿತು. ಶಿಲಾಶಾಸನ, ತಾಮ್ರಶಾಸನಗಳ ಅಧ್ಯಯನ ನಡೆಯಿಸಿದಾಗ, ಅವುಗಳಲ್ಲಿ ಆಗಾಗ 'ನೆತ್ತರ ಕೊಡುಗೆ' ಎಂಬ ಉಂಬಳಿಯ ಹೆಸರು ಕಂಡುಬಂದುದರಿಂದ, ಕೆಂಚಣ್ಣನ ಹೊಲದ ಹೆಸರು ನನ್ನನ್ನು ಇನ್ನಿಷ್ಟು ಕುತೂಹಲದಲ್ಲಿ ಕೆಡಹಿತು. ದೀವಳಿಗೆಯ ಹಬ್ಬದ ಬಿಡುವಿನಲ್ಲಿ ನಾನು ನಮ್ಮ ಹಳ್ಳಿಗೆ ಹೋದಾಗ, ಮರುದಿನವೇ ಕೆಂಚಣ್ಣನನ್ನು ನಮ್ಮ ಮನೆಗೆ ಕರೆಯಿಸಿ ಕೇಳಿದೆ :

"ಕೆಂಚಣ್ಣಾ, ನಿನ್ನ ಆ ನೆತ್ತರ ಕೊಡಿಗೀ ಹೊಲಾ, ನಿಮ್ಮ ಮನೆತನಕ್ಕ ಇನಾಮಾಗಿ ಬಂದದ್ದೂ—ಅಂಬೂ ವಿಷಯಕ್ಕ, ನಿನಗೇನರೇ ಗೊತ್ತದ ಏನು?'

ಕೆಂಚಣ್ಣ ಅನುಮಾನಿಸುತ್ತ ಹೇಳಿದ :

"ಎನು ?....ಇನಾಮರಿ ?....ಏನೋ ನಮ್ಮ ಅಜ್ಜ ಹೇಳೂ ಮಾತರಿ : ಹಿಂದಿನ ಕಾಲದಾಗ. ಈ ಹೊಲಾ ನಮ್ಮ ಮನಿತನಕ್ಕ ಇನಾಮಿನ ಹೊಲಾ ಆಗೇ ಇತ್ತಂತರೀ ! ನರಗುಂದ ಬಂಡಾಯ ಆತಂತ ನೋಡ್ರಿ ! ಅದರ ಮರಿವರಸ ಅಂದರ, ನಮ್ಮ ಈ ಊರಿನ ದೇಸಗತಿ ಹಾಳಾಗಿ ಹೋತಂತರಿ ! ಆಗs ಇಂಗ್ರಜರು ಬಂದು ನಮ್ಮ ಇನಾಮು ಸುಳ್ಳುಮಾಡಿ, 'ಸರಕಾರೀ ಜಮೀನು' ಅಂತ ಲೆಕ್ಕದಾಗ ಬರಿಸಿಬಿಟ್ಟರಂತರೀ ! ಈಗೆಲ್ಲೀ ಇನಾಮೋ ನಮ್ಮಪ್ಪಾ ! ಆ ಹೊಲ ಒಂದಕ್ಕs ಸರಕಾರಕ್ಕ ವರಸಾ ಹದಿನಾರು ವರಾ ತೆರಿಗೀ ಕಟ್ಟತೀನಿ !"

ನಾನು ಮತ್ತೆ ಕೇಳಿದೆ :

"ಅದೆಲ್ಲಾ ಆಯ್ತುಪಾ ! ಯಾವ ಕಾರಣಕ್ಕಾಗಿ ಈ ಹೊಲಾ ನಿಮ್ಮ

ಮನಿತನಕ್ಕ ಇನಾಮವಾಗಿ ಸಿಕ್ಕಿತಂಬೂದು ನಿನಗೇನರೆ ಗೊತ್ತದ ಏನು ? "

ಕೆಂಚಣ್ಣಾ ತಲೆಯಲ್ಲಾಡಿಸಿ ಹೇಳಿದ :

" ಚೇ ಚೇ ಚೇ ! ಅದೇನೂ ನನಗ ಗೊತ್ತಿಲ್ಲ ಬಿಡ್ರಿ ! ನಮ್ಮ ಅಜ್ಜಗ ಕೂಡಾ ಈ ಮಾತು ಗೊತ್ತು ಇರಲಿಕ್ಕಿಲ್ಲ; ಇದ್ದಿದ್ದರ, ನಮಗೇನೂ ಅಂವ ಹೇಳದs ಬಿಡಾಂವ ಅಲ್ಲರಿ ! "

ನಾನೆಂದೆ :

" ಹಾಂಗಲ್ಲೋ ಕೆಂಚಣ್ಣಾ ! ಆ ಹೊಲಾ ನಿಮ್ಮ ಮನಿತನಕ್ಕ ಸಿಗಲಿಕ್ಕೆ, ಏನಾದರೂ ಹಿಂದಿನ ಕಾಲದಾಗ ಕಾರಣ ಘಟಿಸಿರಲಿಕ್ಕೇ ಬೇಕು ! ಅದೆಲ್ಲಾ ಗೊತ್ತಿರಬೇಕೇನಪಾ ನಿಮಗ ! "

" ಅದನ್ನ ಹ್ಯಾಂಗರೀ ಗೊತ್ತುಮಾಡಿಕೊಳ್ಳೋದು ? ಮತ್ತ ಗೊತ್ತು ಮಾಡಿಕೊಂಡರ ಆಗೂದರೆ ಏನು ? ಇನ್ನೇನೂ ಅದು ಇನಾಮು ಹೊಲಾ ಆಗೂ ಮಾತಲ್ಲಾ ಏನಲ್ಲಾ ! "

ನಿರಾಶೆಯ ಧ್ವನಿಯಲ್ಲಿ ನಾನು ಕೇಳಿದೆ :

" ನಿಮ್ಮ ಮನಿತನದ ಹೇಳವರು ಇದ್ದಾರೇನು ಕೆಂಚಣ್ಣಾ ? "

" ಹೇಳವರು ?.... ಹಂ, ಹೇಳವರೇನೋ ಇದ್ದಾರ್ರಿ !.... ಲೋಕಾಪೂರ ದಾಗ; ಆದರ, ನಮ್ಮ ಮನಿತನದ ಹಿರೇ ಹೇಳವ ಸತ್ತುಹೋಗ್ಯಾನ್ರಿ ! ಹದಿನೈದು ಹದಿನಾರು ವರಸದಾಂವ ಒಬ್ಬ—ಅವನ ಮಗ ಇದ್ದಾನ್ರಿ ! ಅವಕ್ಕೇನು ಗೊತ್ತರಿ—ವೊನ್ನೆ ಹುಟ್ಟಿ ನಿನ್ನೆ ಕಣ್ಣು ತಗದ ಹುಡುಗ ! "

ನಾನು ಮತ್ತೆ ಕುತೂಹಲದಿಂದ ಕೇಳಿದೆ :

" ಹಾಂಗಲ್ಲೋ ! ಹೇಳವರ ಮನ್ಯಾಗ ತಮ್ಮ ಯಜಮಾನರ ಮನಿತನದ ಆದ-ಹೋದ ಮಾತೆಲ್ಲಾ ಬರೆದು ಇಟ್ಟಿರತಾರಂತ. ಹಾಂಗs ನಿಮ್ಮ ಮನಿ-ತನದ ಪುರಾಣಾನೂ ನಿಮ್ಮ ಹೇಳವನ ಮನ್ಯಾಗ ಬರೆದು ಇಟ್ಟಿದ್ದು ಇರಬಹು ದಲ್ಲಾ ! "

ಕೆಂಚಣ್ಣಾ ಆತುರದ ಧ್ವನಿಯಲ್ಲಿ ಹೇಳಲು ತೊಡಗಿದ :

" ಹಾಂ, ಹಾಂ, ಹೌದು ನೋಡ್ರಿ ! ಹಿರೇ ಹೇಳವ ನಮ್ಮ ಮನಿಗೆ ವರಸಾಸನಕ್ಕೆ ಬರೂವಮುಂದ, ಏನೋ ಒಂದು ಹಳೇ ಕಾಗದ ಕಡತಾ ಜತಿಗೆ

ತಂದಿರತಿದ್ದ. ಅದೇನಪ್ಪಾ—ಅಂತ ನಾವು ಕೇಳಿದಾಗ, 'ಅದು ನಿಮ್ಮ ಮನಿ-ತನದ ಹಿರಿ-ಹಿರ್‍ಯಾರ ಪವಾಡ ದೇವರೂ'—ಅಂತ ಹೇಳ್ತಿದ್ದ. ಅದರಾಗ ಏನೇನು ಬರದೈತ್ಯೋ ನಾವೂ ಏನ ಕೇಳತಿರಲಿಲ್ಲ; ಅವನೂ ಏನ ಹೇಳತಿರ ಲಿಲ್ಲ. ಹಾಂಗsss ಬಂದು ಹೊಗಳಿ, ತನ್ನ ಬಾಬು ತೊಗೊಂಡು ಹೋಗತಿದ್ದ!"

ಕೆಂಚಣ್ಣನ ಈ ಮಾತನ್ನು ಕೇಳಿ, ಒಂದು ಬಗೆಯ ಸಂತೋಷವೆನಿಸಿತು ನನಗೆ. ಆ ಕಡತದಲ್ಲಿ 'ನೆತ್ತರ ಕೊಡಿಗೀ ಹೊಲ'ದ ಕಥೆಯೇನಾದರೂ ಸಿಕ್ಕಬಹು ದೆಂದು ಎನ್ನಿಸಲುತೊಡಗಿತು. ಆದುದರಿಂದಲೇ ಕೆಂಚಣ್ಣನಿಗೆ ಮತ್ತೆ ಹೇಳಿದೆ:

"ನೋಡು ಕೆಂಚಣ್ಣಾ, ನನಗ ನಿನ್ನ ನೆತ್ತರ ಕೊಡಿಗೀ ಹೊಲದ ಮೂಲ-ಕಥೀ ತಿಳಕೊಳ್ಳಬೇಕಾಗೇದ. ನಿಮ್ಮ ಹೆಳವರ ಮನೀ ಹೊತ್ತಿಗೀ ಒಳಗ, ಅದರ ದೇನರೇ ಸಂಗತೀ ಬರೆದಿರಲಿಕ್ಕೇ ಬೇಕು. ನಾನೂ ನೀನೂ ಕೂಡಿ, ಲೋಕಾ ಪುರಕ್ಕ ನಿಮ್ಮ ಹೆಳವನ ಕಡೆ ಹೋಗೋಣ ಬರತೀಯಾ?"

"ಏನ್ರೀ ಯಪ್ಪಾ, ಎಂತಾ ಮಾತು? ನೀವು ಕರೆಯೋದು ಹೆಚ್ಚೋ ನಾ ಬರೋದು ಹೆಚ್ಚೋ! ಎಂದ ಬೇಕು ಅಂದ ಕರೀರಿ; ನಾ ಬರ್ತೀನಿ!" ಕೆಂಚಣ್ಣ ಒಪ್ಪಿಗೆ ಕೊಟ್ಟ. ನನಗೆ ಏನೋ ಒಂದು ಬಗೆಯ ತೃಪ್ತಿ.

* * * *

ಮರುದಿನ ಭಾವಬಿದಿಗೆ. ಮನೆಯವರು ಬೇಡ-ಬೇಡವೆಂದು ಹೇಳಿದರೂ ಕೇಳದೆ, ಲೋಕಾಪೂರಕ್ಕೆ ಹೊರಟುಬಿಟ್ಟೆ. ಕೆಂಚಣ್ಣ ತನ್ನ 'ಚಿಗರ್‍ಯಾ ಬಗರ್‍ಯಾ' ಎತ್ತುಗಳನ್ನು ಬಂಡಿಗೆ ಹೂಡಿ, ನನ್ನನ್ನು ಆದರದಿಂದ ಕುಳ್ಳಿರಿಸಿ-ಕೊಂಡು ಲೋಕಾಪುರಕ್ಕೆ ಹೊರಟ. ದಾರಿಯಲ್ಲಿ ನನಗೆ ಇನ್ನಾವುದರ ಯೋಚನೆಯೇ ಇಲ್ಲ. ಹೆಳವನ ಹೊತ್ತಿಗೆಯಲ್ಲಿ ಕೆಂಚಣ್ಣನ ಹೊಲದ ಕತೆ ಸಿಕ್ಕರೆ ಎಷ್ಟು ಚೆನ್ನಾಗುವುದು—ಒಂದು ಜಾನಪದ ಇತಿಹಾಸವನ್ನು ಸಂಶೋ-ಧಿಸಿದ ಶ್ರೇಯ ನನಗೆ ಸಿಕ್ಕಬಹುದು—ಯಾವ ವೀರನ ಯಾವ ವೀರತನಕ್ಕಾಗಿ ಈ ಉಂಬಳಿ ದೊರೆತಿದೆಯೋ!— ಯಾವ ಕಾಲದಲ್ಲಿ ಯಾರಿಂದ ದೊರೆತಿ ದೆಯೋ—ಅಯ್ಯೊ, ಕನ್ನಡಿಗರ ಇಂತಹ ಎಷ್ಟೊಂದು ಇತಿಹಾಸ ಕಣ್ಮರೆಯಾಗಿ ಹೋಗಿದೆಯಲ್ಲ!—ಈ ಕಣ್ಮರೆಯಾದ ಇತಿಹಾಸವೆಲ್ಲ ಎಂದು ಹೊರಗೆ ಬಂದು ಮೆರೆದೀತು?—ಇವೇ ಯೋಚನೆಗಳು.

ಲೋಕಾಪುರವನ್ನು ತಲ್ಪಿದೆವು. ಹೆಳವನ ಮನೆಗೇ ಹೋದೆವು. ಪರಿ-ಚಯದ ಮಾತು-ಕತೆಗಳಾದ ಮೇಲೆ, ಆ ಬಡ ಹುಡುಗ ಒಡೆಯನ ಗುರುತನ್ನು ಹಿಡಿದು, ಮುಂಗಟ್ಟೆಯ ಮೇಲೆ ಕಂಬಳಿ ಹಾಸಿ, ಆದರಭಾವದಿಂದ ನಮ್ಮನ್ನು ಕುಳ್ಳಿರಿಸಿದ. ಕೆಂಚಣ್ಣ ಆ ಹುಡುಗನಿಗೆ ಹೇಳಿದ:

" ಏನೋ ಹೆಳವಾ! ನಿಮ್ಮಪ್ಪ ನಮ್ಮ ಮನಿಗೆ ಬಂದಾಗೆಲ್ಲಾ ನಮ್ಮ ಹಿರ್‍ಯಾರ ಬದುಕಿನ ಸಂಗ್ತೀನೆಲ್ಲಾ ಬರೆದಿರೋ ಹೊತ್ತಿಗೀ ತಂದಿರತಿದ್ದ. ಈ ರಾಯರಿಗೆ ಆ ಹೊತ್ತಿಗೀ ನೋಡಬೇಕಾಗ್ಯೆತೆಂತ. ಅದಕ್ಕs ಇಂದ ಮುದ್ದಾಮ ಗಾಡೀ ಹೂಡಿಕೊಂಡು ಇಲ್ಲೀತನಕಾ ಬಂದೀವಿ. ಆ ಹೊತ್ತಿಗಿ ಎಲ್ಲಿ ಐತೀ ನಿನಗ ಗೊತ್ತಿರಬೇಕು!"

ಹುಡುಗ ಹೇಳಿದ:

" ಗೊಂತಿರದs ಏನ ಮಾಡೀತು ಒಡಿಯಾ! ನನಗ ಓದು-ಬರಿ ಬರದಿದ್ದರೂ, ನಮ್ಮ ಅಪ್ಪ, ಯಾವ ಯಾವ ಹೊತ್ತಿಗಿ ಯಾರ್‍ಯಾರದೂ ಅಂಬೂದನ್ನ ಗುರತಾ ಮಾಡಿ ಕೊಟ್ಟಾನ! ನಮ್ಮ ಅಪ್ಪ ಸತ್ತಮ್ಯಾಗ, ಎರಡು ಮೂರು ವರಸಾದೂ—ತಮ್ಮ ಮನೀ ಕಡೆ ಬರಲಾಕ ನನಗ ಆಗೇ ಇಲ್ಲ. ಒಂದೊಂದs ಹೊತ್ತಿಗೀನ, ಯಾರಾದರೂ ಬರೀ ಬಲ್ಲವರಿಗೆ ತೋರಿಸಿ, ಎಲ್ಲಾ ಮಾಯ್ತೀ ಮಾಡಿಕೊಳ್ಳಬೇಕಂದರ, ನನ್ನಂತಾ ಬಡವನ ಮಾತು ಕೇಳಿ ಯಾರು ಹೇಳತಾರ್‍ರಿ? ಮತ್ತ ಏನೂ ಮಾಯ್ತೀ ಮಾಡಿಕೊಳ್ಳದ, ದಣ್ಯಾರ ಮನಿಗೆ ವರ್ಸಾಸನಕ್ಕ ಬರೂದಾದರೂ ಹ್ಯಾಂಗ ಹೇಳ್ರಿ! ಅದಕ್ಕs ನಾನು, ನಮ್ಮವ್ವ ದುಡಕೊಂಡು ಹ್ಯಾಂಗೋ ಹೊಟ್ಟೀ ತುಂಬಿಕೊಂಡು ಇದ್ದೀದಿವೇನ್ರಿ!"

ಆ ಹುಡುಗನ ದೈನ್ಯಭಾವವನ್ನು ಕಂಡು, ನನಗೆ ತುಂಬ ಕಳವಳವೆನಿಸಿತು. ನಾನು ಹೇಳಿದೆ:

" ಸರಿಯಪ್ಪಾ! ಈಗ ಈ ಕೆಂಚಣ್ಣನ ಮನಿತನದ ಹೊತ್ತಗೀ ತೊಗೊಂಡು ಬಾ, ನೋಡೋಣ!"

ಹುಡುಗ ಎದ್ದು ಒಳಗ ಹೋಗಿ, ಹಳೆಯ ಹರಕು ಬಟ್ಟೆಯಲ್ಲಿ ಕಟ್ಟಿ ಇಟ್ಟ ಹೊತ್ತಗೆಯನ್ನು ಹೊರಕ್ಕೆ ತಂದ. ಬಟ್ಟೆಯನ್ನು ಒಂದೊಂದಾಗಿ ಬಿಚ್ಚಿ, ಒಳಗೆ ಸುರಕ್ಷಿತವಾಗಿ ಇರಿಸಿದ ಕರಡುಕಾಗದದ ಹಳೆಯ ಹೊತ್ತಗೆಯನ್ನು

ನನ್ನ ಕೈಗೆ ಕೊಟ್ಟ. ಕೈಯಲ್ಲಿ ತೆಗೆದುಕೊಂಡು ನೋಡಿದೆ: 'ಸಿರಿಯೂರ ತಳವಾರ ಪೀಳಿಗೀ ಪವಾಡ' ಎಂದು, ಮೇಲೋಲೆಯ ಮೇಲೆಯೆ ಪಳಗದ ಕೈಯ ಬರೆಹದಿಂದ ಅಂಕುಡೊಂಕಾದ ಅಕ್ಷರಗಳಿದ್ದುದು ಕಾಣಿಸಿತು. ಕುತೂಹಲದಿಂದ ಮೊದಲ ಹಾಳೆಯನ್ನು ತೆಗೆದು ಓದಲು ತೊಡಗಿದೆ. ಮನೆತನದ ಮೂಲಪುರುಷ ಜಕ್ಕಣ್ಣನ ಚರಿತ್ರೆಯಿಂದ ಹೊತ್ತಗೆ ಪ್ರಾರಂಭವಾಗಿದ್ದಿತು. ಇನ್ನೂರು ವರ್ಷಗಳ ಹಿಂದಿನ ಲಿಪಿಯ ಮಾದರಿ. ಬರೆದ ಭಾಷೆ ತೀರ ಗ್ರಾಮ್ಯ ರೀತಿಯದು. ಆದರೆ ಬರೆದ ವಿಷಯವನ್ನು ಸುಲಭವಾಗಿ ಅರ್ಥಮಾಡಿಕೊಳ್ಳಲು ಬರುವಂತಿದ್ದಿತು. ಎಂತಲೆ ಸರಸರನೆ ಹಾಳೆಯ ಮೇಲೆ ಕಣ್ಣಾಡಿಸಲು ತೊಡಗಿದೆ.

ಮೂಲಪುರುಷ ಜಕ್ಕಣ್ಣನ ಕತೆ ಆರೆಂಟು ಸಾಲಿನಲ್ಲಿ ಮುಗಿದು ಹೋಗಿದ್ದಿತು. ಆತ ಬಂಕಾಪುರದಿಂದ ಬಂದು ಸಿರಿಯೂರಲ್ಲಿ ನೆಲಸಿದವನಂತೆ. ಅವನ ಮಗ ಬಂಕಣ್ಣ ಬಲುಗೈಯ ಬಂಟ! ಸಿರಿಯೂರ ದೇವಿಯ ಜಾತ್ರೆಯ ಕಾಲದಲ್ಲಿ ನಡೆದ ಜಟ್ಟಿಗಾಳಿಗದಲ್ಲಿ, ಬಂಕಣ್ಣ ಬಿರುದಿನ ಜಟ್ಟಿಗಳನ್ನೆಲ್ಲ ಗೆದ್ದು ವೈಯೆಲುಬುಗಳನ್ನು ಮುರಿದುಬಿಟ್ಟನಂತೆ. ಇದನ್ನು ಕೇಳಿ ಸಿರಿಯೂರ ನಾಡಗೌಡ ನಾಗಪಯ್ಯ, ಬಂಕಣ್ಣನನ್ನು ಬರಮಾಡಿಕೊಂಡು, ಮನ್ನಣೆ ಮಾಡಿ, ತನ್ನ ಅರಮನೆಯಲ್ಲಿ ತಳವಾರನನ್ನಾಗಿ ಮಾಡಿಕೊಂಡನಂತೆ. ಬಂಕಣ್ಣನ ಮಗ ಮುತ್ತಣ್ಣ. ಇವನ ಹೆಸರನ್ನು ಹೇಳುವಾಗಲೆ ಆ ಹೊತ್ತಗೆಯಲ್ಲಿ 'ನೆತ್ತರ ಕೊಡಿಗೆಯ ಮಾನ್ಯದ ಬಂಟ ಮುತ್ತಣ್ಣ ತಳವಾರ' ಎಂದಿದ್ದುದನ್ನು ಓದಿದೆ. ನನಗಾಗ ಎದ್ದು ಕುಣಿದಾಡಬೇಕೆನ್ನುವಷ್ಟು ಮೈಯಲ್ಲಿ ಉತ್ಸಾಹದ ಸಂಚಾರವಾಯಿತು. ಉತ್ಸಾಹದ ಭರದಲ್ಲಿಯೆ ಮುಖವೆತ್ತಿ ನೋಡಿದಾಗ, ಕೆಂಚಣ್ಣನೊಂದಿಗೆ ಹುಡುಗ ತನ್ನ ಸಂಸಾರದ ಸುಖ-ದುಃಖದ ಮಾತುಗಳನ್ನೇನೋ ಮೆಲುಮಾತುಗಳಲ್ಲಿ ತೋಡಿಕೊಳ್ಳುತ್ತಿದ್ದ. ನಾನು ಮತ್ತೆ ಹೊತ್ತಗೆಯಲ್ಲಿ ನನ್ನ ಸಂಭ್ರಮಭಾವದ ಕಣ್ಣುಗಳನ್ನು ತೂರಿಸಿದೆ. ಓದುತ್ತ ನಡೆದಂತೆಲ್ಲ ಮುತ್ತಣ್ಣನ ವೀರಚಿತ್ರವು, ನನ್ನ ಒಳಗಣ್ಣೆದುರು ವಿವಿಧ ರೂಪಗಳನ್ನು ತೊಟ್ಟು, ಪವಾಡ ಹಾಡಲು ತೊಡಗಿತು. ಹತ್ತು ನಿಮಿಷವಾಯಿತು; ಹದಿನೈದು ನಿಮಿಷವಾಯಿತು, ಇಪ್ಪತ್ತು ನಿಮಿಷವಾಯಿತು; ಹೊರಗಿನ ಯಾವ ಪರವೆಯೂ ಇಲ್ಲದವನಾಗಿ ಓದುತ್ತಲೇ ಇದ್ದೆ. ಭಾಷೆಯೇನೋ ತೀರ ಗ್ರಾಮ್ಯ. ಆದರೆ ಮುತ್ತಣ್ಣನ ವೀರಚರಿತ್ರೆ ಮೈಮೇಲೆ ಮುಳ್ಳು ತರಿಸುವಂತಹದು; ಹೃದಯ

ವನ್ನು ಜುಮ್ಮುದಟ್ಟಿಸುವಂತಹದು. ಚರಿತ್ರೆಯನ್ನು ಓದಿ ಮುಗಿಸುವುದರಲ್ಲಿಯೆ ತಳವಾರ ಮುತ್ತಣ್ಣ, ನನಗೆ ಸಿರಿಯೂರ ನಾಡಗೌಡರ ಮನೆಯ ಊಳಿಗ ದಾಳಾಗಿ ಕಾಣದೆ, ಒಬ್ಬ ದೇವದೂತನಾಗಿ ಕಾಣಲು ತೊಡಗಿದ. ಹೊತ್ತಗೆಯಲ್ಲಿ ಬರೆದ ಭಾಷೆಯಲ್ಲಿ ಆ ಕತೆಯನ್ನು ಹೇಳುವುದಕ್ಕಿಂತ, ಅದನ್ನೋದಿ ನನಗೆ ಗೊತ್ತಾದ ಸಂಗತಿಯನ್ನು ನನ್ನ ಭಾಷೆಯಲ್ಲಿಯೆ ಹೇಳುತ್ತೇನೆ ಕೇಳಿರಿ:

" ನಾಗಪಯ್ಯ ನಾಡಗೌಡರಿಗೆ ಇಬ್ಬರು ಹೆಂಡಿರು. ಮೊದಲನೆಯ ಹೆಂಡತಿ ದೇವಬ್ಬೆ, ಎರಡು ವರ್ಷದ ಹೆಣ್ಣುಹಸುಳೆ ಮಲ್ಲಿಗೆಯನ್ನು ಬಿಟ್ಟು ಶಿವನ ಪಾದ ಸೇರಿದಳು. ಆ ಮೇಲೆ ನಾಗಪಯ್ಯ ಗುಜ್ಜನೂರಿನ ಗೌಡ ಗೋವಿನಾಯಕನ ಮಗಳು ಚೊಕ್ಕಬ್ಬೆಯನ್ನು ಮದುವೆಯಾದ. ಮೊದಲುಗಿತ್ತಿಯಾಗಿ ಮನೆಗೆ ಬಂದಂದಿನಿಂದ, ಮಲ್ಲಿಗೆಯನ್ನು ಕಂಡರೆ ಚೊಕ್ಕಬ್ಬೆಗೆ ಎದೆ ಸೋಲುವುದು. ಚೆಲುವೆ ಮಲ್ಲಿಗೆಯನ್ನು ಆಕೆ ತನ್ನ ಮಗಳೆಂದೇ ಮುದ್ದಿನಿಂದ ಬೆಳೆಯಿಸತೊಡಗಿದಳು. ಚೊಕ್ಕಬ್ಬೆಯ ಈ ಹಿರಿಯಗುಣವನ್ನು ಕಂಡು, ನಾಡಗೌಡ ತುಂಬ ಮೆಚ್ಚಿಕೊಂಡಿದ್ದ. ತನ್ನ ಪ್ರೀತಿಯ ಮಗಳು ಮಲ್ಲಿಗೆಯನ್ನು, ಮಲತಾಯಿಯ ಬಳಿಯಿಂದ ಅಗಲಿಸಿ, ಅವಳ ತಾಯ ತವುರಿಗೆ ಕಳುಹಬೇಕಾಗುವುದೇನೋ ಎಂದು ಭಾವಿಸಿದ್ದ ನಾಗಪಯ್ಯನ ಭಾವನೆಗೆ ಎಡೆಯಿಲ್ಲದಂತಾಯಿತು. ತಬ್ಬಲಿ ಕೂಸಿಗೆ ಅಬ್ಬೆಯ ಪ್ರೀತಿಯೇ ದೊರೆಯತೊಡಗಿದುದನ್ನು ಕಂಡಾಗ, ನಾಗಪಯ್ಯ ನಿಶ್ಚಿಂತನಾದ. ಚೊಕ್ಕಬ್ಬೆಯಲ್ಲಿಯ ಆತನ ಪ್ರೀತಿ-ವಿಶ್ವಾಸಗಳು ಇಮ್ಮಡಿಗೊಂಡುವು. ಆಗಲೆ ಬಂಕಯ್ಯ ತುರುಗಾಳಿಗದಲ್ಲಿ ವೀರಸ್ವರ್ಗ ಪಡೆದುದರಿಂದ, ನಾಗಪಯ್ಯ ಬಂಕಯ್ಯನ ಹಿರಿಯ ಮಗ ಮುತ್ತಣ್ಣನನ್ನು ಅರಮನೆಯ ತಳವಾರಿಕೆಯ ಊಳಿಗಕ್ಕೆ ಸೇರಿಸಿಕೊಂಡ. ತಂದೆ ಕಾದಿ ಮಡಿದ ತುರುಗಾಳಿಗದಲ್ಲಿ, ನಾಡಗೌಡರಿಗೆ ಗೆಲವನ್ನು ಗಳಿಸಿ ಕೊಟ್ಟ ಹುಲಿಯೀತ. ಅಂದೆಯೆ ನಾಡಗೌಡ, ಮುತ್ತಣ್ಣನ ಎಡಗೈಗೆ ಬಿರುದಿನ ವೀರಗಂಕಣವನ್ನು ತೊಡಿಸಿ, ಮನೆಯರಸಿಯಿಂದ ಆರತಿ ಮಾಡಿಸಿದ. ಮುತ್ತಣ್ಣನ ಒಂದೊಂದು ವೀರತನದ ಅಡಿಯೂ, ನಾಡಗೌಡರ ಮನೆಯಲ್ಲಿ ಅವನ ವಿಷಯವಾಗಿ ಮಮತೆಯನ್ನು ಹೆಚ್ಚಿಸಿತು.

ನಾಗಪಯ್ಯನವರಿಗೆ ಚೊಕ್ಕಬ್ಬೆಯಿಂದ ಮಕ್ಕಳಾಗಲೇ ಇಲ್ಲ. ಮಲ್ಲಿಗೆಯ

ಮಮತೆಯಲ್ಲಿ, ಆಕೆಗೆ ಮಕ್ಕಳಿಲ್ಲದ ದುಃಖವೆಂದರೇನೆಂಬುದು ಗೊತ್ತೇ ಇರಲಿಲ್ಲ. ನಾಗಪಯ್ಯನಿಗೆ ಆಶೆ: ಮಲ್ಲಿಗೆಯನ್ನು ಅವಳ ಸೋದರಮಾವನ ಮಗ ಶಿವಗೊಂಡನಿಗೆ ಕೊಡಬೇಕೆಂದು. ಆಗಾಗ ಮನೆಗೆ ಬಂದು ಹೋಗುತ್ತ ಲಿದ್ದ ಶಿವಗೊಂಡನಿಗೂ ಮಲ್ಲಿಗೆಗೂ ಸಲುಗೆ-ಪ್ರೀತಿಗಳು ಬೆಳೆಯುತ್ತ ಬಂದಿದ್ದುವು. ಚೊಕ್ಕಬ್ಬೆಗೂ ಇವರಿಬ್ಬರ ಸಲುಗೆ-ಪ್ರೀತಿಗಳು ಸಂತೋಷವನ್ನುಂಟುಮಾಡಿದ್ದುವು. ಮಲ್ಲಿಗೆಗೆ ಹದಿನೈದು ವರ್ಷಗಳು ತುಂಬಿದುವು. ಈ ವರ್ಷದ ಬೇಸಗೆಯಲ್ಲಿ ಮದುವೆಯ ಕಾರ್ಯವನ್ನು ಮುಗಿಸಿಬಿಡಬೇಕೆಂಬ ವಿಚಾರದಲ್ಲಿರುವಾಗಲೆ, ನಾಗಪಯ್ಯನಿಗೆ ಕೆಟ್ಟ ಜ್ವರ ಬಂದು ಕಾಲವಶರಾಗಿದ್ದರು. ಮುತ್ತಣ್ಣ ತನ್ನ ಒಡೆಯನನ್ನು ಹುಲಿಯ ಬಾಯಿಂದ ಬದುಕಿಸಿದ್ದ; ವೈರಿಗಳ ವ್ಯೂಹ-ದೊಳಗಿಂದ ಪಾರುಮಾಡಿದ್ದ; ಎಂತಹ ಕುತ್ತದೊಳಗಿಂದಲೂ ಅವರನ್ನು ಕಡೆ-ಹಾಯಿಸಿದ್ದ. ಆದರೆ ಯಮರಾಜನ ಎದುರು ಅವನ ಆಟ ಹೇಗೆ ನಡೆಯಬೇಕು? ಒಡೆಯನನ್ನು ಕಳೆದುಕೊಂಡು ಪರದೇಶಿ ಕೂಸಿನಂತೆ ಆದನಾದರೂ ಒಡೆಯರ ಕೊನೆಯ ಬಯಕೆಯಂತೆ, ಅವನು ತಳವಾರನಾಗಿ ಅರಮನೆಯಲ್ಲಿಯೆ ಉಳಿದ.

ನಾಗಪಯ್ಯ ಸತ್ತಬಳಿಕ, ಅರಮನೆಯಲ್ಲಿ ಗಂಡುಸರೆಂಬವರು ಇಲ್ಲದಂತಾಗಲು, ಚೊಕ್ಕಬ್ಬೆ ತನ್ನ ಎರಡನೆಯ ತಮ್ಮ ಮಾರಿಗೊಂಡನನ್ನು ಸಿರಿ-ಯೂರಿಗೆ ಕರೆಯಿಸಿಕೊಂಡು ಅರಮನೆಯಲ್ಲಿ ಇರಿಸಿಕೊಂಡಳು. ಮೊದ-ಮೊದಲು ಮಾರಿಗೊಂಡ, ಮನೆಯಲ್ಲಿ ಎಲ್ಲರನ್ನೂ ಹೊಂದಿಕೊಂಡು ಪ್ರೀತಿಯಿಂದ ಇರುತ್ತಿದ್ದ. ಮಲ್ಲಿಗೆಯನ್ನು ಕಂಡರಂತೂ ಎಲ್ಲಿಲ್ಲದ ಪ್ರೀತಿ ಉಕ್ಕುತ್ತಿತ್ತು—ಅವನಲ್ಲಿ. ಶಿವಗೊಂಡ ಸಿರಿಯೂರಿಗೆ ಬಂದು ಮಲ್ಲಿಗೆಯೊಂದಿಗೆ ತೋರಿಸುವ ಸಲುಗೆ-ಪ್ರೀತಿಗಳನ್ನು ನೋಡಿದಾಗ, ಮೊದಲನೆಯ ಸಲವೆ ಮಾರಿಗೊಂಡನಿಗೆ—ಕರುಳಿಗೆ ಬರೆಯಿಕ್ಕಿದಂತಾಯಿತು. ಮೇಲೆ ಮೇಲೆ ಶಿವ-ಗೊಂಡನೊಂದಿಗೆ ಸ್ನೇಹವನ್ನು ನಟಿಸುತ್ತಲಿದ್ದರೂ, ಒಳಗೊಳಗೆ ಅವನಿಗೆ ತಿಳಿಯದ ಹಾಗೆಯೆ ತಿರಸ್ಕಾರ ತಲೆಯೆತ್ತಿ ನಿಂತಿತು. ತಿರಸ್ಕಾರವೇ ಬರು-ಬರುತ್ತ ಕರುಳುರಿಯಾಗಲುತೊಡಗಿತು. ಕರುಳುರಿಯೆ ಹಗೆಯಾಗಿ ಹೊತ್ತಲು ತೊಡಗಿತು. ಅದೇಕೋ, ಮಾರಿಗೊಂಡ ಮನೆಗೆ ಬಂದು ಕಾಲಿಕ್ಕಿದಂದಿನಿಂದಲೂ ಮುತ್ತಣ್ಣ ಅವನನ್ನು ಸಂದೇಹದೃಷ್ಟಿಯಿಂದಲೇ ನೋಡಲುತೊಡಗಿದ್ದ. ಮನೆಯ

ಒಳಗೆ ಹೊರಗೆ ನಡೆಯಿಸುವ ಅವನ ಕಾರಭಾರಗಳು, ಮುತ್ತಣ್ಣನ ಮನಸ್ಸಿಗೆ ಬರುತ್ತಿರಲಿಲ್ಲ. ಆದರೆ ಮಾಡುವನೇನು ? ತನ್ನ ಒಡತಿಯ ಸ್ವಂತ ತಮ್ಮ; ಆದರೂ ಅವನ ಮೇಲೆ ತನ್ನ ಕಳ್ಳನೋಟವನ್ನು ಯಾವಾಗಲೂ ಇರಿಸಿರುವನು.

ಮಲ್ಲಿಗೆಗೆ ಹದಿನೆಂಟು ವರ್ಷಗಳು ತುಂಬಿದುವು. ನಾಗಪಯ್ಯನ ಅಗಲಿಕೆಯ ದುಃಖ, ದಿನಗಳು ಹೋದಂತೆಲ್ಲ ಮರೆಯಾಗುತ್ತ ನಡೆದಿದ್ದಿತು. ಚೊಕ್ಕಬ್ಬೆ ಮಲ್ಲಿಗೆಯ ಮದುವೆಯ ವಿಷಯ ಮಾತನಾಡಲು ತೊಡಗಿದಳು. ಈ ವರ್ಷ ಮದುವೆ ಮಾಡಿಬಿಡೋಣವೆಂದು ಶಿವಗೊಂಡನ ತಂದೆಗೆ ಹೇಳಿ ಕಳುಹಿ ಒಪ್ಪಿಗೆಯನ್ನೂ ಪಡೆದಳು;....ಮನೆಯಲ್ಲಿ ಮದುವೆಯ ಸಲಕರಣೆಗೆ ಮೊದಲಾಯಿತು. ಆದರೆ ಮಾರಿಗೊಂಡ ಮಾತ್ರ ಇತ್ತೀಚೆಗೆ, ಬಿಗಿದ ಮೊಗದವನಾಗಿಯೆ ಇರುತ್ತಿದ್ದ. ಅಕ್ಕ-ತಮ್ಮಂದಿರಲ್ಲಿ ಏನು ಮಾತುಗಳು ನಡೆದುವೇನೋ, ಚೊಕ್ಕಬ್ಬೆಗೆ ತಮ್ಮನಲ್ಲಿಯ ಪ್ರೀತಿ-ವಿಶ್ವಾಸಗಳು ಕಡಿಮೆಯಾಗಿದ್ದುವು. ಮಾರಿಗೊಂಡ ಒಂದೊಂದು ದಿನ ಅಕ್ಕನೊಂದಿಗೆ ತುಂಬ ನಗುತ್ತ ಕೆಲೆಯುತ್ತ ಮಾತನಾಡುತ್ತಲಿದ್ದ; ಇನ್ನೊಂದೊಂದು ದಿನ ಮುಖವನ್ನು ಗಂಟುಹಾಕಿಕೊಂಡೇ ಇದ್ದುಬಿಡುತ್ತಿದ್ದ....ಮುತ್ತಣ್ಣ ಮಾರಿಗೊಂಡನ ಇದೆಲ್ಲ ರೀತಿಯ ಮೇಲೆಯೂ ಚೆನ್ನಾಗಿ ಕಣ್ಣಿಟ್ಟಿದ್ದ.

ಒಮ್ಮೆಂದೊಮ್ಮೆ ಮಾರಿಗೊಂಡನ ಸ್ವಭಾವದಲ್ಲಿ ಮಾರ್ಪಾಡು ಕಾಣಲು ತೊಡಗಿತು. ಮಲ್ಲಿಗೆಯ ಮದುವೆಯ ಸಿದ್ಧತೆಯ ಕೆಲಸದಲ್ಲಿ ಹೆಚ್ಚು ಆಸ್ಥೆಯಿಂದ ಮನಸ್ಸು ಹಾಕಲು ತೊಡಗಿದ. ಎಲ್ಲರೊಡನೆಯೂ ನಗುತ್ತ ಕೆಲಯುತ್ತ ಮಾತನಾಡಲು ತೊಡಗಿದ. ಶಿವಗೊಂಡನ ಹೆಸರನ್ನು ನೆನಪು ಮಾಡಿಕೊಟ್ಟು ಮಲ್ಲಿಗೆಯನ್ನು ಛೇಡಿಸಲೂ ಆರಂಭಿಸಿದ. ಇದ್ದುದಿದ್ದ ಹಾಗೆಯೆ ಯಾರಿಗೂ ಗೊತ್ತಾಗದಂತೆ, ಓಲೆಕಾರನೊಬ್ಬನನ್ನು ಗುಜ್ಜನೂರಿಗೆ ಕಳುಹಿದ. ಇದು ಮಿಕ್ಕವರಾರಿಗೆ ಗೊತ್ತಾಗದೆ ಹೋದರೂ, ಮುತ್ತಣ್ಣನ ಗರುಡದೃಷ್ಟಿಗೆ ಗೊತ್ತಾಗದೆ ಇರಲಿಲ್ಲ. ಗುಜ್ಜನೂರಿಗೆ ಹೋದ ಓಲೆಕಾರ ಮರಳಿ ಸಿರಿಯೂರಿಗೆ ಬಂದು ಮಾರಿಗೊಂಡನನ್ನು ಕಂಡುದನ್ನೂ ಹಂಚಿಕೆಯಿಂದ ಕಂಡುಹಿಡಿಯದೆ ಬಿಡಲಿಲ್ಲ.

ಮುಂದೆ ಎರಡನೆಯ ದಿನ, ಮನೆಯವರೆಲ್ಲ ಸೇರಿ ತೋಟದೂಟಕ್ಕೆ

ಹೋಗೋಣವೆಂದು, ಮಾರಿಗೊಂಡ ತುಂಬ ಆತ್ಮೀಯತೆಯ ಒತ್ತಾಯದಿಂದಲೆ ಅಕ್ಕನಿಗೆ ಹೇಳಿದ. ಇತ್ತೀಚೆಗೆ ಆಗಿದ್ದ ತಮ್ಮನಲ್ಲಿಯ ಮನಸ್ಸಿನ ಮಾರ್ಪಾಡು, ಚೊಕ್ಕಬ್ಬೆಗೆ ಸಮಾಧಾನವನ್ನುಂಟುಮಾಡುತ್ತಿತ್ತು. ತಮ್ಮನ ಮಾತನ್ನು ಒಪ್ಪಿದಳು. ಮನೆಯಲ್ಲಿ ತೋಟದೂಟದ ಸಿದ್ಧತೆ ನಡೆಯಿತು. ಮುತ್ತಣ್ಣ, ಈ ತೋಟದೂಟವು ಬೇಡವೆನ್ನಲು ಎರಡು ಮೂರು ಸಲ ಪ್ರಯತ್ನಪಟ್ಟ; ಆದರೆ ಒಡತಿ ಏನು ತಿಳಿದುಕೊಂಡಾಳೋ ಎಂದು ಬಾಯಿಬಿಚ್ಚಿ ಮಾತನಾಡದೇ ಇದ್ದ. ಎಲ್ಲರೂ ತೋಟಕ್ಕೆ ಹೊರಟುನಿಂತಾಗ, ಮುತ್ತಣ್ಣನು ಎಲ್ಲಿ ಕಣ್ಮರೆಯಾಗಿದ್ದನೋ ಗೊತ್ತಾಗಲಿಲ್ಲ. ಚೊಕ್ಕಬ್ಬೆಯ ಅಪೇಕ್ಷೆಯಂತೆ ಮಾರಿಗೊಂಡ ಅವನನ್ನು ಹುಡುಕಿಸಿದಂತೆ ಮಾಡಿದ; ಆದರೆ ಎಲ್ಲಿಯೂ ಇಲ್ಲವೆಂಬುದು ಗೊತ್ತಾದಾಗ, ಚೊಕ್ಕಬ್ಬೆಗೇಕೋ ಕಳವಳವೆನಿಸಿತು. ಮಲ್ಲಿಗೆಯ ಮುಖ ಬಾಡಿ ಹೋಯಿತು. ಆದರೂ ಮಾರಿಗೊಂಡನ ಅಪೇಕ್ಷೆಯನ್ನು ಮುರಿಯುವುದು ಹೇಗೆ? ಕೊಲ್ಲಾರ ಬಂಡಿಯಲ್ಲಿ ಕುಳಿತು ಮೂವರೂ ಗೌರೀ ತೋಟದತ್ತ ಹೊರಟರು. ಬಂಡಿಯ ಜೊತೆಗೆ ಇಬ್ಬರು ಓಲೆಕಾರರಿದ್ದರು. ಮಾರಿಗೊಂಡನೇ ಅವರಿಗೆ ಬರುವಂತೆ ನಿಯಮಿಸಿದ್ದ.

ಸಿರಿಯೂರಿಂದ ಒಂದೂವರೆ ಮೈಲಿನ ಮೇಲೆ ನಾಡಗೌಡರ ಗೌರೀ ತೋಟ. ಕೊಲ್ಲಾರಿಯ ಬಂಡಿ ತೋಟವನ್ನು ತಲ್ಪಿದಾಗ, ನಾಲ್ಕು ತಾಸು ಹೊತ್ತು ಏರಿದ್ದಿತು. ತೋಟ ಮಾಡಿದ್ದ ಒಕ್ಕಲಿಗ ಸಂಕಪ್ಪ, ಮನೆ ಮಾಡಿಕೊಂಡು ಅಲ್ಲಿಯೇ ಇದ್ದ. ನಾಡಗೌಡರ ಮನೆಯವರು ಬಂದಾಗ, ಆತ ಬಂದು ವಿನಯದಿಂದ ನಮಸ್ಕಾರ ಮಾಡಿ, ಊಟಕ್ಕಾಗಿ ಅನುಕೂಲಪಡಿಸಿದ್ದ ಸ್ಥಳವನ್ನು ತೋರಿಸಿದ. ಆಗಾಗ ಸಂಕಪ್ಪ, ಗಾಬರಿಗಣ್ಣಿನಿಂದ ಮಾರಿಗೊಂಡನನ್ನು ನೋಡುವನು. ಮಾರಿಗೊಂಡನು ಅಭಯಸೂಚಕ ದೃಷ್ಟಿಗಳಿಂದ ಸಂಕಪ್ಪನನ್ನು ನೋಡುವನು. ಚೊಕ್ಕಬ್ಬೆ-ಮಲ್ಲಿಗೆಯರಿಗೆ ಇದೊಂದೂ ಕಣ್ಣಿಗೆ ಬೀಳಲಿಲ್ಲ. ಅವರು ಗುಲಾಬಿಯ ಗಿಡಗಳಲ್ಲಿ ಅರಳಿದ ರಾಶಿ-ರಾಶಿ ಹೂಗಳನ್ನು ಹಿಗ್ಗುಗಣ್ಣುಗಳಿಂದ ನೋಡುವುದರಲ್ಲಿದ್ದರು.

ಸರಿ! ಸವಿಸವಿಯ ವಿವಿಧ ತಿನಿಸುಗಳ ಊಟ ನಡೆಯಿತು. ಸುಂದರವಾದ ಸ್ವಂತದ ತೋಟದಲ್ಲಿ ಬಂದು ಕುಳಿತಿದ್ದ ತಾಯಿ-ಮಗಳಿಬ್ಬರಲ್ಲಿಯೂ

ಉತ್ಸಾಹಭಾವವೊಂದೇ ಆಟವಾಡುತ್ತಲಿದ್ದಿತು. ಊಟವಾದ ಮೇಲೆ, ಮಾವಿನ ಮರದ ಕೆಳಗಿನ ಮೆಲುವಾಸುಗಳ ಮೇಲೆ ಮಲಗಿ ಚೊಕ್ಕಬ್ಬೆ, ಮಲ್ಲಿಗೆ ವಿಶ್ರಾಂತಿ ತೆಗೆದುಕೊಳ್ಳಲುತೊಡಗಿದರು. ಮಾರಿಗೊಂಡ ಆಗಾಗ ದೂರದೃಷ್ಟಿಗಳನ್ನು ನೀಡಿ, ಯಾರದೋ ದಾರಿಯನ್ನು ನೋಡುತ್ತಿದ್ದ. ಮತ್ತೆ ಮಲಗಿಕೊಂಡಂತೆ ನಟಿಸುತ್ತಿದ್ದ.

ಹಗಲು ಮೂರು ಪ್ರಹರ ಮೀರಿರಬಹುದು. ತಾಯಿ-ಮಗಳು ಮಲಗಿಕೊಂಡೇ ಇದ್ದರು. ಮಾರಿಗೊಂಡ, ಹಾವಿನ ಹೆಡೆಯಂತೆ ತಲೆಯೆತ್ತಿ ನೋಡಿದ. ಊರ ಕಡೆಯಿಂದ ಹತ್ತೆಂಟು ಜನರು, ರಭಸದಿಂದ ತೋಟದ ಕಡೆಗೆ ಸಾಗಿ ಬರುವುದು ಕಂಡಿತು. ಗಾಬರಿಯಾಗಿ ಮೇಲಕ್ಕೆದ್ದು ನೋಡಿದ; ಗುಂಪು ಓಟದ ನಡಿಗೆಯಿಂದಲೇ ತೋಟವನ್ನು ಸಮೀಪಿಸಿತು. ಮಾರಿಗೊಂಡ ಮಲಗಿದಲ್ಲಿಯೆ ದಿಗ್ಗನೆ ಎದ್ದುನಿಂತು, ಕಂಗೆಟ್ಟವನಂತೆ ಒಂದು ಕ್ಷಣ ತಡೆದು, ಆ ಮೇಲೆ ಆ ಜನರು ಬರುವುದರ ವಿರುದ್ಧ ದಿಕ್ಕಿನಿಂದ—ಮೈಮೇಲೆ ಎಚ್ಚರವಿಲ್ಲದವನಂತೆ—ಓಡಲು ತೊಡಗಿದ. ಮೋರೆ ಹುಚ್ಚಿಟ್ಟದ್ದಿತು.

ಊರ ಕಡೆಯಿಂದ ಬಂದ ಜನರು ಮಲ್ಲಿಗೆ-ಚೊಕ್ಕಬ್ಬೆ ಮಲಗಿದಲ್ಲಿಯೆ ರಭಸದಿಂದ ಓಡಿಬಂದರು. ಬಹುಜನರ ಕಾಲಸಪ್ಪುಳಕ್ಕೆ ಬೆಚ್ಚಿಬಿದ್ದ ತಾಯಿ-ಮಗಳು ಇಬ್ಬರೂ ಗಾಬರಿಯಿಂದ ಎದ್ದು ಕುಳಿತರು. ಬಂದ ನೆರವಿಯಲ್ಲಿ ಮುತ್ತಣ್ಣನ ತಮ್ಮ ಲಚ್ಚಣ್ಣನೂ ಇದ್ದ. ಆತ ಒಮ್ಮೆಲೇ ಕೂಗಿಕೊಂಡ :

" ತಾಯೀ ಘಾತ ಆತು !....ಘಾತ ಆಗಿಹೋತು!....ಮುತ್ತಣ್ಣ ನಿಮ್ಮ ಕಡೀ ಸೇವಾಮಾಡಿ, ನೆತ್ತರ ಕಾಲುವೀ ಹರಿಸಿ ಪ್ರಾಣಾ ನೀಗಿದಾ ! "

ತಾಯಿ-ಮಗಳು ಇಬ್ಬರಿಗೂ ಎದೆಗೆ ಸಿಡಿಲು ಬಡಿದಂತಾಯಿತು. ಚೊಕ್ಕಬ್ಬೆ ಕೂಗಿ ಕೇಳಿದಳು : " ಅಯ್ಯೊ ! ಏನೋ ! ಏನಾತೋ ಲಚ್ಚಣ್ಣಾ!"

ಗುಂಪಿನಲ್ಲಿಯ ಇನ್ನೊಬ್ಬ ಅಳುತ್ತಲೇ ಹೇಳಿದ :

" ಅವ್ವಾ, ಮಲ್ಲಿಗೆವ್ವ ಒಡತೀ ಮಾನಾ ಉಳಿಸಿದ; ಆದರ ಮುತ್ತಣ್ಣ ಅದಕ್ಕಾಗಿ ತನ್ನ ಪ್ರಾಣಾನs ಬಲಿದಾನಾ ಕೊಟ್ಟ—ತಾಯೀ ! "

ತಾಯಿ-ಮಗಳು ಇಬ್ಬರಿಗೂ ತಾವೆಲ್ಲಿ ಇದ್ದೇವೆ, ಏನು ಕೇಳುತ್ತಿದ್ದೇವೆ—ಎಂಬುದಾವುದೂ ತಿಳಿಯದಂತಾಯಿತು. ಕಲ್ಲಿಪೆ ಮಾಡಿಕೊಂಡು ಚೊಕ್ಕಬ್ಬೆ ಕೇಳಿದಳು :

“ ಏನು ಲಚ್ಚಣ್ಣಾ ! ನಡೆದ ಸಂಗತಿಯಾದರೂ ಏನದು ಹೇಳೋ ! ಅಯ್ಯೋ, ಮುತ್ತಣ್ಣಾ ! ”

ಲಚ್ಚಣ್ಣ ಹೇಳಲು ತೊಡಗಿದ :

“ ಗೌಡತೀ, ಮುತ್ತಣ್ಣ;....ಬಾರದ ದಾರಿಗೆ ಹೋಗಿಬಿಟ್ಟ. ಮಾರಿಗೊಂಡ ಎಲ್ಲಾ ಮೂರಾಬಟ್ಟೀ ಮಾಡಿ, ಮುತ್ತಣ್ಣನ ಜೀವದ ದೀಪಾ ಆರಿಸಿದ. ತಾಯೀ ! ಮಾರಿಗೊಂಡನ ಜನಾ ಇಂದ ಇಲ್ಲಿಗೆ ಬಂದು, ಮಲ್ಲಿಗೆನ್ನ ಒಡತಿನ್ನ ಹಾರಿಸಿಕೊಂಡು ಗುಜ್ಜನೂರಿಗೆ ಒಯ್ಯೂದಿತ್ತು ! ಮಾರಿಗೊಂಡನ ಸಂಚಿನ್ಯಾಗ ನಿಮ್ಮ ಅಣ್ಣ ಬಿಟ್ಟಿಗೊಂಡರೂ ಸೇರಿಕೊಂಡು, ಇಲ್ಲಿಗೆ ಮೂವತ್ತು ಮಂದಿ ಕತ್ತೀ ಆಳುಗಳನ್ನ ಕಳಿಸಿದ್ದರು. ಮುತ್ತಣ್ಣ ಈ ಸಂಚನ್ನ ಮೊದಲs ಹ್ಯಾಂಗ ತಿಳಕೊಂಡನೋ ಏನೋ! ನಮಗೆಲ್ಲಾ ತಯಾರ ಆಗಿ ಬರಲಾಕ ಹೇಳಿ, ತಾ ಒಬ್ಬನs ಗುಜ್ಜನೂರ ಹಾದಿಲೇ ಓಡಿಹೋದ. ನಾನು ಮಂದಿನ್ನ ಕೂಡಿಸಿಕೊಂಡು ಸಜ್ಜಾಗಿ ಹೋಗೂದರೊಳಗ, ಮೂವತ್ತು ಮಂದಿನ್ನ ಎದುರಿಸಿ, ಒಬ್ಬನs ಕಾಳಗಾ ನಡಿಸಿದ್ದ. ಮೈತುಂಬs ಕತ್ತೀ ಏಟು ಬಿದ್ದಿದ್ದರೂ, ಅಂವ ತೆಳಗೇನೂ ಬಿದ್ದಿರಲಿಲ್ಲ. ನಮ್ಮ ನೂರಾರು ಮಂದೀ ಗುಂಪನ್ನ ದೂರದಿಂದ ನೋಡಿದವರೇ, ಗುಜ್ಜನೂರಿನ ಉಳಿದ ಜನಾ ಎಲ್ಲಾ ಕಾಲಿಗೆ ಬುದ್ಧೀ ಹೇಳಿದರು. ನಾವು ಹೋಗಿ ಆ ಜಾಗಾ ಮುಟ್ಟೂದs ತಡಾ; ಮುತ್ತಣ್ಣ ಪಟ್ಟನs ತೆಳಗ ಬಿದ್ದುಬಿಟ್ಟ. ಹತ್ತರ ಹೋಗಿ ನೋಡಿದರ, ನೆತ್ತರದೊಳಗ ಮುಣಿಗಿ ಹೋಗಿದ್ದ. ಅಯ್ಯೋ....ತಾಯೀ ! ಅವನ ಜೀವದ ಹಕ್ಕಿ, ಅವನ್ನ ಬಿಟ್ಟು ಹಾರಿಹೋಗಿತ್ತು....ಮುತ್ತಣ್ಣನ ಜೀವದ ಮುತ್ತು ಒಡೆದುಹೋಗಿತ್ತು ! ”

ಒಮ್ಮೆಲೆ ಕೂಗಿಕೊಂಡಳು ಚೊಕ್ಕಬ್ಬೆ :

“ ಅಯ್ಯೋ....ಮುತ್ತಣ್ಣಾ....ನಿನ್ನ ಸೇವೆ ಹೀಗೆ ಕೊನೆಗೊಂಡಿತೇ? ”

ಮಲ್ಲಿಗೆ ಕೂಗಿ ಕೂಗಿ ಅಳಲು ತೊಡಗಿದಳು.

“ ಅಯ್ಯೋ....ಮುತ್ತಣ್ಣಾ !....ಮುತ್ತಣ್ಣಾ !.... ”

ಸಂತಸದ ಸವಿಯೂಟಕ್ಕಾಗಿ ಬಂದಿದ್ದ ಗೌರೀತೋಟ, ದುಃಖದ ಕಾಲಕೂಟದೆಡೆಯಾಗಿ ಪರಿಣಮಿಸಿತು.

* * * *

ಮುತ್ತಣ್ಣನ ಈ ಮಹಾತ್ಯಾಗಕ್ಕಾಗಿ, ಅವನ ಮನೆತನಕ್ಕೆ ಚೊಕ್ಕಬ್ಬೆ, ಅದೇ ಗೌರೀತೋಟವನ್ನೇ ನೆತ್ತರ ಕೊಡುಗೆಯ ಉಂಬಳಿಯನ್ನಾಗಿ ಬರೆಯಿಸಿ ಕೊಟ್ಟಳು. ಗೌರೀತೋಟವೇ ಇಂದು, ಅವನ ವಂಶಜನಾದ ಕೆಂಚಣ್ಣನಿಗೆ ' ನೆತ್ತರ ಕೊಡುಗೆಯ ಹೊಲ 'ವಾಗಿ ಉಳಿದುಕೊಂಡಿದೆ. ಅಂದಿನ ತೋಟದ ಬಾವಿಯೇ ಇಂದು ಹಾಳುಬಿದ್ದ ಬಾವಿಯಾಗಿದೆ.

ಈ ಕತೆಯನ್ನೆಲ್ಲ ಕೆಂಚಣ್ಣನಿಗೆ ಹೇಳಿದೆ. ಹೆಳವನ ಈ ಹೊತ್ತಗೆಯಲ್ಲಿ ಇದೆಲ್ಲ ಇತಿಹಾಸದ ಕತೆ ಬರೆದಿದೆಯೆಂಬುದನ್ನು ತಿಳುಹಿದೆ. ಕೆಂಚಣ್ಣನಿಗೆ ಹೆಮ್ಮೆ ಎನಿಸಿತು; ಹಿಗ್ಗು ಹೃದಯವನ್ನು ಅರಳಿಸಿತು. ಮುತ್ತಣ್ಣನ ವೀರ-ಮರಣದ ಕಥೆ, ಅವನ ಕಣ್ಣಿಂದ ಕಂಬನಿಯ ಕಾಣಿಕೆಯನ್ನು ಪಡೆಯಿತು.

ನಾನು ಆ ಹೆಳವರ ಹುಡುಗನ ಕಡೆಗೆ ಐದು ರೂಪಾಯಿಯ ನೋಟೊಂದನ್ನು ಚಾಚಿದೆ. ಎಂದೂ ಕಾಣದ ಸಂತೋಷದಿಂದ ಅದನ್ನು ಅವನು ತೆಗೆದುಕೊಂಡು, ತಾಯಿಯ ಕಡೆಗೆ ಕೊಟ್ಟ. ಆಕೆಯ ಸಂತೋಷವೂ ಮುಖದಲ್ಲಿ ಮೂಡಿನಿಂತಿತು. ಕೂಡಲೆ ಬಂಡಿ ಹೂಡಿ ಊರಕಡೆಗೆ ಮರಳಿದೆವು. ಆ ದಿನದ ಭಾವಬಿದಿಗೆಯ ಹಬ್ಬದಲ್ಲಿ ನಾನು ಭಾಗಿಯಾಗಲಿಲ್ಲವೆಂದು ಮನೆಯವರೆಲ್ಲ ಕಳವಳಿಸಿದರಾದರೂ, ನನಗಾದ ಅಂದಿನ ಆನಂದ, ಹಬ್ಬದ ಆನಂದವನ್ನು ಮೀರಿ ನಿಂತಿತ್ತು. ಅಜ್ಞಾತ ಕನ್ನಡವೀರನ ಚರಿತ್ರೆಯನ್ನು ಬೆಳಕಿಗೆ ತಂದು, ನಾಡಿಗರ ಎದೆಯಲ್ಲಿ ಅಭಿಮಾನಜ್ಯೋತಿಯನ್ನು ಪ್ರಜ್ವಲಿಸಹಚ್ಚುವುದೇ ನಿಜವಾದ ದೀವಳಿಗೆಯ ಹಬ್ಬವಲ್ಲವೆ ?

# ಮೂರನೆಯ ವರ್ಗದ ಪ್ರಯಾಣ

ನಮ್ಮ ಟಾಂಗಾ, ನಿಲ್ದಾಣದ ಮುಂಬದಿಯಲ್ಲಿ ಬಂದು ನಿಲ್ಲುವುದರ-ಲ್ಲಿಯೇ 'ಢಣ್ ಢಣ್' ಎಂದು ಗಾಡಿಯು ಬಿಡುವ ಗಂಟೆಯೆ ಆಯಿತು. ಚಿಕ್ಕ ಕೈಚೀಲದ ಹೊರತು ಹೆಚ್ಚಿನ ಸಾಮಾನುಗಳೇನೂ ಇರಲಿಲ್ಲ. ಅವಸರದಿಂದ ಟಾಂಗೆಯನ್ನು ಬಿಟ್ಟು ಕೆಳಗಿಳಿದೆ. ಟಿಕೇಟು ತೆಗೆದುಕೊಳ್ಳುವಷ್ಟು ಅವಕಾಶ ಉಳಿದಿರಲೇ ಇಲ್ಲ. ಹಾಗೆಯೇ ಹೋಗಿ ಕುಳಿತು, ಮುಂದಿನ ಸ್ಟೇಶನಿನಲ್ಲಿ ಗಾರ್ಡನನ್ನು ಕಂಡು ಹೇಳಿದರಾಯಿತೆಂದು ಯೋಚಿಸಿ ಮುಂದುವರಿದೆ. ಗಾಡಿಯು 'ಕೊಂಯ್' ಎಂದು ಕೂಗಿಯೇ ಬಿಟ್ಟಿತು. ಮುಖಪರಿಚಯವಿದ್ದ ಟಿಕೆಟ್ ಕಲೆಕ್ಟರ್, ನನ್ನ ಗಡಿಬಿಡಿಯನ್ನು ಕಂಡು ಹಾಗೆಯೇ ಹೋಗಗೊಟ್ಟ. ಗಾಡಿಯು 'ಬಫ್ ಬಫ್' ಎಂದು ಹೊಗೆಯುಗುಳುತ್ತ ಹೊರಟೇ ಬಿಟ್ಟಿತು. ಓಡಿಹೋಗಿ ನಾನು, ಒಂದು ಥರ್ಡ್‌ಕ್ಲಾಸ್ ಕಂಪಾರ್ಟ್‌ಮೆಂಟಿನ ತೆರೆದ ಬಾಗಿಲನ್ನು ಕಂಡು ಒಳಗೆ ನುಗ್ಗಿದೆ. ಇಂಟರ್ ಕಂಪಾರ್ಟ್‌ಮೆಂಟನ್ನು ಹುಡುಕಿ ಹಿಡಿಯುವಷ್ಟು ಆಗ ಅವಕಾಶವೆಲ್ಲಿದ್ದಿತು?

ನಾನು ಸೇರಿದ ಕಂಪಾರ್ಟ್‌ಮೆಂಟು ನಾಕಷ್ಟು ದೊಡ್ಡದಿದ್ದಿತು. "೩೪ ಜನರು ಕುಳಿತುಕೊಳ್ಳುವುದು" ಎಂದು ಬರೆದ ಹಲಗೆ ಅಲ್ಲಿ ಕಾಣುತ್ತಿ-ದ್ದರೂ, ರೇಲ್ವೆಯ ನಿಯಮಭಂಗವನ್ನು ಮಾಡಿ, ಸುಮಾರು ೬೦-೬೫ರಷ್ಟು ಜನರು ಕುಳಿತಿದ್ದರು; ೨೦-೩೦ ಜನರು ಎದ್ದುನಿಂತುಕೊಂಡಿದ್ದರು. ನಾನು ಒಳಗೆ ಸೇರಿದ ಮೇಲೆ ಎದ್ದುನಿಂತುಕೊಳ್ಳಬೇಕಾದವರ ಸಂಖ್ಯೆ ಇನ್ನೂ ಒಂದು ಹೆಚ್ಚಾದಂತಾಯಿತು. ಕಂಪಾರ್ಟ್‌ಮೆಂಟಿನ ತುಂಬ ವಿವಿಧ ದುರ್ವಾಸನೆಗಳ ಮಿಶ್ರಗಂಧ ಹರಡಿಕೊಂಡಿತ್ತು. ನಿಂತುಕೊಳ್ಳಬೇಕಾದ ಸ್ಥಳವಲ್ಲೆಲ್ಲ ನೆಲಗಡ ಲೆಯ ಸೊಪ್ಪಿ, ಬಾಳೆಹಣ್ಣಿನ ಸಿಪ್ಪೆ, ಎಣ್ಣೆ-ಕಾರಗಳು ಹತ್ತಿದ ಕಾಗದದ ಚೂರು ಇವೆಲ್ಲ ಬಿದ್ದುಕೊಂಡಿದ್ದುವು. ಬೀಡಿ-ಸಿಗರೇಟುಗಳ ಹೊಗೆ ಎಲ್ಲಿ ನೋಡಿದಲ್ಲಿ ತೇಲಾಡುತ್ತಿತ್ತು.

ನಾನು ಯಾವಾಗಲೂ ರೈಲುಪ್ರವಾಸವನ್ನು ಇಂಟರ್ ತರಗತಿಯಲ್ಲಿ

ಮಾಡುವುದಕ್ಕೆ ಕಾರಣವೆಂದರೆ, ನನಗೆ ಹಣವು ಹೆಚ್ಚಾಗಿದೆಯೆಂದಲ್ಲ. ಈ ಬಗೆಯ ಕಸ, ಕೊಳೆ, ದುರ್ವಾಸನೆಗಳನ್ನು ನನ್ನಿಂದ ಸಹಿಸಲಿಕ್ಕೆ ಆಗುವುದಿಲ್ಲ. ಬೀಡಿ-ಸಿಗರೇಟುಗಳ ಹೊಗೆಯು ಎಲ್ಲ ಕಡೆಗೂ ಸಾಮಾನ್ಯವೇ ಆದರೂ, ಇಂಟರ್ ತರಗತಿಯಲ್ಲಿ ಕುಳಿತವರು ಇದ್ದುದರಲ್ಲಿಯೆ ಸ್ವಲ್ಪ ಓರಣವಂತರಿರುವರು. ನೆರೆ-ಹೊರೆಯುವರ ಇಷ್ಟಾನಿಷ್ಟಗಳ ಕಡೆಗೆ ಸ್ವಲ್ಪ ಗಮನ ಕೊಡುವ ಸಂಸ್ಕೃತಿಯುಳ್ಳವರಾಗಿರುವರು. ಕುಳಿತೆಡೆಯಲ್ಲಿಯೆ ಪಿಚಕ್ಕೆಂದು ಉಗುಳುವಂತಹ ಧೈರ್ಯವನ್ನು ಅಲ್ಲಿ ಯಾರೂ ಮಾಡರು. 'ಹೀಗೆ ಮಾಡುವುದು ಒಳ್ಳೆಯದಲ್ಲ' ಎಂದು ಯಾವನಾದರೂ ಸಮಾಜಸೇವಕನು ಬುದ್ಧಿ ಹೇಳುವುದಕ್ಕೆ ಬಂದರೆ, ಮೂರನೆಯ ತರಗತಿಯ ಪ್ರವಾಸಿಕರಂತೆ ಗುದ್ದಾಟಕ್ಕೆ ಏಳುವ ಬುದ್ಧಿವಂತಿಕೆಯನ್ನು ತೋರಿಸರು. ಈ ನಾಯಬಾಲದ ಡೊಂಕನ್ನು ತಿದ್ದಲಿಕ್ಕೆ ಸಾಧ್ಯವಿಲ್ಲದೆ, ಸಹಿಸಲಿಕ್ಕೆ ಶಕ್ತಿಯಿಲ್ಲದೆ, ಇದರಿಂದ ದೂರವಿದ್ದುಬಿಡುವುದೇ ಒಳ್ಳೆಯದೆಂದು ಭಾವಿಸಿ, ಮಿಕ್ಕ ವೆಚ್ಚಗಳನ್ನೆಲ್ಲ ಕಡಿಮೆ ಮಾಡಿಕೊಂಡು ನಾನು, ಗಟ್ಟಿಮನಸ್ಸು ಮಾಡಿ ಇಂಟರ್ ಟಿಕೀಟನ್ನೇ ಯಾವಾಗಲೂ ಪಡೆಯುತ್ತಿರುವೆನು; ಈ ಮೂರನೆಯ ತರಗತಿಯ ಕಂಪಾರ್ಟ್‌ಮೆಂಟಿನ ನರಕದ ಮಾದರಿಯಿಂದ ತಪ್ಪಿಸಿಕೊಳ್ಳುತ್ತಿರುವೆನು. ಈ ನನ್ನ ನಡೆವಳಿಯನ್ನು ಕಂಡು ನನ್ನನ್ನು 'ಪಲಾಯನವಾದಿ' 'ಬೂರ್ಜ್ವಾ' ಎಂದು ಬೈಯುವವರು ಬೈದುಕೊಳ್ಳಲೊಲ್ಲರೇಕೆ ? ಹೀಗೆ ಬೈಯುತ್ತಿರುವವರಂತೆಯೇ ನಾನೂ ಜೀವನವಾದಿ–ಅನುಕೂಲತಾವಾದಿ ! ಅವರು ಬೈಯುತ್ತಲೇ—ನಾನು ಮಾಡಿದಂತೆ ಮಾಡುವರು; ನಾನು ಯಾರನ್ನೂ ಬೈಯದೆ ಅವರಂತೆಯೆ ಮಾಡುವೆನು. 'ಪಲಾಯನವಾದಿ' 'ಬೂರ್ಜ್ವಾ' ಎಂದು ನಿರುಪದ್ರವಿಗಳಾದ ಸುಶಿಕ್ಷಿತರನ್ನು ಬೈದಂತೆ ಆ ಸಮಾಜಸೇವಕರು, ಮೂರನೆಯ ವರ್ಗದ ಪ್ರವಾಸಿಕರನ್ನು 'ಅಸಂಸ್ಕೃತರು' 'ಕೊಳಕರು' ಎಂದು ಬೈದು ನೋಡಲಿ; ಅವರ ತಲೆ ತೂತಾಗದೆ ಉಳಿಯುವುದೇ ?—ಎಂಬುದು ಸಂದೇಹದ ವಿಷಯ. ಬೈಯುವುದನ್ನು ಬಿಟ್ಟು, ಮೂರನೆಯ ವರ್ಗದ ಪ್ರವಾಸಿಕರ ಡಬ್ಬಿಯಲ್ಲಿ ಶುಚಿತ್ವದ ಸೇವಾ-ಕಾರ್ಯವನ್ನು ಕೈಕೊಂಡರೆ, ಎಷ್ಟೋ ಒಳ್ಳೆಯದಾದೀತು; ಆದರೆ ಅದನ್ನು ಮಾಡುತ್ತ ಕುಳಿತರೆ, ಸುಸಂಸ್ಕೃತ ಸಭ್ಯಗೃಹಸ್ಥರನ್ನು ಬೈಯಲಿಕ್ಕೆ ಈ ಜನರಿಗೆ ಅವಕಾಶವು ಹೇಗೆ ಸಿಕ್ಕಬೇಕು ?

ನಾನು ಪ್ರವೇಶಿಸಿದ ಕಂಪಾರ್ಟ್‌ಮೆಂಟಿನಲ್ಲಿ ಟಿಕೇಟಿಲ್ಲದೆ ಪ್ರಯಾಣ ಮಾಡುವವರೇ ಹೆಚ್ಚಾಗಿದ್ದಂತೆ ಕಂಡಿತು. ಬೆಂಚಿನ ಮೇಲೆ ಹಾಯಾಗಿ ಕುಳಿತು ಕೊಂಡವರು—ಹೆಚ್ಚಾಗಿ ಪುಕ್ಕಟೆ ಪ್ರವಾಸಿಕರೆ. ಅವರೆಲ್ಲ ಮದ್ರಾಸ್ ಪ್ರಾಂತ ದಿಂದ ಹೊರಬಿದ್ದ ತಿರುಕರ ತಂಡದವರು. ಎಣ್ಣೆ ಕಾಣದಿದ್ದರೂ ಅವರ ತಲೆಯ ಮೇಲೆ ಕೂದಲ ಬೆಳೆಗೇನೂ ಕೊರತೆಯಿರಲಿಲ್ಲ. ಹೆಂಗುಸರೇ ಆಗಲಿ, ಗಂಡುಸರೇ ಆಗಲಿ, ತಲೆಗೂದಲಿಗಾಗಿ ಹಣಿಗೆಯ ಉಪಯೋಗವನ್ನು ಮಾಡ ಬೇಕೆಂಬುದು ಅವರಿಗೆ ಗೊತ್ತೇ ಇರಲಿಲ್ಲವೆಂದು ತೋರುವುದು. ಮಳೆರಾಯನ ಒತ್ತಾಯದಿಂದಲೇ ಅವರು ಎಂದಾದರೂ ಮೈಯನ್ನು ತೊಳೆದು—ಅಲ್ಲಲ್ಲ— ತೋಯಿಸಿಕೊಂಡಿರಬಹುದು. ಮೈಮೇಲೆಲ್ಲ ಜಿಡ್ಡುಗಟ್ಟಿದ ಬಟ್ಟೆ-ಬರೆಗಳಾ ದರೂ, ಹೆಂಗುಸರೆನಿಸಿಕೊಳ್ಳುವವರ ಮೂಗು-ಕಿವಿಗಳಲ್ಲಿ ಎಂತೆಂತಹವೋ— ಭೀಕರಾಕಾರದ—ಅಲಂಕಾರಗಳು. ಬಾಯಲ್ಲಿ ಹಿಡಿದ ತಂಬಾಕು-ತಂಬುಲ ಗಳು ಅವರ ಕಪ್ಪುಬಣ್ಣದ ಗಲ್ಲಗಳನ್ನು ಉಬ್ಬಿಸಿರುವುವು. ಕರಿಯ ಮರದ ಬೊಂಬೆಗಳಂತಹ ಕೂಸುಗಳು ಅನೇಕ ಜನ ತಾಯಂದಿರ ತೊಡೆಗಳನ್ನು ಅಲಂಕರಿಸಿದ್ದುವು. ನಿಂತುಕೊಂಡಿದ್ದವರಲ್ಲಿ ಬಹಳ ಜನರು ಹಣಕೊಟ್ಟು ಟಿಕೇಟನ್ನು ಪಡೆದವರು. ಆದರೆ ಅವರ ಗೋಳನ್ನು ಇಲ್ಲಿ ಯಾರು ಕೇಳಬೇಕು?

ನಾನೂ ಹೋಗಿ ನಿಂತುಕೊಂಡೆ. ನನ್ನ ಬಟ್ಟೆ-ಬರೆಗಳನ್ನು ನೋಡಿಯೊ ಮುಖಲಕ್ಷಣವನ್ನು ನೋಡಿಯೊ, ಸ್ಥಳಹಿಡಿದು ಕುಳಿತ ಒಬ್ಬಿಬ್ಬರು ಸಹಾನು ಭೂತಿಯ ದೃಷ್ಟಿಗಳಿಂದ ನನ್ನ ಕಡೆಗೆ ನೋಡಿದರು; ಆ ಮೇಲೆ ತಮ್ಮ ಎಡಕ್ಕೆ ಬಲಕ್ಕೆ ನೋಡಿ, ನಿರುಪಾಯಭಾವವನ್ನು ಮುಖದ ಮೇಲೆ ಮೂಡಿಸಿಕೊಂಡ ಕುಳಿತರು ಗಾಡಿಯು ನಿಲ್ದಾಣದ ಸೀಮೆಯನ್ನು ದಾಟಿ ತನ್ನ ವೇಗವನ್ನು ಹೆಚ್ಚಿಸಿ ಓಡತೊಡಗಿತು : ' ಖಸ್ಸಟ, ಫಸ್ಸಟ....ಖಸ್ಸಟ ಫಸ್ಸಟ...."

ದೂರದ ಬೆಂಚಿನ ಮೇಲೆ ಕುಳಿತ ಮುದುಕ ರೈತನೊಬ್ಬ ಮೆಲ್ಲಗೆ ಎದ್ದು ನನ್ನ ಬಳಿಗೆ ಬಂದ. ಅವನು ಶೌಚಕೂಪದ ಕಡೆಗೆ ಹೋಗಲಿರುವನೇನೋ ಎಂದು ನಾನು ಭಾವಿಸಿದೆ. ' ಈ ಗದ್ದಲದಲ್ಲಿ ಸ್ವಲ್ಪ ತಡೆದುಕೊಂಡು ಕುಳಿತ ರಾಗದೆ? ' ಎಂದು ಆತನ ವಿಷಯದಲ್ಲಿ ಮನದೊಳಗೇ ಬೇಸರಪಟ್ಟುಕೊಂಡೆ. ಆತನು ನನ್ನ ಬಳಿಗೆ ಬಂದು ವಿನಯದಿಂದ ನುಡಿದನು :

"ರಾಯರ‍್ಕ, ನೀವು ಅಲ್ಲೆ ನಾ ಕುಂತಲ್ಲೆ ಕುಂತಗೋ ಹೋಗರಿ; ನಾನು ಮುಂದಿನ ಟೇಸನಿಗೇ ಇಳದು ಬಿಡಾಂವ ಅದೀನು!"

ನಾನು ಒಮ್ಮೆಲೆ ಕೃತಜ್ಞತೆಯು ತುಂಬಿದ ಕಣ್ಣುಗಳಿಂದ ಅವನನ್ನು ನೋಡಿದೆ; ಬಳಿಕ ಮಾತನಾಡಿದೆ:

"ಛೇ ಛೇ! ನೀವು ಕೂತುಗೊಳ್ರಿ! ನಾನು ಇಲ್ಲೇ ನಿಂತುಗೋತೀನಿ!"

ಆ ಮುದುಕ ಒತ್ತಾಯದ ಧ್ವನಿಯಲ್ಲಿ ಹೇಳಿದ:

"ನಮ್ಮ ಟೇಸನ್ ಇನ್ನೇನೂ ದೂರ ಇಲ್ಲರೀ! ಈಗ ಬಂದ‍್ಕ ಬಿಡತೈತಿ! ನಾ ಹೇಳತೀನಿ, ಸುಮಾಕ‍್ಕ ಹೋಗಿ ನೀವು ಕುಂತಗೊಳ್ರಿ!"

ನಾನು, ನನ್ನಂತೆಯೆ ನಿಂತುಕೊಂಡಿರುವ ಜನರ ಮುಖಗಳನ್ನು ನೋಡಿದೆ. ಎಲ್ಲಿಯೂ ಅಸಹನೆ-ಅಸಮ್ಮತಿಗಳು ಕಾಣಲಿಲ್ಲ. 'ಸರಿ! ಒಳ್ಳೆಯ ಪುಣ್ಯವಂತರಪ್ಪಾ ನೀವು!' ಎಂದು ಆ ಮುದುಕನನ್ನು ಕುರಿತು ನುಡಿದು, ಪ್ರಯತ್ನಪೂರ್ವಕವಾಗಿಯೇ ಮುಂದುವರಿದು, ಆ ಸ್ಥಳವನ್ನು ಹಿಡಿದು ಕುಳಿತೆ. ಗಾಡಿಯು ತನ್ನ ಸಂಪೂರ್ಣವೇಗದಿಂದ ಓಡುತ್ತಿದ್ದಿತು. ಸ್ಥಳ ಹಿಡಿದು ಕುಳಿತುಕೊಂಡ ಮೇಲೆ, ನನಗೆ ಅನುಕೂಲತೆ ಮಾಡಿಕೊಟ್ಟ ಮುದುಕನತ್ತ ನೋಡಿದೆ. ಅವನು ಬಾಗಿಲ ಬಳಿ ನಿಂತುಕೊಂಡು, ನಾನು ಕುಳಿತುಕೊಂಡುದನ್ನು ತೃಪ್ತಿಯ ಮೆಲುನಗೆಮೊಗದಿಂದ ನೋಡುತ್ತಲಿದ್ದ. ಕೊಳಚೆಯಲ್ಲಿ ಅರಳಿನಿಂತ ಗುಲಾಬಿ ಹೂವೊಂದರ ಚಿತ್ರ ನನ್ನ ಮನದ ಮೇಲೆ ಮೂಡಿನಿಂತಿತು. ಮುದುಕ ನನಗೆ ಪರಿಚಿತನೇನೂ ಅಲ್ಲ. ಇಷ್ಟೆಲ್ಲ ಜನರು ನಿಂತಿರುವಾಗ, ನನ್ನನ್ನು ತನ್ನ ಸ್ಥಳದಲ್ಲಿ ಕುಳಿತುಕೊಳ್ಳುವಂತೆ ಅನುಕೂಲತೆ ಮಾಡಿಕೊಡುವುದಕ್ಕೆ ಕಾರಣವೇನು? 'ಆಂತರಃ ಕೋಪಿ ಹೇತುಃ' ಎಂಬ ಕವಿ ಭವಭೂತಿಯ ವಚನವೇ ಇದಕ್ಕೆ ಉತ್ತರ.

ನನ್ನ ಎದುರುಬದಿಯ ಮಂಚದ ಮೇಲೆ ಮೂವರು ತರುಣರು ಕುಳಿತುಕೊಂಡಿದ್ದರು. ಅವರ ವೇಷ-ಭೂಷಣಗಳ ಮೇಲಿಂದ ಅವರು ಸುಶಿಕ್ಷಿತರೆಂಬಂತೆ ತೋರುತ್ತಿದ್ದರು. ಅವರವರಲ್ಲಿ ಎಡೆಬಿಡದೆ ಚರ್ಚೆ-ವಿಚರ್ಚೆಗಳು ನಡೆದಿದ್ದುವು. ದೂರದಲ್ಲಿ ನಿಂತುಕೊಂಡಿದ್ದಾಗ ನನಗವರ ಮಾತುಗಳು ಕೇಳುತ್ತಿರಲಿಲ್ಲ; ಈಗ ಹತ್ತಿರ ಬಂದುದರಿಂದ ಅವೆಲ್ಲ ಕೇಳತೊಡಗಿದುವು. ಖಾದಿಯ ವೇಷ-ಭೂಷಣದಲ್ಲಿದ್ದ ತರುಣ ಹೇಳಲುತೊಡಗಿದ:

" ಮಹಾತ್ಮಾಜಿಯವರು ಸಿರಿವಂತಿಕೆಯನ್ನು ಎಂದೂ ಬೈಯುತ್ತಿರಲಿಲ್ಲ. ಸಿರಿವಂತಿಕೆಯ ಸದುಪಯೋಗವು ಸಮಾಜಕ್ಕೆ ಆಗಬೇಕೆಂದು ಅವರು ಹೇಳುತ್ತಿದ್ದರು ! "

ಇನ್ನೊಬ್ಬ ತರುಣ—ಸಡಿಲು ಪಾಯಜಾಮೆ-ಶರ್ಟುಗಳನ್ನು ತೊಟ್ಟು, ಉದ್ದವಾಗಿ ತಲೆಗೂದಲನ್ನು ಬಿಟ್ಟವ—ಸಿಡಿನುಡಿಗಳಲ್ಲಿಯೆ ಹೇಳತೊಡಗಿದ :

" ಆಹಹ ! ಸಿರಿವಂತಿಕೆ !........ಸಮಾಜಕ್ಕೆ ಅದರ ಸದುಪಯೋಗ ! ಬೆಕ್ಕು-ಇಲಿಗಳ ಗೆಳೆತನದಂತಹ ಅಸಂಭವ ಸಂಗತಿಯಿದು ! ಸಿರಿವಂತರೆಂದರೆ ಸಮಾಜದಲ್ಲಿಯ ಬಡಜನರ ರಕ್ತವನ್ನು ಹೀರುವವರು ! ಬಡಜನರು ಸುಖದಿಂದ ಬದುಕಬೇಕಾದರೆ ಸಿರಿವಂತರೆಲ್ಲ ಹುಡಿಗೂಡಿ ಹೋಗಲಿಕ್ಕೇ ಬೇಕು ! "

ಖಾದಿಧಾರಿಯಾದ ತರುಣ ಮತ್ತೆ ಬಾಯಿಬಿಟ್ಟ :

" ಇದು ಮಾನವತೆಯ ಬೆಲೆಯನ್ನೇ ಅರಿಯದವರು ಆಡುವ ಮಾತು ! ನಿಮ್ಮ ಮಾತಿನಂತೆ ಹೋದರೆ ಲೋಕದಲ್ಲಿ ದಯೆ, ದಾಕ್ಷಿಣ್ಯ, ಸ್ನೇಹ, ಪ್ರೀತಿ, ಸಹಕಾರ, ಸಹಾನುಭೂತಿ—ಇವುಗಳಿಗೆ ಎಡೆಯೆ ಇಲ್ಲದೆ ಹೋದೀತು ! ಮಾನವರೆಂದರೆ ಗುಂಪುಗೂಡಿ ಹುಲ್ಲುಗಾವಲಿನಲ್ಲಿ ಮೇಯುವ ಪಶುಗಳಲ್ಲ ! "

ಸಡಿಲು ಪಾಯಜಾಮೆಯ ತರುಣ ಕಿನಿಸನ್ನು ಕಾರತೊಡಗಿದ :

" ಗುಂಪುಗೂಡಿ ಮೇಯುವ ಪಶುಗಳಲ್ಲ; ಗುಂಪುಗೂಡಿ ಹಸಿದು ಸಾಯುವ ಪಶುಗಳು ! ಸಿರಿವಂತರೆಂದರೆ ಬಡವರನ್ನು, ತಮ್ಮ ಸುಖಕ್ಕಾಗಿ ದುಡಿಯುವ ಪಶುಗಳೆಂದೇ ಭಾವಿಸಿದ್ದಾರೆ ! ಈಗ ಜಾಗೃತಿಯ ಕಾಲ ! ಬಡವರಲ್ಲಿ ತಾವೂ ಮನುಷ್ಯರೆಂಬ ಜಾಗೃತಿ ಮೂಡಿದೆ. ಈ ಜಾಗೃತಿಯು ನಮ್ಮ ದೇಶದಲ್ಲಿ ಮಹಾಕ್ರಾಂತಿಯನ್ನು ಎಬ್ಬಿಸದೆ ಇರಲಾರದು ! ದುಡಿಯುವವನು ಆಳಾಗಬೇಕು; ದುಡಿಯದವನು ಆಳುವವನಾಗಿ ಸುಖಪಡಬೇಕು ! ಇದು ಎಂಥ ನೀತಿ ? "

ಮೂರನೆಯ—ಕೋಟು-ಪ್ಯಾಂಟಿನ ತರುಣ, ಒಮ್ಮೆಲೆ ಮಾತನಾಡತೊಡಗಿದ :

" ನಿಮ್ಮ ಮಾತು ಸರಿಯಾದದ್ದು ನೋಡ್ರಿ ! ದುಡಿಯುವ ಜನರೇ ಇನ್ನ ಮ್ಯಾಲ ಆಳುವ ಅರಸರಾಗಬೇಕು. ಅಂದರ, ನಮ್ಮ ಹಳ್ಳಿಗಳಾದರೂ ಸುಧಾ-

ರಿಸಬಹುದು. ಈಗ ನಮ್ಮ ಹಳ್ಳಿಗರ ಕಡೆಗೆ ಯಾರೂ ನೋಡುವವರೇ ಇಲ್ಲ! ಏನು ಅವರ ಅಸ್ವಚ್ಛತೆ, ಏನವರ ಅನಾರೋಗ್ಯ! ಪಿಡುಗು ಬಂದುಬಿಟ್ಟರ ಅಂತೂ—ಪಟಪಟ ನೊಣಾ-ನುಸಿ ಸತ್ಹಾಂಗ ಸಾಯತಾರ...."

"ಆ....ಮ್ಮಾ....!" ಎಂಬ ದೈನ್ಯ ಧ್ವನಿಯ ನರಳಿಕೆಯೊಂದು ಕೇಳಿಸಿತು. ನಾನು ಬೆಚ್ಚಿಬಿದ್ದವನಾಗಿ ಆ ಕಡೆಗೆ ನೋಡಲು ತೊಡಗಿದೆ. ಆ ತರುಣರು ಕುಳಿತ ಬೆಂಚಿನ ಹಿಂಗಡೆಯ ಬೆಂಚಿನ ಮೇಲೆ ಒಬ್ಬ ಮನುಷ್ಯ ಮುದ್ದೆಯಾಗಿ ಬಿದ್ದುಕೊಂಡಿದ್ದಾನೆ. ಸುಕ್ಕಿ ಸೊರಗಿಹೋದ ದೇಹ. ಮೈಮೇಲೆ ಕಾವಿಯ ಬಟ್ಟೆಯೊಂದನ್ನು ಹೊದ್ದುಕೊಂಡಿದ್ದಾನೆ. ನಾನು ಕುಳಿತಲ್ಲಿಂದ ಆತನ ಮುಖವು ಕಾಣಲಿಲ್ಲವಾದುದರಿಂದ, ಎದ್ದುನಿಂತು ನಿಲುಕಿ ನಿಲುಕಿ ನೋಡಿದೆ. ತಲೆಯ ಮೇಲೆ ಬೆಳೆದ ಜಡೆಯಿದೆ. ಕಪ್ಪಗಿನವೇ ಆದ ಗಡ್ಡ-ಮೀಸೆಗಳು ಮುಖವನ್ನೆಲ್ಲ ಮುಚ್ಚಿಕೊಂಡಿವೆ. ಮತ್ತೆ ಮೊದಲಿನಂತೆಯೆ ನರಳಿದ ಮೆಲುದನಿ: "ಅ....ಮ್ಮಾ....! ಹ....ಯ್ಯೋ....!"

"ಯಾರವರು? ಅದೇಕೋ ನರಳುತ್ತಿದ್ದಂತೆ ಇದೆಯಲ್ಲ!" ನಾನು ಕುತೂಹಲಿಯಾಗಿ ಕೇಳಿದೆ.

ಖಾದೀಧಾರಿ ತರುಣನು ಹೇಳಿದ:

"ನಾನು ಹರಿಹರ ಸ್ಟೇಶನಿನಲ್ಲಿ ಗಾಡಿಯನ್ನು ಹತ್ತಿದೆ. ಅಲ್ಲಿಂದಲೂ ಅವನ ನರಳಾಟ ನಡೆದೇ ಇದೆ. ಯಾವನೋ ಬಾವಾಜೀ ಇರಬಹುದು!"

ಸಡಿಲು ಪಾಯಜಾಮೆಯವನು ಹೇಳತೊಡಗಿದ:

"ನಮ್ಮ ಹಿಂದುಸ್ತಾನದೊಳಗ ಬಾವಾಜಿಗಳಿಗೇನು ಕಡಿಮಿ? ಒಂದೊಂದು ಧರ್ಮಕ್ಕ ಒಂದೊಂದು ಪ್ರಕಾರದ ಬಾವಾಜಿಗಳು! ಸಿರಿವಂತರ ದುಡ್ಡು ಏನಾದರೂ ವೆಚ್ಚ ಆಗತಿದ್ದರ, ಅದು ಇಂಥಾ ಸಿರುದ್ಯೋಗೀ ಬಾವಾಜಿಗಳ ಸಲುವಾಗಿ! ಮತ್ತೆ ಸರಕಾರ ಸಹಿತ ತನ್ನ ರೈಲ್ವೆಯೊಳಗ ಬಡ-ಬಗ್ಗರಿಗೆ ಯಾವ ಪ್ರಕಾರದ ಸವಲತ್ತೂ ಕೊಡುವುದಿಲ್ಲ! ಇಂಥಾ ದುಡಿಯಲಾರದ ಬಾವಾಜಿಗಳಿಗೆ ಮಾತ್ರ ಪುಕ್ಕಟೆ ಪ್ರವಾಸದ ಅನುಕೂಲತಾ ಇರತ್ತದ!"

ಕೋಟು-ಪ್ಯಾಂಟಿನ ತರುಣ ತಿರಸ್ಕಾರದಿಂದ ನುಡಿದ:

"ನೋಡಿದಿರಾ ಅವನ ಅಧಿಕಾರಾನ? ಇಷ್ಟು ಮಂದಿಯೆಲ್ಲಾ ಸ್ಥಳ

ಇಲ್ಲದ್ದಕ್ಕಾಗಿ ನಿಂತುಕೊಂಡುಬಿಟ್ವಾರ! ಆ ಭೂಪ ಕಾಲುಚಾಚಿ ಮಲ
ಕೊಂಡಾನ ಹ್ಯಾಂಗನೋಡ್ರಿ!"

'ಅಂ....ಅಂ....ಅಮ್ಮಾ....!' ಎಂಬ ನರಳಾಟ ಮತ್ತೆ ಕಿವಿಗೆ ಬಿತ್ತು. ಅವನ ಬಳಿಯಲ್ಲಿಯೆ ನಿಂತುಕೊಂಡವನೊಬ್ಬ ಹೇಳಿದ:

"ಪಾಪ, ಬಾವಾಜೀಗೆ ಜ್ವರ ಬಂದ್ಹಾಂಗ ಕಾಣಿಸತದರಿ! ಮೈಮ್ಯಾಲ ಎಚ್ಚರ ಇದ್ಧಾಂಗಽ ಇಲ್ಲ!"

ಕೋಟು-ಪ್ಯಾಂಟಿನವ ತಟ್ಟನೆ ನುಡಿದ:

"ಭಂಗೀ ಸೇದಿ ಮಲಗಿದ ಮ್ಯಾಲ, ಮೈಮ್ಯಾಲ ಎಚ್ಚರ ಉಳೀತಽದ ಯಾಕ?"

ಖಾದೀಧಾರಿ, ಪಾಯಜಮಾಧಾರಿ ಇಬ್ಬರೂ ಗಟ್ಟಿಯಾಗಿ ನಕ್ಕರು. ನನ್ನ ಕರುಳಿಗೇಕೋ ಇರುವೆ ಕಚ್ಚಿದಂತಾಯಿತು. ತಟ್ಟನೆ ಎದ್ದು ಆ ಬಾವಾಜಿ ಮಲಗಿದಲ್ಲಿಗೆ ಹೋದೆ. ಅವನ ಮೈ ಕೈಗಳನ್ನು ಹಿಡಿದು ನೋಡಿದೆ. ಜ್ವರ ವೇನೂ ಹೆಚ್ಚಿಗೆ ಇರಲಿಲ್ಲವಾದರೂ, ತುಂಬ ಬಲಹೀನತೆ ಅವನನ್ನು ಆವರಿಸಿ-ಕೊಂಡಿದ್ದಿತು. ನಾನು ಬಳಿಯಲ್ಲಿಯೆ ಕುಳಿತು ಆತನ ಮೈಮೇಲೆ ಕೈಯಾಡಿಸತೊಡಗಿದೆ. ಬಾವಾಜಿಯು ಕಳೆಯಿಲ್ಲದ ಕಣ್ಣುಗಳು ನನ್ನ ಕಡೆಗೆ ತಿರುಗಿದುವು. ಎರಡೂ ಕಂಗಳಲ್ಲಿ ಒಂದೊಂದೇ ಹನಿ ಕಣ್ಣೀರು ಕಂಡುವು. ಬಹುಶಃ ಅವು ನನ್ನ ವಿಷಯಕವಾಗಿ ಕೃತಜ್ಞತೆಯನ್ನು ಸೂಚಿಸುವುವು ಆಗಿರಬೇಕು. ತರುಣರ ರಾಜಕೀಯ-ಸಾಮಾಜಿಕ ಚರ್ಚೆ ಹಾಗೆಯೆ ಸಾಗಿದ್ದಿತು. ಗಾಡಿಯೂ ಓಡುತ್ತಿದ್ದಿತು. ಬಾವಾಜಿಯ ತುಟಿಗಳು ಒಣಗಿಹೋಗಿದ್ದುವು. ಬಾಯಿಕೂಡ ಒಣಗಿ ಅಂಟು-ಅಂಟಾಗಿದ್ದಿತು. ಬಾವಾಜಿಯ ಬಳಿಯಲ್ಲಿ ಕಮಂಡಲು ಇದ್ದಿತಾದರೂ ಅದರಲ್ಲಿ ನೀರು ಇರಲಿಲ್ಲ. ಪ್ರವಾಸಿಕರೊಬ್ಬರ ತಂಬಿಗೆಯಲ್ಲಿ ನೀರಿದ್ದುವು. ಕೇಳಿ ತೆಗೆದುಕೊಂಡೆ; ಹನಿ-ಹನಿಯಾಗಿ ಬಾವಾಜಿಯ ಬಾಯಲ್ಲಿ ಹಾಕತೊಡಗಿದೆ. ತುಟಿಗಳು ಒದ್ದೆಯಾದುವು. ಒಣಗಿದ ಬಾಯಿ ಹಸಿಯಾಯಿತು. ಸ್ವಲ್ಪ ಹೊತ್ತಿನಲ್ಲಿಯೆ ಬಾವಾಜಿ, ನೀರನ್ನು ಮೆಲ್ಲಗೆ ಗುಟುಕರಿಸಿದಂತೆ ಕೇಳಿಸಿತು. ನನಗೆ ಸ್ವಲ್ಪ ಧೈರ್ಯ ಬಂದಂತಾಯಿತು. ಬಾಯಲ್ಲಿ ಬಿಡುವ ನೀರಹನಿಗಳ ಪ್ರಮಾಣವನ್ನು ಮೆಲ್ಲಗೆ ಹೆಚ್ಚಿಸತೊಡಗಿದೆ. ಬಾವಾಜಿಯ

ಗುಟುಕರಿಸುವ ಪ್ರಮಾಣವೂ ಮೆಲ್ಲ-ಮೆಲ್ಲಗೆ ಹೆಚ್ಚತೊಡಗಿತು. ಆಗ ಖಾದೀ ಧಾರಿಯ ವಾದದ ನುಡಿ ಕೇಳಿಸುತ್ತಿತ್ತು :

" ಹೃದಯದ ಭಾವನೆಗಳ ವಿಕಾಸವಿಲ್ಲದವನು ಮಾನವನೇ ಅಲ್ಲವೆಂದು ಮಹಾತ್ಮರ ಅಭಿಪ್ರಾಯ ! "

" ಹೃದಯ ಭಾವನೆಗಾಗಿ ಇರುವುದಿಲ್ಲ. ಮನುಷ್ಯನ ಜೀವಿತದ ಸೂಚನೆಗಾಗಿ ಇರುವುದು. ಮನುಷ್ಯನು ಮನುಷ್ಯನೆನಿಸಿಕೊಳ್ಳುವುದು ಆತನ ಬುದ್ಧಿ-ಶಕ್ತಿಯ ಮೂಲಕ. ಭಾವನೆ-ಭಾವನೆ—ಎಂದು ನಮ್ಮ ಭಾರತದಲ್ಲಿ ಬುದ್ಧಿ-ಶಕ್ತಿಯನ್ನು ಓಡಿಸಿಬಿಟ್ಟಿದ್ದಾರೆ. ಎಂತಲೇ ಬಡವರೆಲ್ಲ ಕೇವಲ ಭಾವನೆಯ ಕೂಸುಗಳಾಗಿದ್ದಾರೆ. ದೇವರು ಧರ್ಮ, ದಯೆ, ಔದಾರ್ಯ—ಎಂಬ ಹುಚ್ಚುಗಳ ಬೆನ್ನುಹತ್ತಿ, ಸಮಾಜವನ್ನು ಜೀವನ್ಮೃತ ಜನರ ಜಂಗುಳಿಯನ್ನಾಗಿ ಮಾಡಿದ್ದಾರೆ. ' ದುಡಿಯುವವನಿಗೇ ದುಡ್ಡು-ದುಗ್ಗಾಣಿ ' ಎಂಬ ಅರ್ಥನೀತಿಯ ಅರ್ಥವೇ ಅವರಿಗಾಗಲೊಲ್ಲದಾಗಿದೆ...."

ಮುಂದೆ ಸ್ಟೇಶನ್ ಬರಲಿರುವುದುನ್ನು ಸೂಚಿಸಲು ಗಾಡಿಯು ಕೂಗು-ಹಾಕಿತು. ಕರುಳಲ್ಲಿ ನೀರು ಹೋದುದರಿಂದ ಸ್ವಲ್ಪ ಸಮಾಧಾನವೆನಿಸಿತೇನೊ, ಬಾವಾಜಿ ಕಣ್ಣುಗಳನ್ನು ಅರಳಿಸಿ ನನ್ನ ಕಡೆಗೆ ನೋಡಲು ತೊಡಗಿದ. ಗಾಡಿಯು ದಡದಡನೆ ನಡೆಯುತ್ತ ವೇಗವನ್ನು ತಡೆ-ತಡೆಯುತ್ತ ನಿಲ್ದಾಣದ ಬಳಿ ಬಂದು ನಿಂತುಕೊಂಡಿತು. ಕೂಡಲೇ ಕೂಗುಗಳು ಕೇಳತೊಡಗಿದುವು :

" ಗರಮ್ ಗರಮ್ ಚಹಾ !....ಬಿಸಿ ಬಿಸಿ ಕಾಫೀ ! "

" ಮೋಸಂಬೀ ಹಣ್ಣೂ....ಕಿತ್ತಳೀ ಹಣ್ಣೂ....! "

ನಾನು ಚಹಾ-ಕಾಫಿಯವನನ್ನು ಕೂಗಿ ಕರೆದೆ. ಒಂದು ಕಪ್ಪು ಬಿಸಿ ಬಿಸಿ ಕಾಫಿಯನ್ನು ಕೊಡಲು ಹೇಳಿದೆ. ಮೂವರು ತರುಣರೂ ಅಂತಹ ಗದ್ದಲದಲ್ಲಿಯೆ ನುಗ್ಗಿ, ಕಂಪಾರ್ಟ್‌ಮೆಂಟಿನಿಂದ ಕೆಳಗಿಳಿದು ಉಪಾಹಾರ ಗೃಹದ ಕಡೆಗೆ ಹೋದುದನ್ನು ನೋಡಿದೆ. ನಾನು ಕಾಫಿಯನ್ನು ತೆಗೆದು-ಕೊಂಡು, ಚಮಚೆಯಿಂದಲೆ ಮೆಲ್ಲಗೆ ಬಾವಾಜಿಯ ಬಾಯಲ್ಲಿ ಹಾಕತೊಡಗಿದೆ. ಅವನು ಸ್ವೇಚ್ಛೆಯಿಂದಲೇ ಗುಟುಕರಿಸುತ್ತಿರುವನೆಂಬುದನ್ನು ಕಂಡುಕೊಂಡೆ. ನನಗೆ ತುಂಬ ಸಮಾಧಾನವೆನಿಸಿತು. ಕಪ್ಪಿನಲ್ಲಿಯ ಕಾಫಿಯೆಲ್ಲವನ್ನೂ ನಿಧಾನ

ವಾಗಿ ಕುಡಿಸಿದೆ. ಕಾಫಿಯು ಹೊಟ್ಟೆಯಲ್ಲಿ ಹೋಗಲುತೊಡಗಿದಂತೆ, ಬಾವಜಿಯ ಕಣ್ಣಿನ ಕಳೆಯಲ್ಲಿ ಮಾರ್ಪಾಡು ಕಾಣಲುತೊಡಗಿತು. ವೈಮೋ( ಸ್ವಲ್ಪ ಎಚ್ಚರ ಬಂದಿತೇನೊ! ಪ್ರಯತ್ನಪೂರ್ವಕವಾಗಿ ಎರಡೂ ಕೈಗಳನ್ನು ಮೇಲ್ಗಡೆಗೆ ಎಳೆದುಕೊಳ್ಳಲು ಆರಂಭಿಸಿದ. ಅದೇಕೆಂಬುದು ನನಗೆ ತಿ( ಯದೆ, ಆತನ ಕೈಗಳಿಗೆ ನಾನು ನೆರವನ್ನು ಕೊಟ್ಟೆನು. ಬಾವಾಜಿ ಕಂಪಿಸತ್ತಿರುವ ಹಸ್ತಗಳೆರಡನ್ನೂ ಜೋಡಿಸಿ, ಹಣೆಯ ಕಡೆಗೆ ತರತೊಡಗಿದನು ನನಗೆ ಅವನ ಆ ಪ್ರಯತ್ನದ ಅರ್ಥವು ಆಯಿತು. ಜೋಡಿಸಿದ ಆ ಎರಡೂ ಕೈಗಳನ್ನು ನನ್ನ ಕೈಯಿಂದ ಹಿಡಿದು, ಇದ್ದಲ್ಲಿಯೆ ಇರಿಸಿ ಹೇಳಿದೆನು :

"ನನಗೆ ನಿಮ್ಮ ನಮಸ್ಕಾರವೇನೂ ಬೇಕಾಗಿಲ್ಲ. ನಿಮಗೆ ಗುಣವಾದ( ಸಾಕು; ನನಗೆ ತುಂಬ ಸಂತೋಷ!" ಹತ್ತಿರ ಕುಳಿತ ಜನರೆಲ್ಲ ನನ್ನನ್ನು ಒಂದ ಸಲ, ಬಾವಾಜಿಯನ್ನು ಒಂದು ಸಲ, ಬೆರಗುಗಣ್ಣುಗಳಿಂದ ನೋಡುತ್ತಿದ್ದರು ತಾವೇನಾವರೂ ಮಾಡಬೇಕಾದ ಕೆಲಸವಿವೆಯೆಂದು, ಆಗ ಅವರಾರಿಗೂ ಎ( ಸಿರಲಿಕ್ಕಿಲ್ಲ. ಬಾವಾಜಿಯ ಕಮಂಡಲುವನ್ನು ಸ್ವಚ್ಛವಾಗಿ ತೊಳೆದು, ಅದರ( ಒಂದು ಅರ್ಧಸೇರು ಬಿಸಿಬಿಸಿ ಹಾಲನ್ನು ಹಾಕಿಸಿಕೊಂಡು ಬಂದೆ. ನಾಲ್ಕು ಮೋಸಂಬೀ ಹಣ್ಣುಗಳನ್ನೂ ತೆಗೆದುಕೊಂಡು ಬಾವಾಜಿಯ ಬಳಿಯಲ್ಲಿಯೆ( ಇಟ್ಟೆ. ಗಾಡಿಯು ಹೊರಡುವ ಕೂಗನ್ನು ಹಾಕಿತು. ಉಸ್ಸೆಂದು ನಿಡಿದಾ( ಉಸಿರುಹಾಕಿ ಮೆಲ್ಲಗೆ ಮುಂದುವರಿಯಿತು. ಆಗ ಮೂವರೂ ತರುಣರೂ ಒಂದರಹಿಂದೊಬ್ಬರಂತೆ ಓಡಿಬಂದು ಗಾಡಿಯನ್ನು ಹತ್ತಿದರು. ಎಲೆಯಡಿ( ತಿಂದುದರಿಂದ ತುಟಿಗಳು ರಂಗು-ರಂಗಾಗಿದ್ದುವು. ಹೊತ್ತಿಸಿದ ಸಿಗರೇಟುಗಳ( ಮೂವರ ಕೈಯಲ್ಲಿಯೂ ಕಾಣುತ್ತಿದ್ದುವು. ತನ್ನ ಸ್ಥಳದಲ್ಲಿ ಕುಳಿತುಕೊಳ್ಳುತ್ತಿರುವಾಗಲೇ ಸಡಿಲು ಪಾಯಜಾಮೆಯುವನು ನುಡಿದ :

"ಆ ಹೋಟಲಿನ ಆಳಿನ ಮ್ಯಾಲ ನನಗ ಬಹಳ ಸಿಟ್ಟುಬಂತು ನೋಡ್ರಿ! ನಮಗ ಮೊದಲ ಸಪ್ಲೈ ಮಾಡೋ— ಅಂತ ಹೇಳಿದರ, 'ಪಾಳೀ ಪ್ರಕಾ( ಸಪ್ಲೈ ಮಾಡಬೇಕಾಗತ್ತದರೀ!' ಅಂತಾನ ಮಗ! ಆತನ್ನ ಒಂದೆರಡ ಬಿಗೀಬೇಕೆನ್ನುವಷ್ಟು ಸಿಟ್ಟು ಬಂದಿತ್ತು ಬಿಡ್ರಿ!"

ಖಾದೀಧಾರಿ ಹೇಳಿದ :

" ಏನೇ ಆಗಲಿ, ನಮಗಂತೂ ಬೇಕಾದದ್ದು ಎಲ್ಲಾ ಸಿಕ್ಕಿತಲಾ! ಉದ್ದಿನ ವಡಿ ಮಾತ್ರ ಇಲ್ಲಿಯವರು ಬಹಾಳ ರುಚಿಕಟ್ಟು ಮಾಡತಾರ ನೋಡ್ರಿ ! ಕಾಫೀ ಅಂತೂ ಮದ್ರಾಸಿನಿಂದ ಇಳಿದು ಬಂದ್ಹಾಂಗs ಆಗಿರತsದ ! "

ಕೋಟು–ಪ್ಯಾಂಟಿನವ ಹೇಳಿದ :

" ಏನ್ರೆಪಾ, ರೇಲ್ವೆ ಹೋಟಲಿನ ಮುಂದ್ಯೂ ತಿರುಕರ ಪಿಡುಗು ಇರ-ಬೇಕs ? ಸರಕಾರದವರು ಇದನ್ನ ಕಟ್ಟು-ನಿಟ್ಟಾಗಿ ಬಂದ್ ಮಾಡಬೇಕು ನೋಡ್ರಿ !"

" ಇಂಥಾ ಸರಕಾರೆಲ್ಲಾ ಏನುಮಾಡತsದರಿ ! ರಸ್ಯಾ ಸರಕಾರದಂಥಾ ಸರಕಾರ ಬೇಕಿಲ್ಲಿ; ಅಂದರ ಒಬ್ಬ ತಿರುಕನೂ ಕಣ್ಣಿಗೆ ಬೀಳದ್ಹಾಂಗ ಮಾಡಲಿಕ್ಕೆ ಬರತsದ !"

ಕೋಟು–ಪ್ಯಾಂಟಿನವ ನಗುನಗುತ್ತ ಕೇಳಿದ :

" ಹೌದು ಹೌದು, ಬ್ಯಾಡಾದ ಮಂದಿನ್ನೆಲ್ಲಾ ಗುಂಡುಹಾಕಿ ಇಲ್ಲ ದ್ಹಾಂಗ ಮಾಡಲಿಕ್ಕೆ ಬರತsದ ಅಂಥಾ ಸರಕಾರಕ್ಕ !"

ಖಾದೀಧಾರಿಯೂ ಮನಃಪೂರ್ವಕವಾಗಿ ನಗತೊಡಗಿದ. ಸಡಿಲು-ಪಾಯಜಾಮೆಯುವನು ಅಪ್ರತಿಭಭಾವದವನಾಗಿ, ಸಿಗರೇಟಿನ ಝುರಿಕೆಗಳನ್ನು ಎಳೆಯತೊಡಗಿದ.

ಇದನ್ನೆಲ್ಲ ಕೇಳುತ್ತಲೇ ನಾನು ಬಾವಾಜಿಗೆ ಸ್ವಲ್ಪ ಹಾಲನ್ನು ಕುಡಿಸಿದೆ. ಅತನ ಮುಖದ ಕೃತಜ್ಞತಾಭಾವ ನನ್ನ ಹೃದಯವನ್ನು ಅರಳಿಸುತ್ತಲಿತ್ತು. ಮೈಯನ್ನು ಆಗಾಗ ಜುಮ್ಮಡಬ್ಬಿಸುತ್ತಿತ್ತು. ಆಗ ನನಗಾಗುತ್ತಿರುವ ಆನಂದ, ಉದ್ದಿನ ವಡೆಯ ರುಚಿಗೆ ಸರಿಯೆನಿಸಬಹುದೊ—ಮದ್ರಾಸಿನ ಕಾಫಿಯ ಕಂಪನ್ನು ಸರಿಗಟ್ಟಬಹುದೊ !

ಮೋಸಂಬಿಯ ಹಣ್ಣೊಂದನ್ನು ಸುಲಿದೆ. ತೊಳೆಗಳನ್ನು ಹದಗೊಳಿಸಿ ಬಾವಾಜಿಯ ಬಾಯಲ್ಲಿ ಹಾಕತೊಡಗಿದೆ. ಆತ ಮೆಲ್ಲ-ಮೆಲ್ಲಗೆ ಬಾಯಾಡಿಸಿ ರಸವನ್ನು ನುಂಗತೊಡಗಿದ. ಇದೆಲ್ಲವನ್ನೂ ಅಚ್ಚರಿಗಣ್ಣುಗಳಿಂದ ನೋಡುತ್ತ ಲಿದ್ದ ಹಳ್ಳಿಗನೊಬ್ಬ ನನ್ನನ್ನು ಕೇಳಿದ :

" ಇವರು ನಿಮಗ ಏನ ಆಗಬೇಕೇನ್ರಿ ?"

ನಾನು ಕುತೂಹಲ ತುಂಬಿದ ಕಣ್ಣುಗಳಿಂದ ಅಕ್ಕ-ಸಕ್ಕದ ಜನರ ಮುಖಗಳನ್ನು ನೋಡಿದೆ. ಹಳ್ಳಿಗ ಕೇಳಿದ ಪ್ರಶ್ನೆ ಅವರೆಲ್ಲರ ಪ್ರಶ್ನೆಯೂ ಆಗಿರಬಹುದೆಂದು ಭಾವಿಸಿದೆ. ಕೂಡಲೆ, ಪ್ರಶ್ನೆ ಕೇಳಿದ ಹಳ್ಳಿಗನಿಗೆ ಕಿರುನಗೆಯೊಂದಿಗೆ ಉತ್ತರಕೊಟ್ಟೆ :

" ನನಗ ಇವರು ಏನು ಆಗಬೇಕಂತ ಕೇಳಿದಿರಲ್ಲs ನೀವು ? ಇವರು.... ನನಗ....ಏನು ಹೇಳಲಿ....ಹುಂ ! ಅಣ್ಣ ಆಗಬೇಕು !"

ಅಲ್ಲಿ ಕುಳಿತವರ ಮುಖದ ಮೇಲೆಲ್ಲ ಆಶ್ಚರ್ಯದ ಕಿರುನಗೆಯಾಡಿತು. ಆ ಮೂವರು ತರುಣರೂ ಬೆರಗುಗಣ್ಣುಗಳಿಂದ ಒಂದು ಸಲ ನನ್ನ ಕಡೆಗೆ ಹೊರಳಿ ನೋಡಿದರು. ಮೊದಲು ಪ್ರಶ್ನೆ ಕೇಳಿದ ಹಳ್ಳಿಗನೇ ಮತ್ತೆ ಕೇಳಿದ :

" ನಿಮ್ಮ ಅಣ್ಣಾವರು ಏನ್ರಿ ಇವರು ? ಹಾಂಗಾದರ ಇವರು ಬಾವಾಜೀ ಯಾಕ ಆಗ್ಯಾರ್ರಿ ?"

ನಾನು ಹೇಳಿದೆ :

" ಹೌದು, ಇವರು ನನ್ನ ಅಣ್ಣಾವರು ! ಆದರ, ಇವರು ಬಾವಾಜೀ ಯಾಕ ಆಗ್ಯಾರಂಬೂದು ನನಗೂ ಗೊತ್ತಿಲ್ಲ! ನಾನೂ ತಿಳಕೊಳ್ಳಬೇಕಾಗೇದ! "

ಬಾವಾಜಿಯ ಕಣ್ಣಿಂದ ಹನಿಹನಿಯಾಗಿ ಕಣ್ಣೀರು ಹರಿಯಿತು. ಆತನ ಮೈಮೇಲಿನ ಬಟ್ಟೆಯಿಂದ ಅದನ್ನು ಒರಸಿದೆ. ಆಗಲೇ ಕಂಪಾರ್ಟ್‌ಮೆಂಟಿನ ಆಚೆಯ ಮೂಲೆಯಲ್ಲಿ ಹೆಣ್ಣಿನ ಕಂಠದಿಂದೊಂದು ಹಾಡು ಹೊರಟುದು ಕೇಳಿಸಿತು :

" ಅಖಿಯಾ ಮಿಲಾಕೇ, ಜಿಯಾಭರಮಾಕೇ ಚಲೇ ನಹಿ ಜಾನಾ !

ಓ.........ಚಲೇ ನಹಿ ಜಾನಾ !"

ಹಾಡುವ ಕಂಠ ಮಧುರವಾಗಿದ್ದಿತು. ಸಹಜವಾಗಿಯೆ ನನ್ನ ಕಣ್ಣುಗಳು ಆ ಕಡೆಗೆ ಹೊರಳಿದುವು. ನೋಡಿದೆ. ಹತ್ತೊಂಬತ್ತು ಇಪ್ಪತ್ತು ವಯಸ್ಸಿನ ತರುಣಿ. ಕಣ್ಣು-ಮೂಗಿನಿಂದ ಚೆಲುವೆಯೆಂದೇ ಹೇಳಬೇಕು. ತಲೆಗೂದಲನ್ನು ಅಂದವಾಗಿ ಬಾಚಿ ಹಿಂದೆ ಮುಡಿಯನ್ನು ಕಟ್ಟಿದ್ದಾಳೆ. ಉಟ್ಟುದು ಸ್ವಲ್ಪ ಮಾಸಿದ್ದಿತಾದರೂ, ಚುಕ್ಕೆಗಳಿಂದ ಕೂಡಿದ ತಿಳುವಾದ ಬಿಳಿಯ ಪತ್ತಲವಾದುದರಿಂದ, ದುಂಡು-ದುಂಡಾದ ಮೈಗೆ ಚೆನ್ನಾಗಿ

ಹೊಂದಿಕೊಂಡಿವೆ. ತೊಟ್ಟುದು ತಿಳಿನೀಲಿಯ ಕುಪ್ಪಸ. ಯೌವನದ ಪೂರ್ಣತೆಯು ಹೊರಹೊಮ್ಮಿ ತೋರುವಂತೆ ಅದರ ರಚನೆಯ ರೀತಿ. ಹೊದ್ದುಕೊಂಡ ಸೆರಗು ಎದೆಯನ್ನು ಮುಚ್ಚಿಯೂ ಮುಚ್ಚದಂತೆ ಮೇಲೇರಿ, ಹಿಂಬದಿಯ ಮುಡಿಯ ಮೇಲೆ ಮುಸುಕುಹಾಕಿತ್ತು. ಎಡದ ಮೂಗಿನಲ್ಲೊಂದು ತಾರೆ ಮಿನುಗುತ್ತಿತ್ತು. ಕಿವಿಯಲ್ಲಿ ನಾಲ್ಕಾಣೆಯ ಲೋಲಕಗಳು ಜೋಲಾಡುತ್ತಿದ್ದುವು. ಕೊರಳಲ್ಲಿ ಒಂದು ಹೊಂಬಣ್ಣದ ಒಂಟಿಳೆಯ ಚೇನು! ಹಾಡನ್ನು ಹೇಳುತ್ತಿರುವ ಕಂಠದಂತೆಯೆ ಅವಳ ಮುಖದ ಚೆಲುವೂ ದೇಹದ ನಿಲುವೂ ಆಕರ್ಷಕವಾಗಿದ್ದುವು.

ಕಂಪಾರ್ಟ್‌ಮೆಂಟಿನಲ್ಲಿಯ ಎಲ್ಲ ಜನರ ಕಿವಿ-ಕಣ್ಣುಗಳನ್ನೂ ಆಕೆ ತನ್ನತ್ತ ಸೆಳೆದುಕೊಂಡಳು. ಮೂವರು ತರುಣಮಿತ್ರರಂತೂ ಕಣ್ಣುಕದಲಿಸದೆ ಅವಳನ್ನು ನೋಡಲು ತೊಡಗಿದರು. ಅಲ್ಲಿ ಕುಳಿತಿದ್ದ ಆ ದಕ್ಷಿಣದೇಶದ ಕಾಗೆವೆಣ್ಣುಗಳ ಬಳಗವನ್ನು ನೋಡಿ ಆ ಗಾಯಕಿಯನ್ನು ನೋಡಿದರೆ, ಅವಳೊಬ್ಬ ಅಪ್ಸರೆಯೆಂದೇ ಭಾಸವಾಗುವಂತಿತ್ತು. ನಾನು ನನ್ನ ಕಿವಿಗಳನ್ನು ಆಕೆಯ ಮಧುರಗಾಯನಕ್ಕೆ ಕೊಟ್ಟಿದ್ದೆನಾದರೂ, ಆ ಬಾವಾಜಿಯ ಕಡೆಗೆ ಅಲಕ್ಷ್ಯವನ್ನೇನೂ ಮಾಡಿರಲಿಲ್ಲ. ಆಗಾಗ ಆತನ ಮೈಮೇಲೆ ಕೈಗಳನ್ನಾಡಿಸುತ್ತಿದ್ದೆ. ಚಮಚೆಯಿಂದ ಹಾಲನ್ನು ಕುಡಿಸುತ್ತಿದ್ದೆ. ಗಾಯಕಿಯ ಹಾಡು ನಡೆದೇ ಇದ್ದಿತು. ಒಂದು ಹಾಡು ಮುಗಿಯಿತು. ಯಾವನೋ ಒಬ್ಬ ಹಳ್ಳಿಗನು ಹೇಳಿದ :

"ಒಂದು ಕನ್ನಡ ಪದಾ ಹೇಳಬಾರದ ?"

ಕೂಡಲೆ ಗಾಯಕಿ ಹಾಡತೊಡಗಿದಳು :

"ಬಾ ಚದುರಿ ಕರಿಯತೀನ ನಾನಾ
ಮಂದಿರಾಕೆ ಬಾರೆ ನೀನಾ ||
ಇನ್ನ್ಯಾಕ ಮಾಡುದು ಅನುಮಾನಾ....
ನನ್ನ ಮನಸ ಮಾಡ ಸಮಾಧಾನಾ
ಬೇಡಿದ್ದನ್ನ ಕೊಡೂವೆನು ನಾನಾ || ೧ ||

ಹಾಡು ಕೇಳುತ್ತ ಕೆಲವರು ತಾಳವನ್ನು ಹಾಕಿದರು; ಕೆಲವರು ಗೋಣು

ಹಾಕಿದರು; ಬೇರೆ ಕೆಲವರು ಮೈಯನ್ನೆಲ್ಲ ಕುಣಿಸಿದರು. ಮತ್ತೆ ಕೆಲವರು ಬೆರಳಿಂದ ಚುಟಿಕೆ ಬಾರಿಸಿದರು. ಹಾಡನ್ನು ಮುಗಿಸಿ ಗಾಯಕಿ ಬೇಡಲು ತೊಡಗಿದಳು. ಆಣೆ-ಚವಲಿಗಳಿಂದ ಅವಳ ಪಾತ್ರೆ ತುಂಬಿಹೋಯಿತು. ತಾವೇ ತಿರಿದು ತಿನ್ನುವ ಮದ್ರಾಸಿನ ಬಡಜನರೂ ಅವಳನ್ನು ಬರಿಗೈಯಿಂದ ಮುಂದೆ ಹೋಗೆನ್ನಲಿಲ್ಲ. ತರುಣರ ಬಳಿಗವಳು ಬೇಡಲು ಬಂದಾಗ, ಸಡಿಲು ಪಾಯಜಾಮೆಯವ ಅವಳಿಗೆ ಮತ್ತೊಂದು ಸಿನೇಮಾ ಪದವನ್ನು ಹೇಳುವಂತೆ ಹೇಳಿದ; ಅವಳಲ್ಲಿ ಪದಗಳಿಗೇನು ಕೊರತೆ? ಹಾಡತೊಡಗಿದಳು :

"ನಯನೋಂಕೇ ಬಾನ್‌ಸೇ ನಾ ಮಾರೋ ಸಂಯಾ...."

ಆ 'ಸಂಯಾ'ಗಳು ತಮ್ಮ ನಯನದ ಬಾಣಗಳನ್ನು ಅವಳತ್ತ ಬಿಟ್ಟರೋ ಇಲ್ಲವೋ, ನನಗೆ ಕಾಣಲಿಲ್ಲ. ಆದರೆ ಹಾಡುತ್ತಿದ್ದ ಆ ಭಿಕ್ಷುಕರಮಣಿ, ತನ್ನ ನಯನಬಾಣಗಳನ್ನು ಅವರತ್ತ ಎಡೆಬಿಡದೆ ಕಳುಹುತ್ತಿದ್ದಳು. ಹಾಡು ಮುಗಿಯಿತು. ಮೂವರೂ ಸುಶಿಕ್ಷಿತ ತರುಣರು. ಆ ಭಿಕ್ಷುಕಿಗೆ ಕೊಡುವುದರಲ್ಲಿ, ಅಲ್ಲಿಯ ಅಶಿಕ್ಷಿತ ಜನರಿಗಿಂತ ಅವರು ಹಿಂದುಳಿಯುವರೇ? ಹಣದ ಚೀಲಗಳನ್ನು ತೆರೆದು ಕೈಯಲ್ಲಿ ಹಿಡಿದು, ಆಕೆಯ ಮನಸ್ಸು ಮೆಚ್ಚುವಂತೆಯೆ ಭಿಕ್ಷೆಯನ್ನು ಸಲ್ಲಿಸಿರಬೇಕು! ಬಾವಾಜಿಯ ಆರಯಿಕೆಯಲ್ಲಿ ಕುಳಿತ ನನ್ನನ್ನು ಭಿಕ್ಷೆ ಕೇಳಬೇಕೆಂಬ ಅಪೇಕ್ಷೆ ಅವಳಿಗೆ ಆಗಲೇ ಇಲ್ಲವೋ ಏನೊ! ಚರಿಪಾರಣ್ಯದ ಪಕ್ಷಿಗೊಂದು ತರು ಗೊಡ್ಡಾಗಲೇನು? ಆದರೆ ಆಕೆ ನನ್ನನ್ನು ಗೊಡ್ಡ ತರುವೆಂದು ಭಾವಿಸುವ ಕಾರಣವೇನೂ ಇರಲಿಲ್ಲ. ಹಾಡಿನ ಸವಿಯನ್ನು ಅನುಭವಿಸಿದುದಕ್ಕೆ ಪ್ರತಿಫಲವೆಂದು ನಾನೂ ಆಣೆ ಎರಡಾಣೆಗಳನ್ನು ಸಲ್ಲಿಸದೆ ಇರುತ್ತಿರಲಿಲ್ಲ. ಆದರೆ ಆ ತರುಣರು ಇತ್ತ ಭಿಕ್ಷೆಯು ಆಕೆಯ ಮನಸ್ಸನ್ನು ಸಂಪೂರ್ಣವಾಗಿ ತೃಪ್ತಿಗೊಳಿಸಿರಬಹುದು. ಎಂತಲೇ ಅವಳು ನನ್ನಲ್ಲಿ ಭಿಕ್ಷೆಯನ್ನು ಕೇಳಿರಲಿಕ್ಕಿಲ್ಲ.

ಮುಂದಿನ ನಿಲ್ದಾಣದಲ್ಲಿ ಗಾಡಿಯು ನಿಂತೊಡನೆಯೆ ತಿರುಕ ತರುಣಿ ನಮ್ಮ ಕಂಪಾರ್ಟ್‌ಮೆಂಟಿನಿಂದ ಇಳಿದು ಬೇರೆಕಡೆಗೆ ಹೋದಳು. ಸ್ಟೇಶನು ಚಿಕ್ಕದು. ಅಲ್ಲಿ ಉಪಹಾರದ ಅಂಗಡಿಯೂ ಇರಲಿಲ್ಲ; ಅಲ್ಲದೆ ಗಾಡಿಯು ಅಲ್ಲಿ ಹೆಚ್ಚು ವೇಳೆ ನಿಲ್ಲುವಂತೆಯೂ ಇರಲಿಲ್ಲ. ಆದರೂ ನಮ್ಮ ಆ ಮೂವರೂ

ತರುಣರು ಗಾಡಿಯನ್ನು ಬಿಟ್ಟು ಇಳಿದರು. ಎಲ್ಲಿಗೆ ಹೋದರೇನೊ; ಗಾಡಿಯು ಸ್ಟೇಶನನ್ನು ಬಿಟ್ಟು ಹೊರಟರೂ ಅವರು ಮರಳಿ ಬರಲಿಲ್ಲ. ಅವರ ಸಾಮಾನು-ಸಟ್ಟುಗಳೆಲ್ಲ ನಮ್ಮ ಕಂಪಾರ್ಟ್‌ಮೆಂಟಿನಲ್ಲಿಯೆ ಉಳಿದಿದ್ದುವು.

ಬಾವಾಜಿಯು ಹೆಚ್ಚು-ಹೆಚ್ಚಾಗಿ ಚೇತರಿಸಿಕೊಳ್ಳಲು ತೊಡಗಿದನು. ಹೊಟ್ಟೆಯಲ್ಲಿ ಆಹಾರವು ಹೋದಂತೆಲ್ಲ ಆತನ ನರಗಳಲ್ಲಿ ರಕ್ತವು ಹರಿದಾಡ-ತೊಡಗಿತು. ಮಂಕುಕವಿದಿದ್ದ ಮಿದುಳಿಗೆ, ನಿದ್ದೆಯ ಲೋಕದಿಂದ ಹೊರ-ಬಿದ್ದಂತಾಗಿ, ಹೊರಗಿನ ಪ್ರಪಂಚವನ್ನು ಅದು ಹೆಚ್ಚು-ಹೆಚ್ಚಾಗಿ ಅರಿತು ಕೊಳ್ಳಲಾರಂಭಿಸಿತು. ನಾಲಗೆ ಮಾತನಾಡಬೇಕೆಂದು ಹವಣಿಸತೊಡಗಿತು. ನನ್ನಕಡೆಗೆ ಒಂದೇಸವನೆ ಆತ್ಮೀಯಭಾವದ ನೋಟಗಳಿಂದ ನೋಡುತ್ತಿದ್ದ. ಆಗ ನಾನು ಕೇಳಿದೆ :

"ಏನಾದರೂ ಹೇಳಬೇಕಾಗಿದೆಯೇ ನಿಮಗೆ ?"

"ಹೂಂ" ಎಂದು ಬಾವಾಜಿ ಗೋಣನ್ನು ಹಾಕಿದ.

"ಈಗ ನಿಮ್ಮಿಂದ ಮಾತನಾಡಲಿಕ್ಕೆ ಆದೀತೆ ?" ನಾನು ಕೇಳಿದೆ.

ತಗ್ಗಿದ ಧ್ವನಿಯಲ್ಲಿಯೇ ಬಾವಾಜಿ ಹೇಳಿದ :

"ಈಗ ನಾಲ್ಕು ದಿನಗಳಿಂದಲೂ....ನನಗೆ ನಿರಾಹಾರ ?"

ಕುತೂಹಲಿಯಾಗಿ ನಾನು ಕೇಳಿದೆ :

"ಏಕೆ ?....ನಿರಾಹಾರವೇಕೆ ?....ವ್ರತವೇನಾದರೂ ಇದ್ದಿತೆ ?"

ಮತ್ತೆ ಅದೇ ತಗ್ಗಿದ ಕಂಠದಲ್ಲಿಯೆ ಉತ್ತರ :

"ಹುಂ !....ವ್ರತ !....ತಿರಿದು ತಿನ್ನಬಾರದೆಂಬ ವ್ರತ !"

"ಬಾವಾಜಿಯಲ್ಲವೇ ತಾವು ? ಭಿಕ್ಷೆಬೇಡುವುದಕ್ಕೆ ನಿಮಗೆ ಅಧಿಕಾರವೇ ಇರುವುದು !"

ವಿಷಾದದ ನಗೆನಕ್ಕು ಬಾವಾಜಿ ಹೇಳಿದ :

"ನಾನೋ ? ....ಬಾವಾಜೀ ! ....ಬಾವಾಜಿಯ ವೇಷವನ್ನೇನೋ.... ಹಾಕಿಕೊಂಡಿದ್ದೇನೆ !"

"ಇದು ನಿಮ್ಮ ವೇಷವೆ? "

"ಹುಂ....ಹುಂ....ಜೀವನದ ನಾಟಕದಲ್ಲಿ....ಎಲ್ಲರದೂ ಒಂದೊಂದು

ವೇಷ ! ಹಾಗೆಯೇ ನನ್ನ ಜೀವನನಾಟಕಕ್ಕಾಗಿ ನಾನು....ಬಾವಾಜಿಯ ಪಾತ್ರವನ್ನು....ಧರಿಸಿದ್ದೇನೆ ! ಬುದ್ಧಿವಂತರು ವೇಷವನ್ನು ವಾಸ್ತವವೆನಿಸುವಂತೆ ನಟಿಸುತ್ತಾರೆ. ನಮ್ಮಂತಹ ಬುದ್ಧಿಹೀನರು, ಹಾಕಿದ ವೇಷವನ್ನು ಮರೆತು, ತಮ್ಮ ವಾಸ್ತವಸ್ವರೂಪವನ್ನೇ ಪ್ರಕಟಿಸುತ್ತಾರೆ ! ”

“ ಯಾಕೆ? ಈಗೇನಾಯಿತು ? ”

“ ಇನ್ನೇನಾಗಬೇಕು?....ಬಾವಾಜಿಯ ವೇಷವನ್ನು ತಳೆದರೂ, ನನ್ನಿಂದ ಭಿಕ್ಷೆಯನ್ನು ಬೇಡುವುದಕ್ಕಾಗಲಿಲ್ಲ ! ಭಿಕ್ಷೆಬೇಡದೆ ಇದ್ದರೆ, ಬಾವಾಜಿಗಳಿಗೆ ಬದುಕಿನ ಮಾರ್ಗವೆಲ್ಲಿ ? ”

“ ಏಕೆ, ಭಿಕ್ಷೆಯನ್ನು ಬೇಡಲಿಕ್ಕಾಗಲೊಲ್ಲದು ನಿಮಗೆ? ಯಾರು ನೀವು? ಇದನ್ನು ನಾನು ಕೇಳಬಹುದೆ ? ”

ಬಾವಾಜೀ ಮಾತನೇನೂ ಆಡಲಿಲ್ಲ. ನಿಡಿದಾಗಿ ಉಸಿರೊಂದನ್ನು ಹಾಕಿದ. ಮತ್ತೆ ನಾನು ಕೇಳಿದೆ :

“ ನಾನು ಹಾಗೆ ಕೇಳಿದುದರಿಂದ ತಮ್ಮ ಮನಸ್ಸಿಗೆ ನೋವೆನಿಸಿತೇನು?

“ ನೋವೇನೂ ಇಲ್ಲ. ನನ್ನದು ದೊಡ್ಡ ಕಥೆ. ಈಗ ಹೇಳುವುದಕ್ಕೆ ನನ್ನಲ್ಲಿ ತ್ರಾಣವಿಲ್ಲ! ಮುಂದೆ ಎಂದಾದರೂ ನನ್ನ ಕಥೆಯು ನಿಮಗೆ ತಿಳಿದೀತು ! ”

“ ತಮಗೆ ತೊಂದರೆಯೆನಿಸುವುದಾದರೆ ಹೆಚ್ಚಿನ ಮಾತುಗಳನ್ನೇನೂ ಆಡಬೇಡಿರಿ ! ”

ಮತ್ತೊಂದು ನಿಲ್ದಾಣ ಬಂದುದರಿಂದ ನಮ್ಮ ಗಾಡಿಯು ನಿಂತಿತು. ಮೂವರೂ ತರುಣರು ನಗುತ್ತ ಕೆಲೆಯುತ್ತಲೇ ಬಂದು ಗಾಡಿಯಲ್ಲಿ ಹತ್ತಿ, ತಮ್ಮ ಸ್ಥಳವನ್ನು ಹಿಡಿದು ಕುಳಿತುಕೊಂಡರು. ಖಾದೀ ವೇಷಧಾರಿ ಮಾತನಾಡತೊಡಗಿದ :

“ ಇಂಥವರನ್ನ ಸಿನೇಮಾ ಕಂಪನಿಯವರು ಯಾಕ ಉಪಯೋಗಮಾಡಿಕೊಳ್ಳಬಾರದೂ—ಅಂತೀನಿ. ಸುಂದರ ರೂಪ ಅದ; ಮಂಜುಲವಾದ ಕಂಠ ಅದ! ಇಂಥವರನ್ನ ತಿರುಕೊಂಡು ತಿನ್ನಲಿಕ್ಕೆ ಹಚ್ಚೂದಂದರ, ನಮ್ಮ ದೇಶದ ದುರ್ದೈವ ಏನ್ರೆಪಾ ! ”

ಸಡಿಲು ಪಾಯಜಾಮೆಯವ ಹೇಳಿದ !

"ಅದೇ ಹೇಳಿದೆನಲ್ರಿ! ನಮ್ಮ ದೇಶದೊಳಗ ಬಡಜನರ ಯಾವ ಗುಣಕ್ಕೂ ಬೆಲೀನೇ ಇಲ್ಲ! ದುಡ್ಡಿದ್ದರೆ ಒಂದು ಕತ್ತೆಯನ್ನೂ ಕರೆದೊಯ್ದು ರಂಗದ ಮ್ಯಾಲ ಕುಣಿಸತಾರ. ಅದಕ್ಕs ನಾ ಅನ್ನೂದು...."

ಕೋಟು-ಪ್ಯಾಂಟಿನ ತರುಣ ತುಂಬ ಬುದ್ಧಿವಂತನೆಂಬ ಆವಿರ್ಭಾವದಿಂದ ನುಡಿದ :

"ಇಂಥವರನ್ನ ಹೀಂಗ ಬಿಡಬಾರದ್ರೀ! ನಮ್ಮ ತರುಣರು ಇಂಥವರನ್ನ ಮದುವೀಮಾಡಿಕೊಂಡು ಒಳ್ಳೆಯ ಹಾದಿಗೆ ಹಚ್ಚಬೇಕು!"

ಸಡಿಲು ಪಾಯಜಾಮೆಯವ ಹೇಳಿದ :

"ಸರಿ! ಏನಾರೇ ಮಾತಾಡತೀರಿ ನೀವು! ವರದಕ್ಷಿಣೆ ಇಲ್ಲದೆ ನಮ್ಮ ದೇಶದ ತರುಣರು ಮದಿವೀ ಮಾಡಿಕೋತಾರೇನ್ರೀ? ಬಡವರ ಹೆಣ್ಣು ಎಷ್ಟೇ ಸುಂದರಿ—ಎಷ್ಟೇ ಸದ್ಗುಣಿ—ಇದ್ದರೂ, ಹಣದರಾಶಿ ಇಲ್ಲದೆ ಮದುವೀ ಮಾಡಿಕೊಳ್ಳುವ ಧೈರ್ಯಶಾಲಿಗಳು ಇದ್ದಾರ ಎಲ್ಲೆ ಹೇಳ್ರಿ! ಈಗ ಆ ಹುಡುಗೀ ತಂದಿ-ತಾಯಿಗಳು ಬಡವರಿದ್ದಾರಂತ ತಿಳೀರಿ; ಅವರು ತಮ್ಮ ಮಗಳನ್ನ ನಿಮಗ ಕೊಡತೀವಂತ ಹೇಳಿದರ, ನೀವು ಮದುವೀ ಮಾಡಿಕೊಳ್ಳಲಿಕ್ಕೆ ಸಿದ್ಧರಾಗತೀರಾ?"

ಕೋಟು-ಪ್ಯಾಂಟಿನ ತರುಣ ನಿರುತ್ತರಭಾವದವನಾಗಿಯೇ ಮಾತನ್ನು ಆಡಿದ :

"ಸಿದ್ಧರಾಗಬೇಕರೆಪಾ!"

"ಎಲ್ಲಾರೂ ಹೀಂಗs ಅಂತಾರ್ರೀ! ತಮ್ಮನ್ನು ಬಿಟ್ಟು ಮಿಕ್ಕವರು ಸಿದ್ಧರಾಗಬೇಕೂ ಅಂತ ಅಪೇಕ್ಷಿಸತಾರ! ಈ ವರದಕ್ಷಿಣೀ ಅಂಬೂದು, ನಮ್ಮ ಸಮಾಜದೊಳಗ ಎಂಥೆಂಥಾ ಜೀವನಗಳ ಘಾತಮಾಡಲಿಕ್ಕೆ ಹತ್ತೇದಂಬೂದರ ಕಲ್ಪನಾ ಯಾರೂ ಮಾಡವೊಲ್ಲರು!" ಪಾಯಜಾಮೆಯವನ ಮಾತಿದು.

ಬಾವಾಜಿಯೀಗ ತರುಣರಲ್ಲಿಯ ಚರ್ಚೆಯ ಕಡೆಗೆ ಕಿವಿಗಳನ್ನು ಕೊಟ್ಟಿದ್ದ. ಪಾಯಜಾಮೆಯವನು ಆಡಿದ ವರದಕ್ಷಿಣೆಯ ಉಪನ್ಯಾಸದ ಮಾತುಗಳು ಅವನ ಅಶಕ್ತ ಮನಸ್ಸಿನ ಮೇಲೆ ಎಂತಹ ಪರಿಣಾಮವನ್ನು ಮಾಡಿದುವೋ ಏನೋ! ಸುಮ್ಮನೆ ಬಿದ್ದಲ್ಲಿ ಬಿದ್ದುಕೊಂಡು, ಕಂಬನಿಗಳನ್ನು

ಹರಿಸತೊಡಗಿದ. ನಾನು ಬಾವಾಜಿಯ ಅಂಗಾಂಗಗಳ ವಿಕಾರಗಳನ್ನೆಲ್ಲ ದಿಟ್ಟಿಸಿ ನೋಡುತ್ತಲೆ ಕುಳಿತಿದ್ದೆ. ಆಗ ಒಮ್ಮೆಲೆ ಅವನು ತನ್ನಲ್ಲಿ ತಾನೇ ರೊಚ್ಚಿನ ಧ್ವನಿಯಲ್ಲಿ ಪಿಸುಗುಟ್ಟಿದ :

" ವರದಕ್ಷಿಣೆ!....ವ–ರ–ದ–ಕ್ಷಿ–ಣೆ ! " ಪಿಸುನುಡಿಯ ಕೊನೆಯಲ್ಲಿಯೇ ನಿಡಿದಾದ ಬಿಸಿಯುಸಿರೊಂದು ಬಾವಾಜಿಯ ಮುಖದಿಂದ ಹೊರಬಿದ್ದಿತು. ನಾನಾಗ ಮೆಲುನುಡಿಗಳಲ್ಲಿಯೇ ಆತನನ್ನು ಕೇಳಿದೆ :

" ಯಾಕೆ? 'ವರದಕ್ಷಿಣೆ'ಯ ಚರ್ಚೆಯನ್ನು ಕೇಳಿ ಸಂತಾಪವಾಯಿತೇ ನಿಮಗೆ ? "

ಬಾವಾಜಿ ವಿಷಾದದ ನಗೆ ನಗುತ್ತ ಹೇಳಿದ :

" ಸಂತಾಪ....ಸಂತಾಪ....ಹೊಸತಾಗಿ ಸಂತಾಪವೇನಾಗಬೇಕಾಗಿದೆ ನನಗೆ ! ನನಗಾದ ಸಂತಾಪ ನನ್ನ ಜೀವನವನ್ನು ಬೂದಿಗೊಳಿಸಿಬಿಟ್ಟಿದೆ ! ನನ್ನ ಬಾವಾಜಿತನದ ಬೂದಿಯು ಕುರುಳು-ಕಟ್ಟೆಗೆಗಳದಲ್ಲ....ನನ್ನ ಜೀವನವೇ ಬೆಂದ ಬೂದಿ ! "

" ಅದೇಕೆ ನಿಮ್ಮ ಜೀವನವು ಬೆಂದು ಬೂದಿಯಾಯಿತು ? "

" ನನ್ನದೊಬ್ಬನ ಜೀವನವೇ ಬೇಯಲಿಲ್ಲ; ನನ್ನನ್ನು ನಂಬಿದ ಒಬ್ಬ ಬಡಹೆಣ್ಣುಮಗಳ ಬದುಕಿನ ಹೋಳಿಯೂ ಆಯಿತು ! ರಾಯರೇ, ಅದನ್ನೆಲ್ಲ ನಾನೀಗ ಹೇಳಲಾರೆ....ಹೇಳಿ ಸಹಿಸುವ ಸಾಮರ್ಥ್ಯವೀಗ ನನ್ನಲ್ಲಿಲ್ಲ.... ನೀವಿಂದು ನನಗೆ ಜೀವದಾನ ಮಾಡಿದ್ದೀರಿ! ನೀವು ಯಾರೆಂಬುದು ನನಗೆ ಗೊತ್ತಿಲ್ಲ. ದಯೆಯಿಟ್ಟು ನನಗೆ ನಿಮ್ಮ ವಿಳಾಸವನ್ನು ಕೊಡಿರಿ! ಎಂದಾದರೂ ಒಂದು ದಿನ, ನಾನು ಯಾರೆಂಬುದೂ—ನನ್ನ ಜೀವನದ ಬೂದಿ ಹೇಗಾಯಿ-ತೆಂಬುದೂ—ನಿಮಗೆ ತಿಳಿಯಬಹುದು. ಮಾನವತೆಯಿರುವ ಎಡೆಯಲ್ಲಿ ನನ್ನ ಜೀವನದ ದುಃಖದುರಿಯನ್ನು ತೋಡಿಕೊಂಡರೆ, ಕರುಣೆಯ ಕಂಬನಿಗಳುದುರಿ ಆ ದುಃಖದ ಕಾವು ಕಡಿಮೆಯಾದೀತು!........"

ಬಾವಾಜಿಗೆ ಗ್ಲಾನಿಬಂದಂತಾಯಿತು. ಕಣ್ಣು ಮುಚ್ಚಿ ಸುಮ್ಮನೆ ಬಿದ್ದು-ಕೊಂಡ. ಮತ್ತೆ ಬಾಯಲ್ಲಿ ನೀರುಹಾಕಿದೆ. ನೆತ್ತಿಗೆ ಸ್ವಲ್ಪ ನೀರನ್ನು ತಟ್ಟಿದೆ. ಮತ್ತೆ ಅವನು ಚೇತರಿಸಿ ಕಣ್ಣು ತೆರೆದು ನನ್ನನ್ನು ಕೇಳಿದ :

" ಎಲ್ಲಿ....ನಿಮ್ಮ ವಿಳಾಸವನ್ನು....ನನಗೆ ಕೊಡಿರಿ !"

ನಾನೊಂದು ಕಾಗದವನ್ನು ತೆಗೆದುಕೊಂಡು, ಅದರ ಮೇಲೆ ನನ್ನ ವಿಳಾಸವನ್ನು ಬರೆದು ಆತನ ಕೈಯಲ್ಲಿ ಕೊಡುತ್ತ ನುಡಿದೆ :

" ನಾನು ತಮ್ಮನ್ನು ಒಂದು ಮಾತಿನ ಬಗೆಗೆ ಕೇಳಿಕೊಳ್ಳಲೆ ?"

" ಏನು? "

" ತಾವೀಗ ಎಲ್ಲಿಗೆ ಹೋಗಬೇಕೆಂದಿದ್ದೀರಿ ?"

" ಎಲ್ಲಿಗಾದರೂ........ಬದುಕಿ ಉಳಿಯುವುದಕ್ಕೆ ಅನುಕೂಲವಿರುವ ಸ್ಥಳಕ್ಕೆ !"

" ಎಂದರೇನು ? ಯಾವುದಾದರೂ ಕ್ಷೇತ್ರಕ್ಕೆ ಹೋಗಬೇಕೆನ್ನುವಿರಾ ?"

" ಹುಂ,....ಕ್ಷೇತ್ರ....ಕ್ಷೇತ್ರ.... ಕ್ಷೇತ್ರಕ್ಕೇ ಹೋಗಬೇಕೆಂದಿದ್ದೇನೆ !"

" ಅಲ್ಲಿಯ ವರೆಗೆ ಮತ್ತೆ ನಿರಾಹಾರ ಬೇಡ. ಇದು ತೆಗೆದುಕೊಳ್ಳಿರಿ ಸ್ವಲ್ಪ ಹಣ ! ಇದಿಷ್ಟು ನಿಮ್ಮ ಬಳಿಯಲ್ಲಿರಲಿ ! ಇದು ತಿರುಪೆಯಲ್ಲ....ನನ್ನ ನಿಮ್ಮ ಪರಿಚಯದ ಗುರುತು !"

" ನನಗೆ ಹಣವು ಬೇಡ....ಬೇಡವೇ ಬೇಡ...."

ಪಕ್ಕದ ಡಬ್ಬಿಯಲ್ಲಿ ಗಾಯಕಿಯು ಹಾಡುತ್ತಿದ್ದುದು ಕೇಳಿಸಿತು :

" ಅಖಿಯಾ ಮಿಲಾಕೇ ಜೀಯುಭರಮಾಕೇ ಚಲೆ ನಹಿ ಜಾನಾ !"

ಬಾವಾಜಿ ಕಿವಿಗೊಟ್ಟು ಕೇಳಿದ. ಕುತೂಹಲ ಮುದ್ರೆ ಆತನ ಮುಖದಲ್ಲಿ ಮೂಡಿಕೊಂಡಿತು. ಅರ್ಧ ತನ್ನೊಳಗೆ ಅರ್ಧ ಹೊರಗೆ ಎನ್ನುವಂತೆ ಅವನು ಮಾತನಾಡಿದ :

" ಅದೇ ಅದೇ ಧ್ವನಿ ! ಕನಸಿನಲ್ಲಿ ಕೇಳಿಸುತ್ತಿರುವ ಧ್ವನಿಯು ಇದೆ !" ಆಮೇಲೆ ನನ್ನನ್ನು ನೋಡುತ್ತ ನುಡಿದ :

" ನನಗೆ ನಿಮ್ಮ ಹಣವು ಬೇಡ. ತಿರಿದುಕೊಂಡಾದರೂ ಬದುಕಬೇಕೆಂದು ಅಪರಿಚಿತ ಪ್ರದೇಶಕ್ಕೆ ಹೊರಟಿದ್ದೇನೆ !"

" ಸರಿ ! ನಾನೂ ನಿಮಗೆ ಅಪರಿಚಿತನೆ ! ಅಪರಿಚಿತ ವ್ಯಕ್ತಿಯೇನು, ಪ್ರದೇಶವೇನು ?"

ನಾನು ಇಳಿಯಬೇಕಾದ ಪಟ್ಟಣದ ಸ್ಟೇಶನು ತೀರ ಸಮೀಪಿಸಿತು.

ಗಾಡಿಯು ಅದರ ಸೂಚನೆಯನ್ನು ಕೊಟ್ಟಿತು. ನಾನು ಕೈಚೀಲವನ್ನು ತೆಗೆದು ಕೊಂಡು, ಕೆಳಗೆ ಇಳಿಯುವ ಸಿದ್ಧತೆಯನ್ನು ಮಾಡಿಕೊಂಡು ಬಾವಾಜಿಗೆ ನುಡಿದೆ :

" ನೋಡಿರಿ, ಜೀವನದ ಬೆಲೆಯು ಅಮೂಲ್ಯವಾದದ್ದು ! ಬದುಕಿ ಉಳಿದವನು ' ಭದ್ರ 'ಗಳನ್ನು ಕಂಡೇ ಕಾಣುವನು. ಕತ್ತಲೆಯೆಂಬುದು ಸ್ವರೂಪತಃ ನಿಜವೂ ಅಲ್ಲ; ಶಾಶ್ವತವೂ ಅಲ್ಲ. ಬೆಳಕಿನ ಅಭಾವದ ಕೆಲವು ಗಂಟೆಗಳ ಕಾಲ ಕತ್ತಲೆ ಎಂಬುದನ್ನು ನಾವು ಮರೆತು ನಡೆಯಲಾಗದು. ಕತ್ತಲೆಗಳನ್ನು ಅನುಭವಿಸದೆ ಬೆಳಕೂ ದೊರೆಯಲಾರದು ! ಇಗೊ, ನನ್ನ ನಿಲ್ದಾಣ ಬಂದಿತು. ಬೇಡವೆನ್ನ ಬೇಡಿರಿ ! ನಾನು ಕೊಡುವ ಈ ಹಣವನ್ನು ತೆಗೆದುಕೊಳ್ಳಿರಿ !"

ಎಂದು ಹತ್ತು ರೂಪಾಯಿಯ ನೋಟೊಂದನ್ನು ಆತನ ಮಗ್ಗಿಲ ಬುಡದಲ್ಲಿ ಸೇರಿಸಿ, ನಾನು ಅಲ್ಲಿಂದ ಎದ್ದು ಹೊರಟೆ. ಜನರ ನೂಕು-ನುಗ್ಗಲಿನಲ್ಲಿಯೆ ಗಾಡಿಯಿಂದ ಕೆಳಗಿಳಿದು, ಕಿಟಕಿಯೊಳಗಿಂದ ಆ ಬಾವಾಜಿಯ ಕಡೆಗೆ ನೋಡಿದೆ. ಏನೋ ವಿಚಾರಮುದ್ರೆಯಲ್ಲಿ ಅವನು ಸುಮ್ಮನೆ ಬಿದ್ದುಕೊಂಡಿದ್ದ. ನಾನು ಹೇಳಿದೆ : " ನಮಸ್ಕಾರ ಬಾವಾಜೀ !"

ಬಾವಾಜಿ ಕಷ್ಟದಿಂದಲೇ ಕೈಗಳನ್ನು ಜೋಡಿಸಿ ಎದೆಗೆ ಹಚ್ಚಿ ನುಡಿದ :

" ನ....ಮ....ಸ್ಕಾ....ರ ! ನಾನು ತಮಗೆ....ಕಾಗದ ಬರೆಯುತ್ತೇನೆ !"

" ಆಗಲಿ, ಹೋಗಿಬನ್ನಿರಿ !"

ನಾನು ಅಲ್ಲಿಂದ ಹೊರಟೆ. ಟ್ರೇನಿನ ಒಂದು ಡಬ್ಬಿಯೊಳಗಿಂದ ಗಾಯಕಿಯ ಹಾಡಿನ ನುಡಿ ಹೊರನುಗ್ಗಿ ಬರುತ್ತಲಿತ್ತು :

" ನೀರಜಾಕ್ಷೀ ಬಾರನ್ಯಾತಕೆ ಪ್ರಿಯ !–
ಕರೆತಾರೇ ಮುಗಿವೆ ನಾ ಕೈಯ !"

ಹಾಡನ್ನು ಕೇಳುತ್ತಲೇ ನಾನು ಮುಂದೆ ನಡೆದೆ. ನಿಲ್ದಾಣದಿಂದ ಹೊರಬಿದ್ದು ಟಾಂಗೆಯೊಂದನ್ನು ಮಾಡಿ, ನಾನು ಇಳಿದುಕೊಳ್ಳಬೇಕಾದ ಮನೆಯತ್ತ ಹೊರಟೆ. ಟಾಂಗೆಯಲ್ಲಿ ಕುಳಿತಾಗ ನನಗೆ ನನ್ನ ಕಂಪಾರ್ಟಮೆಂಟಿನದೇ ಹಗಲುಗನಸು ! ಮದ್ರಾಸಿನ ಬಡವರ ತಂಡ....ಮೂವರು ತರುಣಮಿತ್ರರ ಚರ್ಚೆ–ವಾದ....ಬಾವಾಜಿಯ ದಾರುಣಅವಸ್ಥೆ....ಗಾಯಕಿ–ಭಿಕ್ಷುಕಿಯ

ಮೂಗುಬಟ್ಟು-ಲೋಲಕಿನ ಮುಖ....ಗಾಡಿಯಲ್ಲಿ ಹತ್ತುವವರು....ಗಾಡಿಯಿಂದ ಇಳಿಯುವವರು !

ಆಗ ನನ್ನ ಮನಸ್ಸಿನಲ್ಲೊಂದು ವಿಚಾರವು ಮೂಡಿತು :

“ ಮೂರನೆಯ ವರ್ಗದ ಪ್ರವಾಸವೇ ನಿಜವಾದ ಪ್ರವಾಸ ; ಇಂಟರ್, ೨ನೆಯ ತರಗತಿ, ೧ನೆಯ ತರಗತಿ ಇವು ಮನುಷ್ಯನಲ್ಲಿ ಮನುಷ್ಯತ್ವವನ್ನು ತುಂಬಲಾರವು. ದೇಹ-ಮನಸ್ಸುಗಳನ್ನು ದಣಿಸಿದರೆಯೆ ನಮಗೆ ನಿಜವಾದ ಮನುಷ್ಯತ್ವದ ಅನುಭವವಾಗುವುದು. ನಾನಿನ್ನು ಮೇಲಿನ ವರ್ಗದ ಪ್ರವಾಸವನ್ನು ಎಂದೂ ಮಾಡಕೂಡದು· ಕೊನೆಯ ವರೆಗೂ ಮೂರನೆಯ ತರಗತಿಯ ಪ್ರವಾಸಿಯೇ ಆಗಬೇಕು ನಾನು !”

# ಬೀದಿಯ ಹಾಡುಗಾರರು



ಬೆಳಗಿನ ಒಂಬತ್ತು ಗಂಟೆಯಾಗಿರಬಹುದು. ಬಿಡುವಿನ ದಿನವಿದ್ದುದ ರಿಂದ ಆನಂದ ನಮ್ಮ ಮನೆಗೆ ಬಂದಿದ್ದ. ಉಪಾಹಾರದ ಆತಿಥ್ಯ ಮುಗಿ ದೊಡನೆಯೆ, ಹಾಗೆಯೆ ಏನೇನೋ ಮಾತನಾಡಲು ತೊಡಗಿದೆವು. ದೂರ ದಲ್ಲಿ, ಎದುರುಗೋಡೆಗೆ ಇರಿಸಿದ ದಿಂಬನ್ನು ನಂಬಿಕೊಂಡು ನಮ್ಮ ಚಿಕ್ಕಪ್ಪ, 'ವಾಗ್ಭಟ' ಗ್ರಂಥದ ಪುಟಗಳಲ್ಲಿ ಕಣ್ಣುಗಳನ್ನು ತೊಡಕಿಸಿ ಕುಳಿತಿದ್ದರು. ಆನಂದ-ನಾನು ಕೂಡಿದೆವೆಂದರೆ ಆಯಿತು : ಯಾವಾಗಲೂ ಸಾಹಿತ್ಯ, ಸಂಗೀತ, ನೃತ್ಯ ಮೊದಲಾದ ಲಲಿತಕಲೆಗಳ ವಿಚಾರವನ್ನೆತ್ತಿ ವಾದ-ಚರ್ಚೆ ಗಳನ್ನು ಮಾಡುತ್ತಿರುವೆವು. ಅದೇಕೋ, ಇಂದು ಸಂಗೀತಕಲೆಯ ವಿಷಯ ವನ್ನು ಎತ್ತಿ ನಾನು ಮಾತನಾಡಿದೆ :

"ನಿಜವಾಗಿಯೂ ನೋಡು ಆನಂದ, ಸಂಗೀತಕಲೆಯು ಇಷ್ಟೊಂದು ಬೆಳವಣಿಗೆ ಹೊಂದಿ, ಇಂತಹ ಸುಂದರ ಕುಸುರುಗಳನ್ನು ಪಡೆಯಬೇಕಾದರೆ, ಎಷ್ಟು ಕಾಲ ಕ್ರಮಿಸಿದೆಯೋ ಏನೋ! ಇದರ ಇಂದಿನ ಸ್ವರೂಪವನ್ನು ಕುರಿತು ವಿಚಾರಮಾಡುತ್ತ ಹೋದಂತೆಲ್ಲ, ಮನಸ್ಸು ಆಶ್ಚರ್ಯದಲ್ಲಿ ಮುಳುಗಿ ಹೋಗುವುದು."

ಆನಂದ ಹೇಳಲು ತೊಡಗಿದ :

"ಮಾನವನ ಆನಂದದ ಆಶೆಯ ಕಾರ್ಯವೇ ಹೀಗಿದೆ. ಆನಂದ-ಸಾಧನೆಯ ಆಶೆಗಾಗಿಯೆ ಅದು ಅವನನ್ನು ಕುಣಿಯಲು ಹಚ್ಚಿತು; ಹಾಡಲು ಹಚ್ಚಿತು; ಹಾಡನ್ನು ಸವಿಗೊಳಿಸಬೇಕೆಂದು ಜೊತೆಯ ವಾದ್ಯಗಳನ್ನು ಹುಡು ಕಲು ಹಚ್ಚಿತು. ಅದಕ್ಕೊಂದು ಶಾಶ್ವತವಾದ ಸೌಂದರ್ಯಶಾಸ್ತ್ರವನ್ನು ನಿರ್ಮಿಸಿ ಬರೆಯಲು ಹಚ್ಚಿತು. ಎಲ್ಲ ಲಲಿತಕಲೆಗಳಲ್ಲಿಯೂ ಸಂಗೀತಕಲೆ ಯೆಂಬುದು ಸರ್ವಜನಪ್ರಿಯವಾದುದು; ಸರ್ವಜನಾನಂದಕಾರಿಯಾದುದು!"

ಆನಂದನ ಮಾತಿಗೆ ತಲೆದೂಗಿ ನಾನು ಕೇಳಿದೆ :

" ಆಯಿತಪ್ಪಾ, ನಮ್ಮ ಸಾಹಿತ್ಯಕಲೆಯ ವಿಷಯದಲ್ಲಿ, ' ಸಾಹಿತ್ಯ ಕೇವಲ ಸೌಂದರ್ಯಸಿದ್ಧಿಗಾಗಿ ' ಎಂದೂ ' ಸಾಹಿತ್ಯ ಜೀವನದ ಪ್ರಯೋಜನಕ್ಕಾಗಿ ' ಎಂದೂ ತೀಕ್ಷ್ಣವಾದ ವಾದವು ಎದ್ದುಬಿಟ್ಟಿದೆ. ಈ ಪ್ರಯೋಜನ-ವಾದಿಗಳು ಸಂಗೀತಕಲೆಯ ವಿಚಾರದಲ್ಲಿ ಏನು ಹೇಳುವರು ? ಸಂಗೀತ-ಕಲೆಯು ಕೇವಲ ಆನಂದಸಿದ್ಧಿಗಾಗಿಯೇ ಅಲ್ಲವೇನು ? ಮಾತಿನ ಕೊನೆಯೊಂದಿಗೆ ನಾನು, ಎದುರುಗಡೆ ನನ್ನ ಸಹಜದೃಷ್ಟಿಗಳನ್ನು ಚೆಲ್ಲಿದಾಗ, ಚಿಕ್ಕಪ್ಪ ಓದುವುದನ್ನು ಬಿಟ್ಟು ನಮ್ಮ ಮಾತಿನ ಕಡೆಗೆ ಲಕ್ಷ್ಯಗೊಟ್ಟು ಕುಳಿತಿರುವುದನ್ನು ನೋಡಿದೆ. ಆನಂದ ಹೇಳಲು ತೊಡಗಿದ :

" ಸಂಗೀತವೊಂದೇ ಏಕೆ ? ಎಲ್ಲ ಕಲೆಗಳೂ ಆನಂದಸಿದ್ಧಿಗಾಗಿಯೆಂದೇ ಬೆಳೆದುಬಂದಿವೆ. ಜೀವನಪ್ರಯೋಜನವಾದಿಗಳಿಗೆ, ಈ ಲೋಕದ ವ್ಯವಹಾರ-ಜೀವನದ ಹೊರತು ಇನ್ನೊಂದು ಗೊತ್ತೇ ಇಲ್ಲ. ಎಲ್ಲ ಮಾತನ್ನೂ ಅವರು ಹೊಟ್ಟೆ-ಬಟ್ಟೆಗೇ ಒಯ್ದು ಹಚ್ಚುತ್ತಾರೆ. ಕೂಪದಲ್ಲಿಯ ಕಪ್ಪೆಗಳಂತೆ ಅವರದು ಸಂಕುಚಿತ ದೃಷ್ಟಿಯ ವಿಚಾರ !"

ಚಿಕ್ಕಪ್ಪ ಮೆಲುನಗೆಯ ಮೊಗದಿಂದ ಎದ್ದು ನಮ್ಮ ಬಳಿಗೆ ಬಂದರು. ನಿಂತುಕೊಂಡೇ ಮಾತನಾಡಲು ತೊಡಗಿದರು :

" ನಾನು ಎನ್ನುವುದೆಂದರೆ....ಜೀವನಪ್ರಯೋಜನವಾದಿಗಳ ವಾದ.... ಅಸತ್ಯವೇನೂ ಅಲ್ಲ—ಎಂದು."

ಆನಂದ ಸ್ವಲ್ಪ ಬಿಸಿಯಾದ ಧ್ವನಿಯಲ್ಲಿ ನುಡಿದ :

" ಏನು ? ಅಸತ್ಯವಲ್ಲವೆ ? ನಿಮ್ಮಂತಹ ಹಿರಿಯರೂ ಹೀಗೆ ಹೇಳುವು-ದೆಂದರೆ ಆಶ್ಚರ್ಯಕ್ಕಿಂತ ಹೆಚ್ಚಾಗಿ ಅಸಮಾಧಾನವೆನಿಸುತ್ತದೆ ನನಗೆ."

ಸಹಜಸ್ವರದಲ್ಲಿ ಚಿಕ್ಕಪ್ಪ ಹೇಳಿದರು :

" ಅಸಮಾಧಾನವೆನಿಸುವ ಕಾರಣವೇನೂ ಇಲ್ಲ. ನನ್ನಷ್ಟು ಹಿರಿಯ ವಯಸ್ಸಿನವರಾದಾಗ, ಅನುಭವದಿಂದ ನೀವೂ ನನ್ನ ಅಭಿಪ್ರಾಯಕ್ಕೇ ಬಂದು ನಿಲ್ಲಬಹುದು. ಕಲೆಗಳು ಬೆಳೆದುದು ಪ್ರತ್ಯಕ್ಷ ಜೀವನದ ಪ್ರಯೋಜನಕ್ಕಾಗಿ ಅಲ್ಲದೆ, ಕಲ್ಪಿತವಾದ ಆನಂದದ ಸಿದ್ಧಿಗಾಗಿ ಅಲ್ಲ !"

ಬಳಿಯಲ್ಲಿದ್ದ ಕುರ್ಚಿಯ ಮೇಲೆ ಕುಳಿತುಕೊಂಡು, ಚಿಕ್ಕಪ್ಪ ಮಾತನ್ನು ಮುಂದುವರಿಸಿದರು :

"ನೋಡು ಆನಂದಾ, ಭಾವನಾವಶನಾಗಿ ಮುಖವನ್ನು ಕಂಪಗೆ ಮಾಡ ಬೇಡ. ಹೊಟ್ಟೆಗೆ ಹಿಟ್ಟು, ಮೈಗೆ ಬಟ್ಟೆಗಳನ್ನು ದೊರಕಿಸುವುದಕ್ಕಾಗಿಯೇ ಮಾನವನ ಬುದ್ಧಿ ಹಲವು ಬಗೆಯ ಚಮತ್ಕಾರಗಳನ್ನು ಕಂಡುಹಿಡಿದಿದೆ. ಕಲೆ ಗಳೆಂದರೂ ಇಂತಹ ಬುದ್ಧಿಯ ಚಮತ್ಕಾರಗಳೇ! ಅಪಕ್ವಪದಾರ್ಥಗಳನ್ನು ತಿಂದು ಜೀವಿಸುತ್ತಿದ್ದ ಮಾನವ, ವಿವಿಧ ಪಕ್ವಾನ್ನಗಳನ್ನು ನಿರ್ಮಿಸಿಕೊಂಡುದು ಆತನ ಒಂದು ಬುದ್ಧಿಯ ಚಮತ್ಕಾರ. ಪ್ರಕೃತಿಯ ವಿಕೃತಿಗೆ ಔಷಧಿಗಳನ್ನು ಕಂಡುಹಿಡಿದುದೂ ಅವನ ಚಮತ್ಕಾರ. ಹಾಗೆಯೇ ಮಾನವನ ಕಣ್ಣು, ಕಿವಿ, ಮನಸ್ಸುಗಳ ಬಯಕೆಗಾಗಿ ಕಲೆಗಳನ್ನು ನಿರ್ಮಿಸಿದುದೂ ಅವನ ಬುದ್ಧಿಯ ಕೈವಾಡ. ಇದರಲ್ಲಿ ನಿಮ್ಮ ಆದರ್ಶ—ಆನಂದಸಿದ್ಧಿಯ ಮಾತೇ ಇರುವುದಿಲ್ಲ!"

ರೇಗಿದ ಧ್ವನಿಯಲ್ಲಿ ಆನಂದ ನುಡಿದ:

"ಆನಂದಸಿದ್ಧಿಯ ಮಾತೇ ಇಲ್ಲದಿದ್ದರೆ, ಕಲೆಗಳು ಇಷ್ಟರವರೆಗೆ ಬೆಳೆದು ಬದುಕುತ್ತಲೇ ಇರಲಿಲ್ಲ. ಎಂದೋ ಹುಡಿಗೂಡಿ ಹೋಗುತ್ತಿದ್ದುವು!"

"ನಿನ್ನಂತೆಯೇ ನಾನೂ ಹೇಳುತ್ತೇನೆ: ಜೀವನಪ್ರಯೋಜನ ಇರದೇ ಹೋಗಿದ್ದರೆ, ಕಲೆಗಳು ಇದುವರೆಗೆ ಬೆಳೆದುಬಾಳುತ್ತಲೆ ಇರಲಿಲ್ಲ. ಎಂದೋ ಕಣ್ಮರೆಯಾಗಿ ಹೋಗಿಬಿಡುತ್ತಿದ್ದುವು!"

ನಾನು ವಿನಯದ ಸ್ವರದಲ್ಲಿ ಕೇಳಿದೆ:

"ಕಲೆಗಳಲ್ಲಿ ಜೀವನದ ಪ್ರಯೋಜನ ಏನಿರುವುದು ಚಿಕ್ಕಪ್ಪಾ! ಆನಂದ ಸಿದ್ಧಿಗಾಗಿಯೇ ಕಲೆಗಳಲ್ಲವೇ?"

"ಇಲ್ಲಿಯೇ ನೋಡು, ನೀವು ತಪ್ಪುವದು! ಲೋಕದ ಪ್ರತಿಯೊಂದು ಚೇಷ್ಟೆಯೂ ಹೊಟ್ಟೆ-ಬಟ್ಟೆಗಳ ಅನುಕೂಲತೆಗಳನ್ನು ಹುಡುಕುವುದಕ್ಕಾಗಿಯೇ ಇರುವುದು. ಡೊಂಬರವನು ಗಣೀಯೇರಿ ಲಾಗಹೊಡೆಯದೇ ಹೋದರೆ, ಉಳ್ಳವರ ಜೇಬಿನ ದುಡ್ಡು ಆತನ ಜೇಬಿಗೆ ಹೇಗೆ ಹೋದೀತು ಹೇಳು! ಹಣ-ವಿಲ್ಲದಿರುವವರಿಗೆ ಹೊಟ್ಟೆ—ಬಟ್ಟೆಗಾಗಿ ಹಣವು ಬೇಕು. ಲಾಗ ಹೊಡೆಯುವ ಡೊಂಬನಿಗೆ ದೇಹಶ್ರಮವಲ್ಲದೆ ಯಾವ ಆನಂದವೂ ಇರದು. ಹೆಚ್ಚಾಗಿ ಹಣವು ದೊರೆತರೆ ಮಾತ್ರ ಆತನ ಹೊಟ್ಟೆಯ ಚಿಂತೆ ತಪ್ಪಿ, ಅವನಿಗೆ ಆನಂದ ವಾದೀತು."

ಆನಂದ ಕೇಳಿದ :

“ ಕಲೆಗಳಿಗೆ ನೀವು ಡೊಂಬರ ಲಾಗವನ್ನು ಹೋಲಿಸುತ್ತೀರಾ ?”

“ ಇದರಲ್ಲಿ ತಪ್ಪೇನು ? ಮಾನವನ ಬುದ್ಧಿಯ ಲಾಗಗಳೇ ಕಲೆಗಳೆನಿಸಿ ಕೊಳ್ಳುವುವು. ಒಂದೊಂದು ಬಗೆಯ ಲಾಗ ಒಬ್ಬೊಬ್ಬರ ಅಭಿರುಚಿಗೆ ಬೇಕೆನಿಸುವುದು. ಬೇಕೆನಿಸಿದವರೆಲ್ಲ ಆ ಲಾಗ ಹೊಡೆಯುವವರಿಗೆ ಪ್ರತಿಫಲ ವಾಗಿ ಏನನ್ನಾದರೂ ಕೊಟ್ಟೇ ಕೊಡುವರು!”

ಒಮ್ಮೆಲೆ ಬೀದಿಯಲ್ಲಿ ಹಾರ್ಮೋನಿಯಮ್ ಬಾರಿಸುವ ಇಂಪಾದ ಧ್ವನಿ ಕೇಳಿಸಿತು. ಆ ಧ್ವನಿಯೊಂದಿಗೆ ಕೋಮಲಕಂಠವನ್ನು ಬೆರಸಿ ಹಾಡುವ ಹಾಡೂ ಕೇಳಿಸಲು ತೊಡಗಿತು. ಸಂಗೀತವೆಂದರೆ ನಮ್ಮ ಚಿಕ್ಕಪ್ಪನಿಗೆ ಪ್ರಾಣ. ಎಂತಹ ಸಂಗೀತವೇ ಇರಲಿ, ಕೇಳಲಿಕ್ಕೆ ಅವರ ಕಿವಿಗಳು ತವಕಿಸುವುವು. ಈಗ ಕೇಳಿಸಿದ ಸಂಗೀತ ಅವರ ಮನಸ್ಸನ್ನು ಸಂಪೂರ್ಣವಾಗಿ ಸೆಳೆದಿರಬೇಕು. ಎಂತಲೇ ಮಾತನ್ನು ಅಷ್ಟಕ್ಕೆ ನಿಲ್ಲಿಸಿ, ಚಟ್ಟನೆ ಎದ್ದು ಹೊರಗೆ ಹೊರಟರು. ಆನಂದನಿಗೆ ಸಂಗೀತವೆಂದರಾಯಿತು; ಊಟ-ನಿದ್ರೆಯ ಪರಿವೆ ಇಲ್ಲದೆ ಕೇಳು ವನು; ಆದುದರಿಂದ ಅವನೂ ಕುತೂಹಲಭಾವದಿಂದ ಎದ್ದು ಹೊರಗೆ ಹೊರ ಟನು. ನಾನು ಅವನ ಹಿಂದಿನಿಂದಲೇ ಹೊರಟೆ.

ನಾವೆಲ್ಲ ಹೆಬ್ಬಾಗಿಲ ಮುಂಗಟ್ಟೆಗೆ ಹೋಗಿ ನಿಲ್ಲುವುದರಲ್ಲಿಯೇ, ಆ ಬೀದಿಯ ಹಾಡುಗಾರರು ನಮ್ಮ ಮನೆಯ ಬಾಗಿಲಿಗೇ ಬಂದರು. ಕೊರಳಿಗೆ ಹಾರ್ಮೋನಿಯಮ್ ಹಾಕಿಕೊಂಡು ಬಾರಿಸುತ್ತಲಿದ್ದ ಗಂಡುಸಿನ ವಯಸ್ಸು ಐವತ್ತರ ಸಮೀಪಕ್ಕೆ ಬಂದಿರಬಹುದು. ಉಟ್ಟ ಧೋತರ ಹಲವಾರು ತೇಪೆ ಗಳಿಂದ ಕೂಡಿದ್ದಿತು. ತೊಟ್ಟ ಅಂಗಿಯ ಹರಕುಗಳಲ್ಲಿ, ಆತನ ಕಪ್ಪು ಮೈ ಅಲ್ಲಲ್ಲಿ ಕಾಣುತ್ತಿದ್ದಿತು. ಎಣ್ಣೆಗಾಣದೆ ಪೊದೆಯಾಗಿ ಬೆಳೆದ ಕೂದಲುಳ್ಳ ತಲೆಯ ಮೇಲೆ, ಒಂದು ಹಳೆಯ ಟೋಪಿ ಇದ್ದಿತು. ಬಡಕಲಾದ ದೇಹ. ಬಡತನದ ಲಕ್ಷಣಗಳು ಅಂಗಾಂಗದಲ್ಲಿಯೂ ಮೂಡಿನಿಂತಿದ್ದುವು. ಕೈಬೆರಳು ಮಾತ್ರ ಮಿಂಚಿನಗತಿಯಲ್ಲಿ, ಹಾರ್ಮೋನಿಯಮಿನ ಸ್ವರಸ್ಥಾನಗಳ ಮೇಲೆ ಓಡಾಡುತ್ತಿದ್ದುವು.

ಆತನ ಹಿಂದೆ ಐದಾರಡಿ ದೂರದಲ್ಲಿ ಒಬ್ಬ ಹುಡುಗಿ ನಿಂತಿದ್ದಳು.

ವಯಸ್ಸು ಹದಿಮೂರು ಹದಿನಾಲ್ಕು ಇರಬಹುದು. ಹರಕು ಸೀರೆ; ಮಾಸಿದ ಕುಪ್ಪುಸ. ಕೊರಳಲ್ಲಿ ಎಂತಹವೋ ಕಾಜಿನಮಣಿಗಳ ಸರವೊಂದು. ಮುಖದಲ್ಲಿ ದೈನ್ಯಭಾವ ತುಂಬಿತುಳುಕುತ್ತದೆ. ತಾವಾಗಿಯೆ ಸುರಿಯುತ್ತಿದ್ದ ಕಂಬನಿಗಳನ್ನು ಹುಡುಗಿ ಆಗಾಗ ಸೆರಗಿನಿಂದ ಒರಸಿಕೊಳ್ಳುತ್ತಿದ್ದುದನ್ನು ನಾನು ನೋಡಿದೆ. ನಮ್ಮ ಸಂಗೀತದ ಆತುರವನ್ನು ಆ ಹಾಡುಗಾರ ಅರಿತುಕೊಂಡನೇನೋ! ಖಮಾಜ ರಾಗದಲ್ಲಿ ಮೀರಾಬಾಯಿಯ ಭಜನದ ಪಲ್ಲವಿಯೊಂದನ್ನು ನುಡಿಸಲು ತೊಡಗಿದ. ಎರಡು ಮೂರು ಸಲ ನುಡಿಸಿದರೂ ಹಿಂದೆ ನಿಂತ ಹುಡುಗಿ ಹಾಡುಹೇಳುವುದಕ್ಕೆ ಮುಂದೆ ಬರಲಿಲ್ಲ. ಆಗ ಆ ಹಿರಿಯ, ಕೋಪದ ನೋಟಗಳಿಂದ ಹುಡುಗಿಯ ಕಡೆಗೆ ನೋಡಿದ. ಹುಡುಗಿ ಮತ್ತೊಂದು ಸಲ ಕಣ್ಣೀರನ್ನು ಒರಸಿಕೊಂಡಳು. ಜಡವಾದ ಹೆಜ್ಜೆಗಳನ್ನು ಎತ್ತಿ ಇಡುತ್ತ ಮುಂದೆ ಬಂದಳು. ಹಾರ್ಮೋನಿಯಮ್ ಸ್ವರಗಳನ್ನು ಮರೆಯಿಸಿಬಿಡುವಂತಹ ಮಂಜುಲಕಂಠದಿಂದ ಹಾಡಲು ತೊಡಗಿದಳು. ಎಂತಹ ಸವಿಯಾದ ಸಂಗೀತವದು ! ಸಂಗೀತದ ಅಭಿರುಚಿಯಿಲ್ಲದವರನ್ನೂ ತಡೆದು ನಿಲ್ಲಿಸಿ ಕೇಳಲು ಹಚ್ಚುವಂತಹ ಗಂಧರ್ವಗೀತ ! ಕಾಡಿನ ಮಲ್ಲಿಗೆಯಂತೆ ಸಹಜ ಸೌಂದರ್ಯದಿಂದ ಕೂಡಿದ ಸವಿಹಾಡು ! ಚಿಕ್ಕಪ್ಪ ಮುಗ್ಧರಾಗಿ ಕೇಳುತ್ತಿದ್ದರು. ಆನಂದನ ಮೈ ಜುಮ್ಮುದಟ್ಟುತ್ತಿರುವುದು ನನಗೆ ಕಾಣುತ್ತಿದ್ದಿತು. ಹುಡುಗಿ ಕುರೂಪಿಯೇನೂ ಅಲ್ಲ. ಸಿರಿವಂತಿಕೆಯ ಉಡಿಗೆ-ತೊಡಿಗೆಗಳಿದ್ದರೆ, ಅವಳು ಸುಂದರಿಯೇ ಎನಿಸಿಕೊಳ್ಳಬಹುದಾಗಿತ್ತು. ಹಾಡುವಾಗಲೂ ಕಂಬನಿ ಕೆನ್ನೆಗಳ ಮೇಲೆ ಇಳಿಯುತ್ತಿದ್ದುವು. ನಡುನಡುವೆ ಹಾರ್ಮೋನಿಯಂ ಬಾರಿಸಲು ಎಡೆಕೊಟ್ಟಂತೆ ಮಾಡಿ ಕಣ್ಣನ್ನು ಒರಸಿಕೊಳ್ಳುವಳು. 'ಮೀರಾಕೇ ಪ್ರಭು ಗಿರಿಧರ ನಾಗರ' ದ ಅಂಕಿತದೊಂದಿಗೆ ಹಾಡು ಮುಗಿಯಿತು. ಹುಡುಗಿ ಹಿಂದೆ ಸರಿದು ಸೋತವಳಂತೆ ಕುಳಿತುಬಿಟ್ಟಳು.

ಹಾಡುಗಾರ ಹಾರ್ಮೋನಿಯಂ ಬಾರಿಸುತ್ತ, ತಾನೇ ಹಾಡಲು ತೊಡಗಿದನು. ಗಡುಸಾದ ಸ್ವರ. ಹುಡುಗಿಯ ಸಂಗೀತ ಕೇಳಿದ ನನ್ನ ಕಿವಿಗೆ ಅದು ರಸಹೀನವೆನಿಸಲು ತೊಡಗಿತು. ಆದರೂ ಚಿಕ್ಕಪ್ಪ, ಆನಂದ, ತನ್ಮಯರಾಗಿಯೇ ಕೇಳುತ್ತಿದ್ದರು. ನಾನು ಹುಡುಗಿಯ ಕಡೆಗೆ ನನ್ನ ಮೆಚ್ಚುಗೆಯ

ನೋಟವನ್ನು ಹೊರಳಿಸಿದೆ. ಹುಡುಗಿ ಬಿಕ್ಕಿ ಬಿಕ್ಕಿ ಅಳುತ್ತಿರುವುದನ್ನು ಕಂಡು ಕಾತರಗೊಂಡೆ.

ಹಿರಿಯ ಹಾಡುಕಾರನ ಹಾಡು ಮುಗಿಯಿತು. ಚಿಕ್ಕಪ್ಪನಿಗೆ ಹುಡುಗಿಯ ಬಾಯಿಂದ ಮತ್ತೊಂದು ಹಾಡನ್ನು ಹಾಡಿಸಬೇಕೆಂದು ಆಶೆಯುಂಟಾಗಿರಬಹುದು. ಹಾಡು ಮುಗಿದೊಡನೆಯೇ ನಾನು, ಆ ಹಿರಿಯ ಹಾಡು-ಗಾರನನ್ನು ಕೇಳಿದೆ :

" ಈ ಹುಡುಗಿ ನಿನ್ನ ಮಗಳೇನು ?"

" ಹೌದು ರಾವ್‌ಸಾಹೇಬ್ !"

" ಆಗಿನಿಂದಲೂ ನಾನು ನೋಡುತ್ತಿದ್ದೇನೆ; ಈಕೆ ಅಳುತ್ತಿದ್ದಾಳೇಕೆ ?"

" ಏನು ಮಾಡೂದು ನನ್ನ ತಂದೇ ! ನಮ್ಮ ಬಡವರ ಬಾಳೆಲ್ಲಾ ಅಳತಾ ಅಳತಾನೇ ನಡೆದಿರೂದು !"

ಚಿಕ್ಕಪ್ಪ ಕುತೂಹಲದಿಂದ ಕೇಳಿದರು :

" ಯಾಕೆ ? ಈಗ ಅಳುವಂತಹ ಸಂದರ್ಭ ಏನು ಬಂದಿದೆ ಈಕಿಗೆ ? ಇದೇ ಈಗ ಎಷ್ಟೊಂದು ಸವಿಯಾಗಿ ಹಾಡಿದಳು ! ಏನಮ್ಮಾ? ಏನಾಗಿದೆ ನಿನಗೆ ? ನೀರೇಕೆ ಕಣ್ಣಲ್ಲಿ ?"

ಹುಡುಗಿಯ ಮುಖ ಕೆಂಪಗಾಯಿತು. ಕಂಬನಿಗಳೂ ಧಾರೆಗಟ್ಟಿದುವು. ಅಳುವು ಹೊರಗೆ ಬಂದುಬಿಟ್ಟಿತು. ನಾವು ಮೂವರೂ ಕುತೂಹಲಿಗಳಾದೆವು. ಚಿಕ್ಕಪ್ಪ ಹಾಡುಗಾರನನ್ನು ಕೇಳಿದರು :

" ಯಾಕೆ ? ಏನಾಗಿದೆಯಿವಳಿಗೆ ? ನೀನು ಸಿಟ್ಟು-ಗಿಟ್ಟು ಮಾಡಿದೆಯೇನು ?"

" ನಾ ಏನು ಸಿಟ್ಟು ಮಾಡೂದೈತಿ ತಂದೆ ! ನಮ್ಮ ಮ್ಯಾಲೆ ದೈವಾನೇ ಸಿಟ್ಟುಮಾಡಿ ಬಿಟ್ಟೈತಿ. ಇವರ ತಾಯಿಗೆ ಜ್ವರಬಂದು ಹದಿನೈದು ದಿವಸ ಆಯ್ತುರಿ. ಮೈಮ್ಯಾಗ ಎಚ್ಚರಿಲ್ಲಾ ಏನಿಲ್ಲಾ ! ಈಗ ನಾಕುದಿನದಿಂದ ಅಂತೂ ತೀರ ನಿತ್ರಾಣ ಬಂದುಬಿಟ್ಟೈತಿ. ಕೈಕಾಲು ಸಹಿತ ಎಳಕೊಳ್ಳದೇ ಬಿದ್ದಾಳ !"

ಕರುಣಾಧ್ವನಿಯಲ್ಲಿ ಚಿಕ್ಕಪ್ಪ ಕೇಳಿದರು :

" ಎಲ್ಲಿ ಇದ್ದಾಳೆ ಆಕೆ ? ಔಷಧವನ್ನು ಏನು ಕೊಡಿಸುತ್ತಿದ್ದೀರಿ ?"

"ಎಲ್ಲಿ ಔಸದ ಸಿಗಬೇಕು ತಂದೇ....ನಮ್ಮಂತವರಿಗೆ ! ಹೊಟ್ಟೀ ತುಂಬಿ ಕೊಳ್ಳಿಕ್ಕಂತ ಈ ಊರಿಗೆ ಬಂದೀವಿ; ಊರಹೊರಗ ಒಂದು ಹಾಳು ಗುಡಿಯ ಪೌಳಿಯೊಳಗ ಇಳಕೊಂಡೀವಿ. ಅಲ್ಲೇ ಮಲಕೊಂಡಾಳ ಆಕಿ. ಈಗ ಮೂರುದಿನ, ಆಕೀ ಹತ್ತರನs ಆರಯ್ಕೀ ಮಾಡತs ಕೂತೇವರಿ. ಆದರ ಸುಮ್ಮಗs ಅಲ್ಲಿ ಕೂತುಕೊಂಡರ, ಮಿಕ್ಕವರ ಹೊಟ್ಟೆಯೊಂದು ಕೇಳಬೇಕಲ್ರಿ! ನಾಕ್ಕೈದು ಹುಡುಗರು ಹಸಿವಿಯಿಂದ ವಿಲಿವಿಲಿ ಒದ್ದಾಡತs ಬಿದ್ದಾವರಿ ! ಮೂರು ದಿನಾ ಆಯ್ತು, ಹೊಟ್ಟೆತುಂಬ ಕೂಳು ಯಾರಿಗೂ ಇಲ್ಲ. ಇವೊತ್ತು ತೀರ ಬರಿಗೈಯಾತು. ಜ್ವರದಾಕಿಗೆ ಹಾಕಲಿಕ್ಕೆ ಚಹಾಕ್ಕ ಕೂಡ ಗತಿ ಇಲ್ಲ ದ್ಹಾಂಗಾತು. ಅಂತs ನಿರ್ವಾ ಇಲ್ಲದs ಎದ್ದು, ಈಗ ತಿರಕೊಳ್ಳಲಿಕ್ಕೆ ಬಂದೀವಿ. ಈಕೀ ಹಿರಿಯ ಹೆಣ್ಣುಮಗಳು. ತಾಯಿಯ ಆರಯ್ಕೀ ಎಲ್ಲಾ ಈಕಿನೇ ಮಾಡತಾಳ್ರಿ! ತಾಯಿ ಬದುಕುವ ಆಶೆ ಇಲ್ಲಂಬುದೂ ಈಕೀಗೆ ಗೊತ್ತಾಗಿ ಹೋಗೇಯ್ತಿರಿ. ಅಂತಲೇ ಹೊರಗ ಹೊಂಟಾಗಿನಿಂದಲೂ ಹಾಂಗs ಕಣ್ಣೀರು ಸುರಿಸುತಾನೇ ಹೊಂಟಾಳ ! ಅಂಥಾದರೊಳಗs, ಸ್ವರಾ ತಗದು ಹಾಡತಾಳ. ಇಲ್ಲದಿದ್ದರ, ಹಸಿವಿಗೆ ಏನು ಗತಿ ತಂದೇ !" ಮಾತಿನ ಕೊನೆ ಯೊಂದಿಗೆ ಆತ ನಿಟ್ಟುಸಿರಿಟ್ಟ. ಹುಡುಗಿ ಬಿಕ್ಕಿ ಬಿಕ್ಕಿ ಅಳಲು ಮೊದಲು ಮಾಡಿದಳು. ಹಾಡಿದರೆ ಪ್ರಪಂಚದ ದುಃಖವನ್ನೇ ಮರೆಯಿಸಿಬಿಡಬಲ್ಲ ಆ ಎಳೆಯ ಸಂಗೀತಗಾತಿ, ತಾನೇ ಈಗ ದುಃಖದ ಪ್ರತಿಮೆಯಾಗಿದ್ದಳು.

ಚಿಕ್ಕಪ್ಪ ಅರ್ಥಪೂರ್ಣವಾದ ದೃಷ್ಟಿಯಿಂದ ನನ್ನ ಕಡೆಗೂ ಆನಂದನ ಕಡೆಗೂ ನೋಡಿದರು. ಮಾತನೇನೂ ಆಡದೆ, ಒಳಗೆ ಹೋದರು. ಹಾಡು-ಗಾರನ ಕೈ ಹಾರ್ಮೋನಿಯಮಿನ ಮೇಲೆ ಆಡಿಯೇ ಆಡುತ್ತಿದ್ದಿತು. ಎರಡು ಮೂರು ನಿಮಿಷಗಳಲ್ಲಿಯೇ ಚಿಕ್ಕಪ್ಪ ಚಿಕ್ಕಮ್ಮನೊಂದಿಗೆ ಹೊರಗೆ ಬಂದರು. ಚಿಕ್ಕಮ್ಮನ ಕೈಯಲ್ಲಿರುವ ಮೊರದಲ್ಲಿ ಸುಮಾರು ಒಂದೂಕಾಲು ಸೇರಿನಷ್ಟು ಅಕ್ಕಿಯಿದ್ದಿತು. ಹಾಡುಗಾರ ಆಚ್ಚರಿಯ ನೋಟದಿಂದ ಅದನ್ನು ನೋಡಿದ. ಮುಖದ ಮೇಲೆ ಸಂದೇಹರೇಷೆಯೂ ಮೂಡಿನಿಂತಿತು. ಚಿಕ್ಕಪ್ಪ ಹೇಳಿದರು :

"ಆ ಅಕ್ಕಿಯನ್ನು ತೆಗೆದುಕೊಳ್ಳು. ಇದೋ, ಈ ಎರಡು ರೂಪಾಯಿ ಹಿಡಿ ! ಇಂದು ನೀವು ಭಿಕ್ಷೆಬೇಡುವುದನ್ನು ಇಷ್ಟಕ್ಕೆ ನಿಲ್ಲಿಸಿ, ನಿಮ್ಮ ಬೀಡಾರಕ್ಕೆ

ನಡೆದುಬಿಡಿರಿ., ಮೊದಲು ಊಟದ ವ್ಯವಸ್ಥೆ ಮಾಡಿಕೊಳ್ಳಿರಿ! ಆ ಜ್ವರ ಬಂದ ಹೆಣ್ಣುಮಗಳನ್ನು ಸರಕಾರೀ ದವಾಖಾನೆಗೆ ಕಳುಹುವುದು ಸಾಧ್ಯ ವಿದೆಯೇ ನೋಡಿರಿ !"

ಈಗ ಆ ಹಾಡುಗಾರನ ಕಣ್ಣಿಂದಲೂ ಹನಿಗಳು ಇಳಿದುವು. ಕಂಠವು ಬಿಗಿದು ಬಂದಿತು. ಹಾಗೆಯೆ ಕಂಪಿಸುವ ಕಂಠದಲ್ಲಿ ಹೇಳಲು ತೊಡಗಿದ :

"ನಮ್ಮಂಥಾ ಬಡವರಿಗೆ ಯಾವ ದವಾಖಾನ್ಯಾಗ ಜಾಗಾ ಸಿಗತೈತಿರಿ ! ಇರೂತನಕಾ ಈ ಲೋಕದ ನರಕದಾಗಿರಬೇಕು; ಸತ್ತಮ್ಯಾಗ ಆ ಲೋಕದ ನರಕದಾಗ ಇರಬೇಕು !"

ಮಾತಿನ ಕೊನೆಯೊಂದಿಗೆ ಅಕ್ಕಿಯನ್ನು ಹಾಕಿಸಿಕೊಂಡು, ರೂಪಾಯಿ ಗಳನ್ನೂ ತೆಗೆದುಕೊಂಡ. ಕೃತಜ್ಞತೆಯ ದೃಷ್ಟಿಗಳಿಂದ ನಮ್ಮೆಲ್ಲರನ್ನೂ ನೋಡಿದ. ಆನಂದ ಮುಖವನ್ನು ಬಾಡಿಸಿಕೊಂಡು, ನಿರುಪಾಯಭಾವದಿಂದ ಮೌನಿಯಾಗಿ ನಿಂತುಬಿಟ್ಟಿದ್ದ. ಆ ಹಾಡುಕಾರನ ಕರುಳುಕರಗಿಸುವಂತಹ ಬಾಳಿನ ಕತೆಯನ್ನು ಕೇಳಿ, ನಾನೂ ಕಂಗೆಟ್ಟವನಂತಾಗಿದ್ದೆ. ಹಾರ್ಮೋನಿ ಯಮನ್ನು ಮೌನಿಯಾಗಿಸಿ, ಹಾಡುಗಾರ ನಮ್ಮೆಲ್ಲರನ್ನೂ ನಮಸ್ಕರಿಸಿ ಮರಳಿ ಹೊರಟ. ಹುಡುಗಿಯೂ ಎದ್ದು, ನಡೆಯಲಾರದೆ ಮುಂದೆ ನಡೆದಳು. ನಮ್ಮೆಲ್ಲರ ದೃಷ್ಟಿ ಅವರ ಕಡೆಗೇ ಇದ್ದಿತು.

ಅವರು ಹತ್ತೆಂಟು ಹೆಜ್ಜೆ ಮುಂದೆ ಸಾಗಿರಬಹುದು; ಆಗಲೇ ಚಿಕ್ಕಪ್ಪ ಕೂಗಿದರು :

"ಇಲ್ಲಿ ನೋಡಪ್ಪಾ, ಸ್ವಲ್ಪ ತಡೆ !"

ಇಬ್ಬರೂ ತಿರುಗಿ ನಿಂತರು. ಆಗ ಚಿಕ್ಕಪ್ಪ ಹೇಳಿದರು :

"ನಿನ್ನ ಹೆಂಡತಿಯ ಪ್ರಕೃತಿಯನ್ನು ನಾನು ಸ್ವಲ್ಪ ನೋಡಬೇಕೆಂದು ಮಾಡಿದ್ದೇನೆ. ನಾನೂ ಬರುತ್ತೇನೆ. ಸ್ವಲ್ಪ ತಡೆಯಿರಿ !"

ಕೂಡಲೆ ಚಿಕ್ಕಪ್ಪ ಒಳಗೆ ಹೋದರು. ಒಂದೆರಡು ನಿಮಿಷಗಳಲ್ಲಿಯೇ ತಮ್ಮ ಔಷಧಿಯ ಕೈಚೀಲವನ್ನು ಹಿಡಿದುಕೊಂಡು ವೇಗವಾಗಿಯೇ ಹೊರಗೆ ಬಂದರು. ಮತ್ತೊಂದು ಸಲ ನಮ್ಮಿಬ್ಬರ ಕಡೆಗೂ ಧ್ವನಿಪೂರಿತ ದೃಷ್ಟಿಗಳನ್ನು ಬೀರಿ ಹೊರಟುನಡೆದರು. ಮುಂದೆ ಮುಂದೆ ಬೀದಿಯ ಹಾಡುಕಾರರು—ಹಿಂದೆ

ಚಿಕ್ಕಪ್ಪ. ಅವರು ಕಣ್ಮರೆಯಾದೊಡನೆಯೇ, ಆನಂದ ನಾನು ಒಳಗೆ ಹೋದೆವು. ಆಮೇಲೆ ಆನಂದ ಬಹಳ ವೇಳೆಯ ವರೆಗೇನೂ ಕುಳ್ಳಿರಲಿಲ್ಲ. ಅಂದು ಸಂಜೆಯ ಆರು ಗಂಟೆಗೆ ಮಿತ್ರಸಂಘದಲ್ಲಿ "ಸೌಂದರ್ಯ-ಆನಂದ" ಎಂಬ ವಿಷಯವನ್ನು ಕುರಿತು ಅವನ ಉಪನ್ಯಾಸವಿದ್ದಿತು. ನನಗೂ ಬರಲಿಕ್ಕೆ ಹೇಳಿ ಮನೆಗೆ ತೆರಳಿದ.

‡ ‡ ‡ ‡ ‡

ಚಿಕ್ಕಪ್ಪ ಮನೆಗೆ ಮರಳಿ ಬಂದಾಗ, ಮಧ್ಯಾಹ್ನದ ಒಂದು ಗಂಟೆ ಮೀರಿಹೋಗಿದ್ದಿತು. ನಾವೆಲ್ಲ ಊಟಕ್ಕಾಗಿ ಅವರ ದಾರಿಯನ್ನು ಕಾಯುತ್ತಾ ಕುಳಿತಿದ್ದೆವು. ಚಿಕ್ಕಪ್ಪನ ಮುಖ ಬಾಡಿ ಬತ್ತಿಯಾಗಿದ್ದಿತು. ಬಂದವರೇ ಉಸ್ಸೆಂದು ನಿರ್ವಿಣ್ಣರಾಗಿ ಕುಳಿತು ಹೇಳಿದರು :

"ನಾವು ಹೋಗುವುದರಲ್ಲಿಯೆ ಪಾಪ, ಆ ಹೆಣ್ಣುಮಗಳ ಪ್ರಾಣ ಹೋಗಿಬಿಟ್ಟಿದ್ದಿತು. ಹುಡುಗರೆಲ್ಲ ಭೋಯೆಂದು ಅಳುತ್ತ ಕುಳಿತಿದ್ದುವು. ನಾವೆಲ್ಲ ಹೋದುದನ್ನು ಕಂಡು ಇನ್ನಿಷ್ಟು ಅಳಲುತೊಡಗಿದುವು. ಬೆಳಗಿನಲ್ಲಿ ಇಲ್ಲಿ ಹಾಡಿದ ಹುಡುಗಿ, ತಾಯ ದೇಹದ ಮೇಲೆ ಬಿದ್ದು, ಮೈಮರೆತಳು. ನೀರು ಕುಡಿಸಿ ಉಪಚಾರ ಮಾಡಿದ ಮೇಲೆ ಚೇತರಿಸಿಕೊಂಡಳು. ಆ ಹಾಡು-ಕಾರನಿಗೊ, ತಾನೇನು ಮಾಡಬೇಕೆಂಬುದೇ ತಿಳಿಯದಂತಾಯಿತು. ಅಕ್ಕ-ಪಕ್ಕದ ಜನ ಬಂದು ನಿಂತು, ನಿಂತು, ಕುತೂಹಲದಿಂದ ನೋಡಿಹೋಗುತ್ತಿದ್ದರೇ ಹೊರತು, ಯಾರೂ ಯಾವ ನೆರವನ್ನು ಕೊಡಲೂ ಮುಂದುವರಿಯಲಿಲ್ಲ. ನಾನೇ ಹತ್ತಿರದಲ್ಲಿಯೇ ಇದ್ದ ನಮ್ಮ ದೇಶಪಾಂಡೆಯವರ ಮನೆಗೆ ಹೋಗಿ ಇಪ್ಪತ್ತು ರೂಪಾಯಿ ಕೈಗಡ ಪಡೆದುಕೊಂಡು, ಮುಂದಿನ ವ್ಯವಸ್ಥೆ ಮಾಡಿ-ಕೊಳ್ಳಲು ಹೇಳಿಕೊಟ್ಟು ಬಂದೆ. ಇಲ್ಲದೆ ಹೋಗಿದ್ದರೆ, ಹೆಣವನ್ನು ಮಸಣಕ್ಕೆ ಸಾಗಿಸುವ ವೆಚ್ಚಕ್ಕಾಗಿಯೂ, ಹಣ ಕೂಡಿಸಲು ಆ ತಂದೆ-ಮಗಳು ಬೀದಿ ಬೀದಿ ಹಾಡುತ್ತ ಅಲೆಯಬೇಕಾಗುತ್ತಿತ್ತು !"

ಕೇಳಿ ಚಿಕ್ಕಮ್ಮ ಕಂಬನಿಗರೆದರು. 'ಬಡವರ ಬಳಿ ಪಾಪ ! ಯಾವ ಗುಣವಿದ್ದರೂ ಉಪಯೋಗವೇನು ? ಹಸಿವು ಸಾವುಗಳ ಎದುರು ಸಂಗೀತ,

ಹಾಡು ಇವೆಲ್ಲಾ ಏನು ಮಾಡಬಲ್ಲವು ?' ಎಂದು ಉಸಿರನ್ನು ಹಾಕಿದರು. ಅಂದು ಮಲಗಿ ನಿದ್ದೆ ಮಾಡುವವರೆಗೂ ಮನದಲ್ಲಿ ಆ ಹಾಡುವ ಹುಡುಗಿಯ ಚಿತ್ರವೇ ಮೂಡಿನಿಂತಿದ್ದಿತು. ನಿದ್ದೆಯಲ್ಲಿರುವಾಗ ಬಿದ್ದ ಕನಸಿನಲ್ಲಿಯೂ ಆಕೆಯ ಕಂಬನಿಗೂಡಿದ ಮುಖವೇ ಮುಂದೆ ಬಂದು ನಿಲ್ಲುತ್ತಿತ್ತು. ನಾನು ಆರುಗಂಟೆಗೆ ಆನಂದನ ವ್ಯಾಖ್ಯಾನಕ್ಕೆಂದು ಹೊರಗೆ ಹೋದಾಗ, ಚಿಕ್ಕಪ್ಪನೂ ಎಲ್ಲಿಯೋ ಹೋಗಿದ್ದರಂತೆ. ಬಹಳಮಾಡಿ, ಆಗಲೂ ಅವರು ಆ ಹಾಡುಕಾರರ ಬೀಡಾರಕ್ಕೇ ಹೋಗಿರಬಹುದು.

# ನಂದನೂರಿನ ಜಾತ್ರೆ

೧

ಹಳ್ಳಿಯ ಹಿರಿಯಪಂಚ ವೀರಪ್ಪ ಹೇಳಿದ :

" ಧಣಿಗಳು ಈ ವರ್ಷದ ಜಾತ್ರಿಗೆ ಆ ಗಂಗಾಸ್ವಾನಿಯ ಆಟಾನ್ನ ತರಿಸಬೇಕು. ಎಲ್ಲಾರೂ ಆಕಿನ್ನ ಬಹಾಳ ಬಹಾಳ ಹೊಗಳಿ ಹಾಡತಾರ ! '

ಸಿದ್ಧರಾಮಯ್ಯನವರು ಹೇಳಿದರು :

" ಹೊಗಳಿ ಹಾಡುವಂಥಾ ಆಟಗಾರ್ತಿನ್ನ ಆಕಿ ! ನೋಡ್ರಿ ಧಣೇರ ! ಹೋದವರ್ಷ ಗೊಡಚೀ ಜಾತ್ರಿಯೊಳಗ ನಾನು ಆಕೀ ಆಟಾ ನೋಡಿದೆ. ನೋಡಿ ಹುಚ್ಚ ಆಗಿ ಹೋದೆ ! ಏನ ಆಕಿ ರೂಪ....ಏನ ಆಕಿ ಹಾಡಿಕಿ.... ಏನ ಆಕಿ ಹಾವಭಾವ ! ....ಕುಣಿದರ ಅಂತೂ ಹಾಂಗ್ನ ಸೂತ್ರದ ಗೊಂಬಿ ಕುಣಿದ್ಹಾಂಗ ನೋಡ್ರಿ ! ಆಟ ಮುಗಿದು ಮಂಗಳಾರತೀ ಪದಾ ನಡೆದರೂ ಕುಂತ ಜನ ಮಿಟ್ಟನ್ನ ಮಿಸಕಲಿಲ್ಲ ! "

ರೈತರ ಹಿರಿಯ ರಾಮಲಿಂಗಪ್ಪ ಹೇಳಿದ :

" ಸಿದ್ಧರಾಮಯ್ಯನವರು ಇಷ್ಟು ಹೇಳತಾರಂದ ಮ್ಯಾಲ, ಆಕಿನ್ನ ನಮ್ಮೂರಿಗೆ ಕರಿಸಲಾಕ್ಷ ಬೇಕು ಧಣ್ಯಾರ ! ಆಕಿ ಎಷ್ಟು ರೂಪಾಯಿ ಕೇಳ-ತಾಳ ಕೇಳ್ಳಿ. ಊರ ರೈತರೆಲ್ಲಾ ನಾವು ಅದರ ಹೊಣೀ ಹೊರಲಾಕ ತಯಾರ ಅದೀವಿ ! "

ಹಿರಿಯ ಪಂಚ ವೀರಪ್ಪ ಒಮ್ಮೆಲೆ ಹುರುಪಿನಿಂದ ಹೇಳಿದ ;

" ಧಣೇರು ದೊಡ್ಡ ಮನಸು ಮಾಡಿದರ, ಅವರಿಗೆ ಇದೊಂದು ದೊಡ್ಡ ಮಾತೇನೋ ರಾಮಲಿಂಗಣ್ಣಾ ! ಆಟಾ—ನೋಟಾ—ಮೋಜು ಅಂದರ, ಅವರೇನು ಎಂದೂ ಕೈ ಬಿಗದು ಹಿಡಿಯುವರಲ್ಲ ! "

ಧಣಿಯರು ಗಂಭೀರಭಾವದಿಂದಲೇ ಹೇಳಿದರು :

" ಊರ ಜಾತ್ರೀ ಅಂದಮ್ಯಾಲ, ನಾಲ್ಕು ಜನರ ಮನಸಿಗೆ ಬಂದಂತೆ ನಾವೂ ನಡಕೋಬೇಕಾಗತ್ತದ. ಜಾತ್ರಿಗೆ ಒಂದು ಆಟವನ್ನಂತೂ ತರಿಸಲಿಕ್ಕೆ

ಬೇಕೇ ಬೇಕು ! ನಿಮ್ಮೆಲ್ಲರ ಮನಸಿಗೆ ಬಂದರ ಆಗಲಿ—ಆ ಗಂಗಾಸಾನೀ ಆಟಾನೂ ತರಿಸಿರಿ ! ”

ಕೂಡಿದ ಜನರ ಮುಖದ ಮೇಲೆಲ್ಲ ಸಂತೃಪ್ತಿಯ ಭಾವ ಮೂಡಿತು. ಎಲ್ಲರೂ ಕೃತಜ್ಞತೆಯಿಂದ ತಮ್ಮ ಧಣಿಯ ಕಡೆಗೆ ನೋಡತೊಡಗಿದರು.

ಹಿರಿಯೂರ ಸೋಮಪ್ಪದೇಸಾಯರು ಹನ್ನೆರಡು ಹಳ್ಳಿಯ ಉಂಬಳಿಗಾರರು. ವಿಜಯನಗರದ ಕೃಷ್ಣದೇವರಾಯನು, ರಾಜ್ಯದ ಉತ್ತರದ ಗಡಿಯನ್ನು ಸಂರಕ್ಷಿಸಲೆಂದು ಕಳುಹಿದ ಸ್ವಾಮಿನಿಷ್ಠ ಹೆಬ್ಬುಲಿನಾಯಕನ ಮನೆತನಕ್ಕೆ ಸೇರಿದವರು ಈ ದೇಸಾಯರು. ವಿಜಯನಗರದ ಅಳಿಗಾಲದ ತರುವಾಯ, ಈ ಮನೆತನದವರು ವಿಜಾಪುರದ ಸುಲ್ತಾನರಿಗೆ ಅಧೀನರಾಗಿ ನಡೆದು, ದೇಸಗತಿಯ ಬಹುಭಾಗವನ್ನು ಅವರಿಂದಲೇ ಉಂಬಳಿಯಾಗಿ ಪಡೆದಿದ್ದರು. ಆದುದರಿಂದಲೇ, ಈ ಮನೆತನದ ಭಟ್ಟಂಗಿಗಳು ಹೇಳುತ್ತಿರುವ ಬಿರುದಾವಳಿಗಳಲ್ಲಿ, ಕೆಲವು ಕನ್ನಡ ಭಾಷೆಯಲ್ಲಿವೆ; ಬೇರೆ ಕೆಲವು ಪರ್ಶಿಯನ್ ಭಾಷೆಯಲ್ಲಿವೆ. ಕನ್ನಡ ಬಿರುದಾವಳಿಗಳು ವಿಜಯನಗರದ ರಾಜ್ಯದ ಸಂಬಂಧವನ್ನು ಸೂಚಿಸುವುವಾದರೆ, ಪರ್ಶಿಯನ್ ಬಿರುದಾವಳಿಗಳು ವಿಜಾಪುರ ರಾಜ್ಯದ ಸಂಬಂಧವನ್ನು ಸಾರುತ್ತವೆ. ಸೋಮಪ್ಪ ದೇಸಾಯರ ಕಾಲದಲ್ಲಿ ವಿಜಯನಗರದ ರಾಜ್ಯವೂ ಇರಲಿಲ್ಲ; ವಿಜಾಪುರದ ರಾಜ್ಯವೂ ಇರಲಿಲ್ಲ. ಬ್ರಿಟಿಷರೇ ಆಕ್ರಮಿಸಿ, ಭಾರತದ ಸಾರ್ವಭೌಮರಾಗಿ ಆಳುತ್ತಿದ್ದರು. ಸೋಮಪ್ಪ ದೇಸಾಯಿಯವರ ಪೂರ್ವಜರಿಗೆ ವಿಜಯನಗರದ ಸಂಬಂಧವಿದ್ದಾಗಲೂ ಯುದ್ಧ-ಮುತ್ತಿಗೆಗಳ ತೊಂದರೆಯಿದ್ದಿತು; ವಿಜಾಪುರದ ಸಂಬಂಧವಿದ್ದಾಗಲೂ ಕದನ-ಕಾಳಗಗಳ ತೊಡಕು ಇದ್ದಿತು. ಬ್ರಿಟಿಷರ ಆಡಳಿತ ಬಂದೊಡನೆಯೆ ದೇಸಾಯಿಯರ ಮನೆತನಕ್ಕೆ ಇವಾವ ತೊಂದರೆ-ತೊಡಕುಗಳೂ ಉಳಿಯಲಿಲ್ಲ; ಆದರೆ ಅವರ ಕಾಲದಲ್ಲಿ ದೊರೆತ ಉಂಬಳಿಗಳು ಮಾತ್ರ ಎಷ್ಟಿದ್ದುವೋ ಅಷ್ಟು ಉಳಿದುವು. ಸರಕಾರದವರು ಜೂಡಿಯೆಂದು ಕೆಲವು ಹಣವನ್ನು ಕಿತ್ತುಕೊಳ್ಳ ತೊಡಗಿದರೂ, ದೇಸಾಯಿಯವರಿಗೆ ಅದೊಂದು ಭಾರವೆನಿಸಲಿಲ್ಲ. ಕರಡಿಯ ಮೈಮೇಲಿನ ಕೂದಲಿನಲ್ಲಿ ಹತ್ತು ನವಿರುಗಳನ್ನು ಕಿತ್ತುಕೊಂಡರೆ, ಅದಕ್ಕೆ ಅದೊಂದು ಕೊರತೆಯೆನಿಸೀತೆ ?

ಉಂಬಳಿಗ್ರಾಮಗಳ ಜನರಿಗೆಲ್ಲ ದೇಸಾಯಿಯವರು ಧಣಿಗಳು. ಆದುದರಿಂದಲೇ ಅವರು ತಮ್ಮ ಧಣಿತನವನ್ನು ಕಾಯ್ದುಕೊಳ್ಳುವುದಕ್ಕಾಗಿ ಚೋಪ್‌ದಾರರನ್ನಿಟ್ಟಿರುವರು; ಓಲೆಕಾರರನ್ನು ಸಾಕಿರುವರು; ಭಟ್ಟಂಗಿಗಳನ್ನಿರಿಸಿ ಬಿರುದಾವಳಿಗಳನ್ನು ಹೊಗಳಿಸಿಕೊಳ್ಳುವರು. ಅರಮನೆಯಲ್ಲಿ ಕುದುರೆಗಳ ಲಾಯವನ್ನು ಇರಿಸಿರುವರು. ಕುದುರೆಗಳಿಗಾಗಿ ಕಾಸ್ತಾರರಿರುವರು. ನೂರಾರು ಹಸುಗಳ ತುರುಹಟ್ಟಿಯೊಂದಿರುವುದು. ಅದಕ್ಕಾಗಿ ದನಗಾಹಿಗಳ ಏರ್ಪಾಡು ಇರುವುದು. ಹಿಂದಿನ ಕಾಲದ ಆನೆಯ ಮನೆ ಮಾತ್ರ ಇಂದು ಬರಿಯದಾಗಿರುವುದು. ಬರಿಯದೆಂದರೆ ತೀರ ಬರಿಯದಲ್ಲ; ಅಲ್ಲಿ ಆನೆಯ ಬದಲು ಒಂದು ಸಾರೋಟದ ಬಂಡಿ ನಿಂತಿರುವುದು. ಇದಕ್ಕಾಗಿ ಸೋಮಪ್ಪದೇಸಾಯರು ಒಳ್ಳೆಯವೆರಡು ಕಿಲ್ಲಾರಿ ಎತ್ತುಗಳನ್ನು ಸಾಕಿರುವರು. ಸಾರೋಟವನ್ನು ನಡೆಯಿಸುವ ಸಾರಥಿ ಭೀಮಣ್ಣನಿಗೆ ವಿಶಿಷ್ಟ ಪ್ರಕಾರದ ಒಂದು ಸಂಜೋಗ (ಸಮವಸ್ತ್ರ) ವಿರುವುದು. ಸೋಮಪ್ಪ ದೇಸಾಯರಿಗೆ ಯಾವುದರ ಕೊರತೆಯೂ ಇರಲಿಲ್ಲ.

ಉಂಬಳಿಯ ಹಳ್ಳಿಗಳಲ್ಲಿ ಯಾವ ಸಾರ್ವಜನಿಕ ಕಾರ್ಯಗಳು ನಡೆದರೂ ಅಲ್ಲಿ ದೇಸಾಯಿಧಣಿಗಳಾಗಲಿ, ಅವರ ಪ್ರತಿನಿಧಿಗಳಾಗಲಿ—ದಯೆ ಮಾಡಿಸಲೇ ಬೇಕು. ಧಣಿಗಳು ಬಂದರೆ ಹಳ್ಳಿಯ ಜನರಿಗೆಲ್ಲ ತುಂಬ ಉಬ್ಬು-ಉತ್ಸಾಹ. ಇಂದಿನ ದೇಸಾಯಿಯರ ಕೈಯಲ್ಲಿ ಯಾವ ಬಗೆಯ ರಾಜಕೀಯ ಅಧಿಕಾರವೂ ಇಲ್ಲವೆಂಬುದು ಜನರಿಗೆ ತಿಳಿದಿದ್ದಿತೊ ಇಲ್ಲವೊ! ಎಲ್ಲರೂ ಪರಂಪರಾಗತ ಗೌರವಭಾವದಿಂದಲೇ ದೇಸಾಯಿಧಣಿಯರನ್ನು ನೋಡುತ್ತಿದ್ದರು. ಈ ಗೌರವಭಾವವನ್ನು ಉಳಿಸಿಕೊಳ್ಳಲಿಕ್ಕೆ ದೇಸಾಯಿಯವರಿಗೂ ಆಗಾಗ ಹಣ-ಕಾಸುಗಳನ್ನು ವೆಚ್ಚಮಾಡಬೇಕಾಗುತ್ತಿತ್ತು. ಕಷ್ಟ-ನಷ್ಟಗಳಲ್ಲಿದ್ದ ರೈತಜನರೊಂದಿಗೆ ಔದಾರ್ಯದಿಂದ ನಡೆದುಕೊಳ್ಳಬೇಕಾಗುತ್ತಿತ್ತು. ಈ ಬಗೆಯ ಧಾರಾಳಬುದ್ಧಿ-ಉದಾರತನಗಳು ಇದ್ದುವೆಂದೇ ಎಲ್ಲ ಹಳ್ಳಿಗಳ ಜನರಿಗೂ ಸೋಮಪ್ಪದೇಸಾಯರು ಬೇಕಾದವರಾಗಿದ್ದರು. ಅವರ ದೇಸಾಯಿತಿ ಗೌರಮ್ಮನವರನ್ನಂತೂ ಜನರು ದೇವತೆಯೆಂದು ಗೌರವಿಸುತ್ತಿದ್ದರು. ಅವರು ಎಂದಾದರೂ ತಮ್ಮ ಹಳ್ಳಿಗೆ ಬಂದರೆ, ಭಾಗ್ಯದೇವತೆ ಬಂದಳೆಂದು ಭಾವಿಸುತ್ತಿದ್ದರು.

ನಂದನೂರಿಗೆ ಸೋಮಪ್ಪದೇಸಾಯರು ಇಂದು ಬಂದಿದ್ದರು. ಅದು ಅವರ ಉಂಬಳಿಯ ಗ್ರಾಮ. ಪ್ರತಿವರ್ಷದಂತೆ ಈ ಸಲವೂ ಗ್ರಾಮದೇವತೆಯ ಜಾತ್ರೆ ನಡೆಯಬೇಕಾಗಿದ್ದಿತು. ಅದರ ಪೂರ್ವಸಿದ್ಧತೆಗೆಂದು, ಸೋಮಪ್ಪ ದೇಸಾಯರು ಬೀಡುಬಿಟ್ಟಲ್ಲಿಯೆ ಊರ ಹಿರಿಯರ ಓಲಗ ಸೇರಿದ್ದಿತು. ಎಲ್ಲ ಕಾರ್ಯಕಲಾಪದ ವಿಚಾರ-ಚರ್ಚೆಗಳೆಲ್ಲ ಮುಗಿದ ಮೇಲೆ, ಜಾತ್ರೆಗಾಗಿ ತರಿಸ-ಬೇಕಾದ ಆಟದ ವಿಷಯವೂ ಹೊರಟಿತು. ಜನರೆಲ್ಲರ ಅಪೇಕ್ಷೆಯನ್ನು ಮನ್ನಿಸಿ ದೇಸಾಯರು, ಗಂಗಾಸಾನಿಯ ಆಟವನ್ನೇ ತರಿಸುವುದಕ್ಕೆ ತಮ್ಮ ಸಮ್ಮತಿಯನ್ನು ಇತ್ತರು.

೨

ದೇಸಾಯಿಯವರು ಸಂಜೆಗೆ ಹಿರಿಯೂರಿಗೆ ಮರಳಿಬಂದರು. ರಾತ್ರಿಯ ಊಟ-ಉಪಚಾರಗಳನ್ನೆಲ್ಲ ತೀರಿಸಿಕೊಂಡು ಉಪ್ಪರಿಗೆಯಮೇಲೆ ಹೋದಾಗ ರಾಣಿಗೌರಮ್ಮ ಮುಖ ಬಾಡಿಸಿಕೊಂಡು ಕಂಬನಿಗರೆಯುತ್ತ ಕುಳಿತು-ಕೊಂಡಿದ್ದರು. ದೇಸಾಯರು ಬಂದೊಡನೆಯೆ ಮೆಲ್ಲಗೆ ಎದ್ದುನಿಂತು ಕಣ್ಣು ಗಳನ್ನು ಒರಸಿಕೊಳ್ಳತೊಡಗಿದರು. ಬೇಸರದ ಧ್ವನಿಯಲ್ಲಿ ದೇಸಾಯರು ನುಡಿದರು :

“ ನಿನಗ ಎಷ್ಟು ಹೇಳಿದರೂ ತಿಳಿಯಲೇ ಒಲ್ಲದು. ಮತ್ತೆಮತ್ತೆ ಅದೇ ನೆನಪು ತೆಗೆದು ಅಳತಾ ಕೂತುಕೊಳ್ಳತಿ ! ಸಾವು ಅಂಬೂದು ಯಾರ ಕೈಯೊಳಗಿನ ಮಾತೇನು? ಆ ಎಂಟು ತಿಂಗಳ ಎಳೆಯ ಜೀವಕ್ಕಾಗಿ ಎಷ್ಟು ದಿವಸ ಹೀಂಗ ಅಳುವಾಕಿ ನೀನು ? ”

ಮಾತನೇನೂ ಆಡದೆ ಗೌರಮ್ಮ ಮತ್ತೆ ಕಂಬನಿಗರೆಯತೊಡಗಿದಳು. ದುಃಖವು ಉಕ್ಕೇರಿ ಬಂದಿತು. ದೇಸಾಯರು ಅವಳನ್ನು ಕೈಹಿಡಿದು ಕರೆ-ದೊಯ್ದು ತಮ್ಮ ಬಳಿಯಲ್ಲಿ ಕುಳ್ಳಿರಿಸಿಕೊಂಡರು. ಮುಂಗುರುಳುಗಳನ್ನು ನೇವರಿಸುತ್ತ ಹೇಳಿದರು :

“ ಅಲ್ಲಾ ! ಎಷ್ಟು ದಿವಸ ನಾನು ನಿನ್ನ ಅಳುಮಾರೀ ಕೂಡ ಬಾಳ್ವೇ ಮಾಡಬೇಕಂತಿ ? ”

ಅಳುತ್ತಳುತ್ತಲೇ ಗೌರಮ್ಮ ಹೇಳಿದಳು :

"ಗಂಡಸರ ಕರುಳನ್ನ ದೇವರು ಯಾತರಿಂದ ಮಾಡಿರತಾನೋ ಏನೋ!"

ದೇಸಾಯರು ಹೇಳಿದರು :

" ಹೆಂಗಸರ ಕರುಳು ಯಾತರಿಂದ ಮಾಡಿರತಾನೋ ಅದರಿಂದನs ಮಾಡಿರತಾನ! ಆದರ, ಹೆಂಗಸರಿಗೆ ಬ್ಯಾರೆ ಕೆಲಸ ಇಲ್ಲದ್ದರಿಂದ, ಬರೇ ಅಳುವ ಕೆಲಸಾ ಒಂದೇ ಮಾಡತಾರ. ಗಂಡಸರಿಗೆ ಹೊರಗ ಹದಿನೆಂಟು ಕೆಲಸ; ಅಳಲಿಕ್ಕೆ ಅವರಿಗೆ ಅವಕಾಶನೇ ಸಿಗೂದಿಲ್ಲ. ಹೊರಗಿನ ಕೆಲಸಾ ಮಾಡಿ ದಣಿದ ಮನಸಿಗೆ, ಮನಿಗೆ ಬಂದಮ್ಯಾಲ ನಗಿಮಾತು, ಸರಸ ಏನಾದರೂ ಬೇಕಾಗತಾವ. ಅವು ಸಿಗದಿದ್ದರ ಮಾತ್ರ ಅಳಬೇಕೂ ಅಂತ ಅನಿಸತsದ ಗಂಡಸರಿಗೆ!"

ಗೌರಮ್ಮ ಕೇಳಿದಳು :

" ಮಗುವು ಹೋದ ಬಗ್ಗೆ ನಿಮಗ ಏನೂ ದುಃಖ ಅನಿಸೂದಿಲ್ಲೇನು ?''

ದೇಸಾಯರು ಹೇಳಿದರು :

" ನಿಜವಾಗಿ ನಾನು ಹೇಳಲಾ ? ನನಗೂ ಅಲ್ಪ-ಸ್ವಲ್ಪ ದುಃಖವೇನೋ ಅನಿಸಿತು ಖರೆ! ಆದರ, ನಾವೇನೂ ಬರೇ ಅಳಲಿಕ್ಕೇ ಹುಟ್ಟಿ ಬಂದಿಲ್ಲಾ ಅಂತ ನಾನು ತಿಳಕೊಂಡೀನಿ. ಒಂದು ಬಳ್ಳಿ ಇರತsದಂತ ತಿಳಕೊ! ಅದಕ್ಕ ಬಿಟ್ಟ ಮೊದಲನೇ ಮಿಡಿ ಸತ್ತುಹೋದರ, ಅದು ದುಃಖವನ್ನ ಸ್ವಲ್ಪವೂ ತಾಳೂದಿಲ್ಲ. ಮತ್ತೆ ಕುಡಿಬಿಟ್ಟು ಬೆಳೀತsದ; ಹೂವು ಹೀಚು ಬಿಡತsದ; ಒಳ್ಳೊಳ್ಳೆ ಫಲ-ಗಳನ್ನ ಪಡೀತsದ!"

ಗೌರಮ್ಮ ಸುಮ್ಮಗೆ ಕುಳಿತಳು. ನಾಚಿಕೆಯು ಆಕೆಯ ಮುಖದ ಕೆಂಪನ್ನು ಹೆಚ್ಚಿಸಿದಂತೆ ಕಂಡಿತು. ನಿಡಿದಾದ ಉಸಿರೊಂದನ್ನು ಹೊರಗೆ ಹಾಕಿ, ಅವಳು ದೇಸಾಯಿಯರ ಕಡೆಗೆ ನೋಡತೊಡಗಿದಳು; ಆಗ ದೇಸಾಯಿಯರು ಸಲುಗೆಯ ಧ್ವನಿಯಲ್ಲಿ ಹೇಳತೊಡಗಿದರು :

" ನೋಡು, ಗೌರಾ! ನಂದನೂರಿನ ಜಾತ್ರೆಯ ದಿನವನ್ನ ಇಂದು ಗೊತ್ತುಮಾಡಿಕೊಂಡು ಬಂದೆವು. ಅಲ್ಲಿಯ ಜನರು ತುಂಬ ಹುರುಪಿನವರು. ಈ ವರ್ಷದ ಜಾತ್ರೆಯನ್ನ ಬಹಳ ವೈಭವದಿಂದ ಮಾಡಬೇಕಂತ ಅವರು

ನಿರ್ಣಯಿಸಿಕೊಂಡಾರ. ಭೂಮಿ-ಸೀಮಿ ಚೆನ್ನಾಗಿ ಬೆಳದಾವ. ಯಾವುದಕ್ಕೇನೂ ಕೊರತೆಯಿಲ್ಲ. ಮತ್ತ....ಈ ವರ್ಷ ಬಹಾಳ ಒಳ್ಳೆಯದೊಂದು ಆಟಾ ತರಿಸಬೇಕಂತ ಹೇಳಿದರು. 'ಆಗಲಿ' ಅಂತ ನಾನೂ ಒಪ್ಪಿಗೀ ಕೊಟ್ಟು ಬಂದೆ !"

ಗೌರಮ್ಮನಲ್ಲಿ ಸ್ವಲ್ಪ ಕುತೂಹಲಭಾವ ಮೂಡಿತು. ಆಕೆ ಕೇಳಿದಳು :

"ಅದ್ಯಾವದದು ಒಳ್ಳೇ ಆಟ ?"

"ಗಂಗಾಸಾನಿಯ ಆಟಂತ....ಬಹಾಳ ಚೆಲೋ ಆಟಾ ಆಡತಾಳಂತ ಆಕಿ !"

ಗೌರಮ್ಮ ಮಾತನೇ ಆಡಲಿಲ್ಲ. ಕರುಣಾಭಾವದ ಮುಖದಿಂದ ಸುಮ್ಮಗೆ ಕುಳಿತಳು. ದೇಸಾಯಿಯವರು ಕೇಳಿದರು :

"ಜಾತ್ರೆಗೆ ನೀನೂ ಬರುತ್ತೀಯಲ್ಲವೆ ?"

ಗೌರಮ್ಮನ ಕಣ್ಣಿಂದ ಮತ್ತೆ ಕಂಬನಿಯ ಕೋಡಿಯೊಡೆಯಿತು. ದುಃಖದಿಂದ ಕಂಪಿಸುವ ಧ್ವನಿಯಿಂದಲೇ ಅವಳು ಮಾತನಾಡಿದಳು :

"ಬರಿಯುಡಿಯಿಂದ ಬರಲೇ ನಾನು ದೇವಿಯ ಜಾತ್ರೆಗೆ ? ಆ ಜಗತ್ತಿನ ತಾಯಿಗೆ ತಾಯಿಯ ಕರುಳಿನ ಕಲ್ಪನಾ ಇಲ್ಲವೆ? ಈ ನನ್ನ ಖೋಡಿ ಮುಖವನ್ನು ಆಕಿಗೆ ನಾನು ಹ್ಯಾಂಗ ತೋರಿಸಲಿ ?...."

ಮಾತಿನ ಕೊನೆಯೊಂದಿಗೆ ಅಳುವು ಒತ್ತರಿಸಿ ಹೊರಬಿದ್ದಿತು. ನಿರಾಶೆಯ ಧ್ವನಿಯಲ್ಲಿ ದೇಸಾಯಿಯರು ನುಡಿದರು :

"ಲೋಕದೊಳಗ ಎಲ್ಲಾ ಹೆಂಗಸರೂ ಹೀಂಗs ಕಾಣಿಸತsದ. ಮಕ್ಕಳಾಗುವತನಕಾ ಒಂದು ರೀತಿ; ಮಕ್ಕಳಾದ ಮ್ಯಾಲ ಇನ್ನೊಂದು ರೀತಿ ! ಮಕ್ಕಳಾದ ಮ್ಯಾಲ ಗಂಡಸು, ಹೆಂಡತಿಯ ಪೂರ್ಣ ಪ್ರೀತೀ ಕಾಣೂದಂದರ, ಕನಸಿನ ಮಾತs ಏನೋ !"

ನಿರಾಶೆಯ ನಿಟ್ಟುಸಿರೊಂದನ್ನು ಬಿಟ್ಟು ದೇಸಾಯಿಯರು ಪಲ್ಲಂಗದ ಮೇಲೆ ಪವಡಿಸಿದರು. ಭ್ರಾಂತಭಾವದಿಂದ ಕುಳಿತ ಗೌರಮ್ಮ, ಅಂತರಂಗದಲ್ಲಿ, ಕಳೆದುಕೊಂಡ ತನ್ನ ಮಗುವಿನ ಮುದ್ದುಮುಖವನ್ನು ಕಾಣುತ್ತಿರಬಹುದು ! ಎಷ್ಟೋ ಹೊತ್ತಿನ ವರೆಗೆ ಅವಳು ಹಾಗೆಯೆ ಕುಳಿತುಬಿಟ್ಟಿದ್ದಳು.

೩

ನಂದನೂರಿನ ಜಾತ್ರೆಯು ವಿಜೃಂಭಣೆಯಿಂದ ಪ್ರಾರಂಭವಾಗಿದ್ದಿತು. ಇಂದು ದೇವಿಯ ತೇರೆಳೆಯುವ ದಿನ. ಏಳುನೆಲೆಯ ತೇರು, ಬಣ್ಣಬಣ್ಣದ ಬಟ್ಟೆಗಳಿಂದಲೂ ಬಗೆಬಗೆಯ ತೋರಣಗಳಿಂದಲೂ ಅಣಿಗೊಂಡು ಹೊರ-ಬಯಲಲ್ಲಿ ನಿಂತಿದೆ. ಹಳ್ಳಿಯ ಮುಖ್ಯ ಬೀದಿಯು ತಳಿರು-ತೋರಣಗಳಿಂದ ಅಲಂಕಾರಗೊಂಡಿದೆ. ತೇರ ಬಯಲಲ್ಲಿ ಎದುರು-ಬದುರಾಗಿ ಕಟ್ಟಿದ ನಗಾರ್-ಖಾನೆಗಳ ಮೇಲ್ನೆಲೆಗಳಲ್ಲಿದ್ದ ಪಾರ್ವತೀ-ಪರಮೇಶ್ವರರ ಬಣ್ಣದ ಪ್ರತಿಮೆಗಳು, ನೋಡುವವರನ್ನು ನಿಂತಲ್ಲಿಯೆ ನಿಲ್ಲಿಸುತ್ತಿವೆ. ಎಡೆಬಿಡದೆ ನುಡಿಯುವ ನಗಾರಿಗಳ ಗುಡು-ಗುಡಾಟವು, ಜಾತ್ರೆಯ ಜನರ ಕಲಕಲಕ್ಕೊಂದು-ವಿಶಿಷ್ಟವಾದ ಕಳೆಯನ್ನು ತಂದಿದೆ. ಜಾತ್ರೆಗೆಂದು ಬಂದ ನಂಟರು-ನೇಹಿಗರಿಂದ ಪ್ರತಿಯೊಂದು ಮನೆಯೂ ತುಂಬಿ ತುಳುಕುತ್ತಿದೆ. ಹಳೆಯ ಉಡಿಗೆ-ತೊಡಿಗೆಗಳನ್ನು ಧರಿಸಿದವರು ಎಲ್ಲಿಯೂ ಕಾಣುತ್ತಿರಲಿಲ್ಲ. ಜಾತ್ರೆಗೆಂದು ತವರ ಮನೆಗೆ ಬಂದ ಹೆಣ್ಣುಮಕ್ಕಳ ಬೆಡಗು-ಬಿನ್ನಾಣಗಳನ್ನಂತೂ ಬಣ್ಣಿಸಲಳವಲ್ಲ. ಉತ್ಸಾಹದ ಮೂರ್ತಿಗಳಂತೆ ಎಲ್ಲಿ ನೋಡಿದಲ್ಲೆಲ್ಲ ಅವರ ಸುಳಿದಾಟ ಕಣ್ಣಿಗೆ ಬೀಳುತ್ತಿತ್ತು.

ಸೋಮಪ್ಪ ದೇಸಾಯರೂ ಜಾತ್ರೆಗೆಂದು ಬಂದಿರುವರು. ಅವರಿಗಾಗಿ ದೊಡ್ಡದೊಂದು ಮನೆಯನ್ನು ಏರ್ಪಡಿಸಲಾಗಿದೆ. ಜೊತೆಯಲ್ಲಿ ಆರೇಳು ಮಂದಿ ಕುದುರೆಯ ಸವಾರರಿದ್ದಾರೆ. ಚೋಪ್‌ದಾರರೂ ಓಲೆಯಕಾರರೂ ಐದಾರು ಜನರಿದ್ದಾರೆ. ಸಾರೋಟದ ಬಂಡಿಯೂ ಬಂದಿದೆ. ದೇಸಾಯಿಯರ ಅಡಿಗೆಗಾಗಿ ಒಬ್ಬ ಬೋನಗಾರನೂ ಬಂದಿದ್ದಾನೆ. ಇದೆಲ್ಲ ವೈಭವವು ಹಳ್ಳಿಯ ಜಾತ್ರೆಗೆ ಒಂದು ವಿಶೇಷ ಶೋಭೆಯನ್ನು ಒದಗಿಸಿಕೊಟ್ಟಿದೆ. ದೇಸಾಯಿ-ಧಣಿಗಳ ಆಗಮನವು ಅವರ 'ಪ್ರಜಾವರ್ಗ'ಕ್ಕೆಲ್ಲ ತುಂಬ ಉತ್ಸಾಹವನ್ನು ಒದಗಿಸಿಕೊಟ್ಟಿದೆ. ರಾಣಿ ಗೌರಮ್ಮನವರು ಬಂದಿಲ್ಲವೆಂಬುದು ಕೆಲವು ಜನರಿಗೆ ವಿಷಾದವನ್ನುಂಟುಮಾಡಿತಾದರೂ, ಕುದುರೆಸವಾರರ ಸಂಜೋಗದ ಆ ಅದ್ಭುತರಮ್ಯದೃಶ್ಯವು, ವಿಷಾದವನ್ನು ಬಹಳಹೊತ್ತಿನ ವರೆಗೆ ಉಳಿಯಗೊಡಲಿಲ್ಲ. ರಾಣಿ ಗೌರಮ್ಮ ಒಂದು ವೇಳೆ ಬಂದಿದ್ದರೂ, ತೆರೆಯ ಮರೆಯಲ್ಲಿಯೆ

ಇರುವವರು. ಯಾರಿಗೂ ದರ್ಶನಕೊಡುವವರಲ್ಲ; ಯಾರೊಂದಿಗೂ ಮಾತ ನಾಡುವವರಲ್ಲ. ಆದುದರಿಂದ ಆಕೆಯ ಅಭಾವದ ಕಲ್ಪನೆಯು ಯಾರ ಮನಸ್ಸಿನಲ್ಲಿಯೂ ಬಹುಕಾಲ ಉಳಿಯಲಿಲ್ಲ.

ಜಾತ್ರೆಯ ಕಾಲದಲ್ಲಿ ಸಾರ್ವಜನಿಕರಿಂದ ದೇಸಾಯರಿಗೆ ಸಲ್ಲಬಹುದಾದ ಮಾನ-ಮನ್ನಣೆಗಳೆಲ್ಲ ಸಂದುವು. ಅದರಂತೆಯೆ ದೇಸಾಯಿಯರ ಕಡೆಯಿಂದ ಹಳ್ಳಿಯಲ್ಲಿಯ ಬೇರೆಬೇರೆ ಜನರಿಗೆ ಸಲ್ಲಬೇಕಾದ ಹಕ್ಕು-ಬಾಬುಗಳೆಲ್ಲ ತಲ್ಪಿದುವು. ಬೆಳಗಿನಿಂದಲೂ ಬೇರೆಬೇರೆ ಜನರು ಬಂದು ದೇಸಾಯರಿಗೆ ಮುಜುರೆಗಳನ್ನು ಒಪ್ಪಿಸಿ ಹೋಗುತ್ತಿದ್ದರು. ಓಲೆಯಕಾರನೊಬ್ಬ ಬಂದವರಿಗೆಲ್ಲ ಅಡಿಕೆಲೆಯ ಮರ್ಯಾದೆಯನ್ನು ಸಲ್ಲಿಸುತ್ತಿದ್ದ. ಹಳ್ಳಿಯ ಓಲೆಕಾರರು ಬಂದು ಮುಜುರೆಗಳನ್ನು ಒಪ್ಪಿಸಿ, ಧೋತರ, ರುಮಾಲು ಮೊದಲಾದ ಉಡು-ಗೊರೆಗಳನ್ನು ಪಡೆದುಕೊಂಡು ಹೋಗುತ್ತಿದ್ದರು. ಬೀಡಾರದ ಮೊಗಸಾಲೆಯಲ್ಲಿ ಹಾಸಿದ ರತ್ನಗಂಬಳಿಯ ಮೇಲೆ, ಒರಗುದಿಂಬಿಗೆ ಒರಗಿ ಕುಳಿತ ದೇಸಾಯಿಯರು ರಾಜಗಾಂಭೀರ್ಯದಿಂದ ಒಪ್ಪುತ್ತಿದ್ದರು.

ದೇಸಾಯರ ವಯಸ್ಸು ಮೂವತ್ತೈದರ ಒಳ-ಹೊರಗೆ ಇರಬಹುದಿಷ್ಟೆ ! ತಲೆಯ ಮೇಲೆ ಸರಿಗೆಯ ಮುಂಡಾಸ. ತಿದ್ದಿಮಾಡಿದಂತಿರುವ ದುಂಡು-ಮುಖದ ಮೇಲೆ ಕಪ್ಪಾದ ಕೋರೆಮೀಸೆಗಳು. ಗೋದಿಗೆಂಪಿನ ಮೈಬಣ್ಣ, ಮೈಯಲ್ಲಿ ರೇಶಿಮೆಯ ಕಂಠೀಕಮಾನಿನ ಅಂಗಿ. ಉಟ್ಟುದು ಜರಿಯಂಚಿನ ತಿಳುವಾದ ಧೋತರ. ನೋಡುವವರೆಲ್ಲ ಅವರನ್ನು ಸಾಮಾನ್ಯ ಮನುಷ್ಯನೆಂದು ಭಾವಿಸುತ್ತಿರಲಿಲ್ಲ. 'ಮನುಷ್ಯರಿಗಿಂತ ಶ್ರೇಷ್ಠ ಕುಲದವರು' ಎಂಬ ಶ್ರದ್ಧೆಯಿಂದ ಕಾಣುತ್ತಿದ್ದರು. ಜನರ ಶ್ರದ್ಧೆಗ ಅನುಗುಣವಾಗಿಯೆ ಇರಬೇ-ಕಲ್ಲವೇ ದೇಸಾಯರು ಕೂಡ !

ನಂದನೂರಂತಹ ಸಣ್ಣಹಳ್ಳಿಯು ಕೂಡ ಇಂದು ಉತ್ಸಾಹದ ಆಗರ-ವಾಗಿದೆ. ಜನರಿಗೆ ಭೂತ-ಭವಿಷ್ಯತ್ತುಗಳ ಕಷ್ಟನಷ್ಟಗಳ ಕಲ್ಪನೆಯೇ ಇಲ್ಲ. ಎಲ್ಲರೂ ವರ್ತಮಾನ ಸುಖ-ಸಂತೃಪ್ತಿಗಳಲ್ಲಿ ಮೈಮರೆತು ಹೋಗಿದ್ದಾರೆ. ಮನೆ-ಮನೆಗಳಲ್ಲಿಯೂ ಹೋಳಿಗೆ-ಹುಗ್ಗಿಗಳ ಸವಿಯಡಿಗೆ! ಗುಡಿಗೆ ನೈವೇದ್ಯ-ವನ್ನೊಯ್ಯುವ ಮುತ್ತೈದೆಯರ ಉಲ್ಲಾಸದ ನಗೆ-ಮಾತುಗಳು ಕಿವಿಗೆ ಬೀಳದ

ಸ್ಥಳವಿಲ್ಲ. ಈ ಉತ್ಸಾಹ-ಉತ್ಸವಗಳ ಮಂಟಪದಲ್ಲಿಯೇ ಕುಳಿತ ಸೋಮಪ್ಪ ದೇಸಾಯರು ಮನದಲ್ಲಿಯೆ ಎಂದುಕೊಂಡಿರಬಹುದು :

" ಈ ಹಳ್ಳಿಯಲ್ಲಿ ಯಾವ ತಾಯಿಯ ಮಕ್ಕಳೂ ಸತ್ತಿರಲಿಕ್ಕಿಲ್ಲವೆ ? ಮಕ್ಕಳು ಸತ್ತ ತಾಯಂದಿರೆಲ್ಲ ಗೌರಿಯಂತೆ ಮೂಲೆಹಿಡಿದೇ ಕುಳಿತಿರಬಹುದೆ? ಅವರೆಲ್ಲ ಮೂಲೆಹಿಡಿದು ಕುಳಿತಿದ್ದರೆ, ಇಲ್ಲಿಯ ಮನೆ-ಮನೆಗಳಲ್ಲಿಯೂ ಇಷ್ಟೊಂದು ಉಲ್ಲಾಸ ಕುಣಿದಾಡುತ್ತಿತ್ತೆ? ಮನುಷ್ಯನಿಗೆ ದುಃಖವಾಗುವುದೂ ನಿಜ; ಮತ್ತೆ ಅವನು ಅದನ್ನು ಮರೆತುಬಿಡುವುದೂ ಅಷ್ಟೇ ನಿಜ ! ಗೌರಿಯಂತೆ ಅದನ್ನೆ ಅದನ್ನೇ ನೆನೆದು ಕೊರಗುತ್ತ ಕುಳಿತುಕೊಳ್ಳುವವರು ಲೋಕದಲ್ಲಿ ಅಪೂರ್ವವೆಂದೇ ತೋರುತ್ತದೆ. ಗೌರಿಯ ಸ್ವಭಾವ ಲೋಕಕ್ಕೇ ಹೊರತಾಗಿದೆ ! "

೪

ದೇವಿಯ ತೇರೆಳೆಯುವ ಉತ್ಸವವು ವಿಜೃಂಭಣೆಯಿಂದ ನಡೆಯಿತು. ಕರಡಿ, ಡೊಳ್ಳು, ಹಲಿಗೆ, ರಣಹಲಿಗೆ, ಭೇರಿ, ಕಹಳೆ, ತುತೂರಿಗಳ ಮೊರೆತವು ಗಗನಕ್ಕೆ ಮುಟ್ಟುವಂತಿತ್ತು. ಊರ ದೇವರ ಪಲ್ಲಕ್ಕಿಗಳೂ ನೆರೆಯೂರಿನಿಂದ ಬಂದ ಪಲ್ಲಕ್ಕಿಗಳೂ ಸಾಲಾಗಿ ತೇರಿನ ಹಿಂದೆ ನಿಂತಿದ್ದುವು. ತೇರಿನ ಎಡಬಲಗಳಲ್ಲಿ ನಂದಿಕೋಲುಗಳೂ ನಕ್ಷತ್ರಮಾಲೆಗಳೂ ನಿಡಿದಾಗಿ ನಿಂತುಕೊಂಡಿದ್ದುವು. ನೂರಾರು ಜನರು ತೇರಿನ ಮಿಣಿಯನ್ನು ಹಿಡಿದು 'ಚಾಂಗುಭಲ್ಲಾ.... ಚಾಂಗುಭಲ್ಲಾ!' ಎಂದು ಜಗ್ಗುತ್ತಿದ್ದರು. ಬಯಲೆಲ್ಲ ಜನರಿಂದ ತುಂಬಿ ಗಜಬಜಿಸುತ್ತಿತ್ತು. ಮಾಳಿಗೆ-ಕುಂಬೆಗಳ ಮೇಲೆ ನಿಂತು ನೋಡುವ ಹಳ್ಳಿಯ ಚೆಲುವೆಯರು, ಕೂಡಿದ ಜನರೆಲ್ಲ ತೇರನ್ನು ಬಿಟ್ಟು, ತಮ್ಮ ಕಡೆಗೆ ನೋಡುತ್ತ ನಿಲ್ಲಬೇಕೆಂದು ಹೊಂಚುಹಾಕಿದವರಂತೆ ಕಂಡರು. ಈ ತೇರೆಳೆಯುವ ದಿನದ ಉತ್ಸಾಹ-ಆನಂದಗಳು, ನಂದನೂರ ಜನರ ಮಾನಸಿಕ ಸ್ವಾಸ್ಥ್ಯವನ್ನು ವರ್ಷದುದ್ದಕ್ಕೂ ಕಾಯಬೇಕು.

ತೇರಿನ ಮೇಲೆ ತೆಂಗಿನಕಾಯಿಗಳನ್ನು ಹಾರಿಸುವವರೆಷ್ಟು ಜನರು ! ಬಾಳೆಯ ಹಣ್ಣು-ಉತ್ತತ್ತಿಗಳನ್ನು ತೂರುವವರೆಷ್ಟು ಜನರು ! ಹಾರಿಸಿದುವುಗಳನ್ನೂ ತೂರಿದುವುಗಳನ್ನೂ ಹಿಡಿದುಕೊಳ್ಳಲು ಹವಣಿಸಿ ಓಡಾಡುವವರೆಷ್ಟು-

ಜನರು ! ಎಳ್ಳೆಲ್ಲಿಯೂ ಗಡಿಬಿಡಿ....ಗದ್ದಲ ! ತೇರುಸಾಗಿ ಪಾದಗಟ್ಟೆಯನ್ನು ಮುಟ್ಟಿತು. ಕಳಸದಾರತಿ ಹಿಡಿದ ಐದೆಯರ ಗುಂಪು ತೇರಿಗೂ ಪಾದಗಟ್ಟೆಗೂ ಆರತಿಯನ್ನು ಬೆಳಗಿತು. ನೆನೆಗಡಲೆ-ಬೆಲ್ಲದ ಪ್ರಸಾದವನ್ನೂ ಹಂಚಲಾಯಿತು. ಪಾದಗಟ್ಟೆಯವರೆಗೆ ಸಾಗಿದ ತೇರು ಮರಳಿಬಂದು ತನ್ನ ಸ್ಥಾನದಲ್ಲಿ ನಿಂತು-ಕೊಂಡಿತು. ಇದೆಲ್ಲವನ್ನೂ ಸೋಮಪ್ಪ ದೇಸಾಯರು ಅಧ್ಯಕ್ಷರಾಗಿ ನೋಡು-ತ್ತಿದ್ದರು. ಅವರ ಕುದುರೆಯ ಸವಾರರೂ ಚೋಪ್‌ದಾರ್-ಓಲೆಯಕಾರರೂ ತಿರುಗಾಡಿ, ಗದ್ದಲ-ಗಲಾಟೆಗಳನ್ನು ನಿಯಂತ್ರಿಸುತ್ತಿದ್ದರು. ಇದೆಲ್ಲ ವೈಭ-ವಕ್ಕೂ ನಾಯಕರಾಗಿರುವ ತಮ್ಮ ವೈಭವವನ್ನು ನೋಡಿ ಅಭಿಮಾನಪಡಲಿಕ್ಕೆ, ಗೌರಮ್ಮದೇಸಾಯಿತಿಯು ಜೊತೆಗೆ ಬಂದಿದ್ದರೆ ಒಳ್ಳೆಯದಾಗುತ್ತಿದ್ದಿತೆಂದು, ಸೋಮಪ್ಪದೇಸಾಯರು ಆಗಾಗ ಮನಸ್ಸಿನಲ್ಲಿ ಯೋಚಿಸುತ್ತಿರಬಹುದು. ಗಂಡಿನ ವೈಭವವನ್ನು ಕಂಡು ಹೆಣ್ಣು ಅಭಿಮಾನಪಟ್ಟಾಗಲೇ ಅಲ್ಲವೇ ಆ ವೈಭವದ ಪೂರ್ಣಾನುಭವ ?

ರಾತ್ರಿಯ ಐದು ತಾಸು ಕಳೆದ ಮೇಲೆ ಆಟವು ಪ್ರಾರಂಭವಾಯಿತು. ಪ್ರೇಕ್ಷಕರ ಸಂಖ್ಯೆ ಮೇರೆ ಮೀರಿದ್ದಿತು. ದೊಡ್ಡದಾಗಿ ಅಟ್ಟವನ್ನು ರಚಿಸಿದ್ದರು. ಎಡಬಲದ ಕಂಬಗಳಿಗೆ ತೆಂಗಿನಗರಿ, ಗೊನೆಗೂಡಿದ ಬಾಳೆಯ ಗಿಡಗಳನ್ನು ಕಟ್ಟಿದುದರಿಂದ, ಆಟದ ಅಟ್ಟವು ಮದುವೆಯ ಹಂದರದಂತೆ ಕಂಗೊಳಿಸು ತ್ತಿತ್ತು. ಅಟ್ಟದ ಮುಂಗಡೆಯಲ್ಲಿ ಎರಡೂ ಕಡೆಗೆ ಎರಡು ಹಿಲಾಲುಗಳು ಉರಿಯುತ್ತಿದ್ದುವು. ಒಳ್ಳೆಣ್ಣೆಯಲ್ಲಿ ತೋಯಿಸಿದ ಹತ್ತಿಕಾಳುಗಳನ್ನು ಆಗಾಗ ಹಿಲಾಲುಗಳಿಗೆ ಹಾಕಲಾಗುತ್ತಿತ್ತು. ಆ ದೀಪದ ಬೆಳಕಿನಲ್ಲಿ ಅಟ್ಟದ ಸೌಂದರ್ಯ ಇನ್ನಿಷ್ಟು ಒಪ್ಪಗೊಂಡಿತ್ತು.

ದೇವತಾಸ್ತುತಿಯ ಹಾಡಾಯಿತು. ಗಣಪತಿಯು ರಂಗದ ಮೇಲೆ ಬಂದು ನಿಂತು, ಸೂತ್ರಧಾರನಿಗೆ ಅಂದಿನ ಆಟದ ಸಾಂಗತೆಯ ಬಗೆಗೆ ವರ ವನ್ನು ದಯೆಪಾಲಿಸಿ, ತೆರೆಯಲ್ಲಿ ಮರೆಯಾದ. ಆಮೇಲೆ ರಂಗದ ಮೇಲೆ ಗವುಳಿಗಿತ್ತಿಯ ಪ್ರವೇಶವಾಗಬೇಕು. ಅದಕ್ಕಾಗಿ ದೇಸಾಯಿಯರಿಂದ ತಂದ ಹೂವಿನ ಶಾಲನ್ನು ಪರದೆಯನ್ನಾಗಿ ಹಿಡಿಯಲಾಯಿತು. ಪರದೆಯೊಳಗಿಂ ದಲೇ ಗವುಳಿಗಿತ್ತಿ ಮೇಳವಾದ್ಯಗಳೊಂದಿಗೆ ಹಾಡತೊಡಗಿದಳು :

“ ಚಂದ್ರಗಾವಿಯನುಟ್ಟು, ದುಂಡಮುತ್ತನು ಕಟ್ಟಿ,
ಪೆಂಡ್ಯದ ರುಳಿಯಾನಿಟ್ಟೋ—ಗೊಲ್ಲರ ಭಾಮೆ !”

ಗವುಳಿಗಿತ್ತಿಯ ಮಂಜುಲಕಂಠ ಪ್ರೇಕ್ಷಕರನ್ನೆಲ್ಲ ಮುಗ್ಧಗೊಳಿಸಿತು. ರಂಗದ ಮುಂದಿನ ಪರದೆ ಯಾವಾಗ ಸರಿಯುವುದೋ— ಎಂದು ಎಲ್ಲರೂ ತವಕಿಗಳಾಗಿ ನೋಡತೊಡಗಿದರು. ಒರಗುದಿಂಬನ್ನು ನಂಬಿ ಕುಳಿತಿದ್ದ ಸೋಮಪ್ಪದೇಸಾಯರು, ಆತುರಭಾವದವರಾಗಿ ಸೆಡೆದು ಕುಳಿತುಕೊಂಡರು. ಎಲ್ಲರಲ್ಲಿಯೂ ಸಾಕಷ್ಟು ಕುತೂಹಲವನ್ನು ಕೆರಳಿಸಿದ ಮೇಲೆ, ತೀವ್ರಗತಿಯ ಕುಣಿತದೊಂದಿಗೆ ಗವುಳಿಗಿತ್ತಿ, ತೆರೆಯನ್ನು ಸರಿಸಿ ಹೊರಗೆ ಬಂದಳು. ಎಲ್ಲರ ಬೆರಗಿನ ದೃಷ್ಟಿಗಳೂ ಗವುಳಿಗಿತ್ತಿಯ ಮೇಲೆಯೆ. ಆ ಪಾತ್ರ ಧರಿಸಿದವಳು ಬೇರೆ ಯಾರೂ ಅಲ್ಲ; ಸುಪ್ರಸಿದ್ಧ ಗಂಗಾಸಾನಿಯೆ !

ಗಂಗಾಸಾನಿ ಸಹಜಸುಂದರಿ. ಅದರ ಮೇಲೆ ಆಟಗಾತಿಗೆ ತಕ್ಕ ಪ್ರಸಾಧನಗಳು. ಕಪ್ಪಾಗಿರುವ ಕೊಂಕಿದ ಹುಬ್ಬು, ತಂಬುಲ ತಿಂದ ಚೆಂದುಟಿಗಳು, ಗಲ್ಲದ ಗುಲಾಬಿ, ಕಳೆಗೂಡಿದ ಬೊಗಸೆಗಂಗಳು, ಚಾತುರ್ಯದಿಂದ ಕಟ್ಟಿದ ಮುಡಿ, ರೇಶಿಮೆಯಂಚಿನ ಬಿಳಿಯ ಪತ್ತಲ, ಹಸುರು ತಾಸ್ತಿಯ ಕುಪ್ಪಸ, ಕೊರಳಲ್ಲಿಯ ಅಡ್ಡಿಕೆ-ಚಂದ್ರಹಾರಗಳು, ಕಾಲಲ್ಲಿಯ ಪೈಜಣ— ಎಲ್ಲವೂ ಪ್ರೇಕ್ಷಕರಿಗೆ ಹೊಸವಾಗಿ ಕಂಡುವು. ಸೋಮಪ್ಪ ದೇಸಾಯಿಯವರು ತಮ್ಮ ಕೋರೆಮೀಸೆಗಳ ಮೇಲೆ ಬೆರಳುಗಳನ್ನಾಡಿಸುತ್ತ, ಕದಲದ ದೃಷ್ಟಿಗಳಿಂದ ಗವುಳಿಗಿತ್ತಿಯನ್ನು ನೋಡತೊಡಗಿದರು.

ಆಟ ಮುಂದುವರಿಯಿತು. ಗವುಳಿಗಿತ್ತಿಯ ಬೇರೆ ಬೇರೆ ಹಾಡು-ಕುಣಿತಗಳು, ದೂತಿ-ವಿದೂಷಕರ ನಗೆಮಾತುಗಳು, ಬಾಲಗೋಪಾಲನ ಆಗಮನ, ಗವಳಿಗಿತ್ತಿ-ಗೋಪಾಲರ ಶೃಂಗಾರಸಂವಾದ, ಹಿಮ್ಮೇಳ-ಮುಮ್ಮೇಳದವರ ಭಾವಪ್ರಚೋದಕ ಸಂಗೀತ— ಇವೆಲ್ಲ ಪ್ರೇಕ್ಷಕರ ಕಣ್ಮನಗಳನ್ನು ಕಟ್ಟಿಕುಳ್ಳಿರಿಸಿಬಿಟ್ಟುವು. ಗೋಪಾಲನು ಗವುಳಿಗಿತ್ತಿಗೆ ಹೇಳಿದ :

“ ಅಪ್ಪನು ನಾನಲ್ಲ, ಅಣ್ಣನು ನಾನಲ್ಲ—
ನಿಮ್ಮಪ್ಪನ ಅಳಿಯ ಕಾಣೇ ಗೊಲ್ಲರ ಭಾಮೇ !”

ಎಂಬ ಹಾಡನ್ನು ಕೇಳಿದಾಗ, ದೇಸಾಯರು ತಮ್ಮ ಗಾಂಭೀರ್ಯವನ್ನು ಮರೆತು

ಖದಖದನೆ ನಕ್ಕುಬಿಟ್ಟರು. ಗೋಪಾಲನ ಪ್ರೀತಿಯಾಚನೆಯನ್ನು ಒಪ್ಪಿ ಗವಳಿ-ಗಿತ್ತಿ ಆತನನ್ನು ಅನುಸರಿಸಿ ಹಾಡುತ್ತ ಕುಣಿಯುತ್ತ ಹೊರಟುಹೋಗುತ್ತಿರುವಾಗಲಂತೂ, ದೇಸಾಯಿಯರು ಮೆಚ್ಚಿಗೆಯಿಂದ ತಲೆಯನ್ನು ತೂಗುತ್ತಿದ್ದರು. ಕೈಯಿಂದ ತೊಡೆಯನ್ನು ತಟ್ಟಿ ಕುಣಿತದ ಗತಿಯೊಂದಿಗೆ ತಾಳವನ್ನು ಹಾಕುತ್ತಿದ್ದರು. ಹತ್ತಿರದಲ್ಲಿಯೆ ಕುಳಿತ ಸಾರೋಟದ ಸಾರಥಿ ಭೀಮಣ್ಣ, ಬೋನ-ಗಾರ ಚಂಬಣ್ಣ ಇಬ್ಬರೂ, ಬೆರಗುಗಣ್ಣಿನಿಂದ ಆಗಾಗ ದೇಸಾಯಿಯರನ್ನು ನೋಡುತ್ತಿದ್ದರು.

ಗವುಳಿಗಿತ್ತಿಯ ಭಾಗವು ಮುಗಿದು ಮುಖ್ಯ ಆಟವು ಪ್ರಾರಂಭವಾಯಿತು. ದೇಸಾಯಿಧಣಿಗಳು ಪ್ರೇಕ್ಷಕರಾಗಿ ಕುಳಿತುದರಿಂದಲೋ ಏನೋ, ಗಂಗಾ-ಸಾನಿಯ ಹಾಡು–ಅಭಿನಯ–ಕುಣಿತಗಳಿಗೆ, ಅಂದು ಎಂದಿಲ್ಲದ ಬಣ್ಣಗಾರಿಕೆ ಬಂದುಬಿಟ್ಟಿತು. ಸಾರಂಗಿವಾದಕ–ಡಪ್ಪುಗಾರರಿಗೆ ಎಲ್ಲಿಯ ಹುರುಪು ಬಂದಿದ್ದಿತೋ ಏನೊ! ಗಲ್ಫೋಜಿ–ಗಂಗಾಸಾನಿಯರ ಪ್ರಾರಂಭ ದರ್ಶನವಾಯಿತು. ಇಬ್ಬರ ಹೃದಯದಲ್ಲಿಯೂ ಉದಯವಾದ ಪ್ರೇಮಭಾವವೂ ಸೂಚಿತವಾಯಿತು. ಆಮೇಲೆ ಗಂಡಿನ ಪ್ರೇಮದ ಆಹ್ವಾನಕ್ಕೆ ಹೆಣ್ಣಿನ ತಡೆ, ಗಂಡಿನ ವಿರಹವೇದನೆ ಇವು ಪ್ರದರ್ಶಿತವಾದುವು. ಬಳಿಕ ಹೆಣ್ಣಿನ ವಿಪ್ರಲಂಭಾವಸ್ಥೆ, ದೂತಿಯನ್ನಟ್ಟುವುದು, ಹೆಣ್ಣು–ಗಂಡಿನ ಸಂಯೋಗಶೃಂಗಾರ ಇವು ಗೀತ-ನೃತ್ಯಗಳೊಂದಿಗೆ ಪ್ರದರ್ಶಿತವಾದುವು. ನಡು-ನಡುವೆ ದೂತಿ-ವಿದೂಷಕರ ಜಾನಪದ ಹಾಸ್ಯರಸದ ಹೊನಲು ಹರಿಯುತ್ತಲೇ ಇತ್ತು. ವಿಪ್ರಲಂಭಕಾಲದಲ್ಲಿ ನಾಯಿಕೆಯು ತೋರಿಸಿದ ಕರುಣಾಭಾವವೂ, ಸಂಯೋಗಕಾಲದಲ್ಲಿ ಅವಳು ತೋರಿಸಿದ ರತಿಯ ಸಂಭ್ರಮಭಾವವೂ ಸೋಮಪ್ಪ ದೇಸಾಯಿಯರಿಗೆ ತುಂಬ ಮೆಚ್ಚಿಗೆಯಾದುವು. ಆಟ ಮುಗಿದು ಮಂಗಲಾರತಿಯು ನಡೆದಾಗ, ಸಾರೋಟದ ಸಾರಥಿ ಭೀಮಣ್ಣನು ಅಟ್ಟವನ್ನೇರಿ ಹೋದ; 'ದೇಸಾಯಿ ಧಣಿಯರು ಮೆಚ್ಚಿಕೊಟ್ಟ ಉಡುಗರೆ' ಎಂದು ನಾರಿ, ಗಂಗಾಸಾನಿ ಹಿಡಿದ ಮಂಗಲಾರತಿಯ ತಟ್ಟೆಯಲ್ಲಿ ಐವತ್ತು ರೂಪಾಯಿಗಳನ್ನು ಹಾಕಿದ. ಗಂಗಾ-ಸಾನಿ ಕೃತಜ್ಞತೆತುಂಬಿದ ಕಡೆಗಣ್ಣುಗಳಿಂದ ದೇಸಾಯಿ ಧಣಿಯರನ್ನು ನೋಡಿದಳು; ಆಗ ದೇಸಾಯಿಯರ ಕೋರೆಮೀಸೆಯ ಮೊಗದ ಮೇಲೆ

ಒಂದು ಬಗೆಯ ಕಿರುನಗೆಯು ಮೂಡಿ ನಿಂತಿತ್ತು; ಅದರಲ್ಲಿ ಅವರ ಒಳಮನದ ಆಶೆಯು ಅಡಗಿಕೊಂಡಿತ್ತು.

೫

ನಂದನೂರಿನ ಜಾತ್ರೆಯನ್ನು ಮುಗಿಸಿಕೊಂಡು, ದೇಸಾಯಿಯರು ತಮ್ಮ ಹಿರಿಯೂರಿಗೆ ಮರಳಿದರು. ಬಂದು ಮೂರು ನಾಲ್ಕು ದಿನಗಳಾದರೂ ದೇಸಾಯಿಯರು ತಮ್ಮ ಕಡೆಗೆ ಬಾರದುದು ರಾಣಿ ಗೌರಮ್ಮನಿಗೆ ಆಶ್ಚರ್ಯ-ವಿಷಾದಗಳನ್ನುಂಟು ಮಾಡಿತು. ತೊತ್ತಿನೊಂದಿಗೆ ಹೇಳಿಕಳುಹಿದಾಗ, ಅವರು ಸಿಡುಕಿನ ಧ್ವನಿಯಲ್ಲಿ ಹೇಳಿದರು :

"ಹೆಣ್ಣಿನ ಹತ್ತರ ಗಂಡುಬರೂದಂದರ, ಬರೇ ಕಣ್ಣೀರು ಒರಿಸಿ ಗೋತ್ಯ ಕೂಡಲಿಕ್ಕಲ್ಲ !"

ತೊತ್ತು ಮರಳಿಬಂದು ಆ ಮಾತನ್ನು ಹೇಳಿದಳು. ಕೇಳಿ ಗೌರಮ್ಮ-ರಾಣಿ ಗೊಂದಲಗೊಂಡುಹೋದಳು. ತನ್ನಿಂದ ಏನೋ ತಪ್ಪಾಗಿದೆಯೆಂದು ಭಾವಿಸಿದಳು. ಪತಿಯ ಈ ಬಿರುನುಡಿಗಳಿಂದ, ಪುತ್ರವಿಯೋಗದ ದುಃಖದ ಮೇಲೆ ತೆರೆಯನ್ನು ಹಾಕಿ, ಇನ್ನೊಂದು ಹೊಸಬಗೆಯ ದುಃಖವನ್ನು ಸ್ಥಾಪಿಸಿದಂತಾಯಿತು. ದೇಸಾಯರ ತೀರ ವಿಶ್ವಾಸದವನೆಂದರೆ ಸಾರೋಟದ ಸಾರಥಿ ಭೀಮಣ್ಣ. ಅವನನ್ನು ಕರೆಯಿಸಿ, ತನ್ನ ತಪ್ಪನ್ನು ಕ್ಷಮಿಸುವಂತೆ ಹೇಳಿಕಳುಹಬೇಕೆಂದು ಗೌರಮ್ಮರಾಣಿ ಯೋಚಿಸಿದಳು. ಅವನನ್ನು ಕರೆಕಳುಹಿದಳು. ಆದರೆ ಸಾರೋಟದ ಭೀಮಣ್ಣ ಊರಲ್ಲಿ ಇರಲಿಲ್ಲ. ಎರಡುದಿನಗಳ ಹಿಂದೆ, ಸಾರೋಟವನ್ನು ಹೂಡಿಕೊಂಡು ಎಲ್ಲಿಗೋ ಹೋಗಿರುವನೆಂದು ಗೊತ್ತಾಯಿತು. ಬೋನಗಾರ ಚಂಬಣ್ಣನನ್ನು ಹುಡುಕಿಸಿದಾಗ, ಆತನೂ ಊರಲ್ಲಿ ಇಲ್ಲವೆಂಬುದು ತಿಳಿದುಬಂತು. ಅವರಿಬ್ಬರೂ ಎಲ್ಲಿಗೆ ಹೋಗಿರುವರೆಂಬುದು ಯಾರಿಗೂ ಗೊತ್ತಿರಲಿಲ್ಲ.

ಗೌರಮ್ಮರಾಣಿಯೂ ದೊಡ್ಡಮನೆತನದ ಹೆಣ್ಣುಮಗಳು. ಅವಳು ತುಂಬ ಅಭಿಮಾನಿನಿ; ಅಲ್ಲದೆ ತಾನೇ ಹೋಗಿ ಗಂಡನೊಂದಿಗೆ ಮಾತನಾಡಿ ಬರುವಂತಹ ಧೃಷ್ಟತೆಯು ಅವಳಲ್ಲಿ ಇರಲಿಲ್ಲ. ಆದುದರಿಂದ ಅವಳು ಮುಂಗಾಣದವಳಾಗಿ ಸುಮ್ಮಗಿದ್ದು ಬಿಟ್ಟಳು. ಏರಿದ ಕೋಪ ಆರಿದ ಮೇಲೆ

ಎಲ್ಲವೂ ಸರಿಹೋದೀತೆಂಬ ಆಂತರಿಕ ಆಶೆಯೂ ಆಕೆಯ ನಿಷ್ಕ್ರಿಯತೆಗೆ ಸಾಧಕವಾಗಿದ್ದಿತು. ಹೀಗೆಯೆ ಮೂರು ದಿನಗಳು ಕಳೆದುವು. ನಾಲ್ಕನೆಯ ದಿನ ತೊತ್ತುಬಂದು ಗಾಬರಿಯ ಧ್ವನಿಯಲ್ಲಿಯೆ ಮೆಲ್ಲಗೆ ಹೇಳಿದಳು :

" ಅವ್ವನವರ, ಊರಾಗ ಮಂದಿ ಏನೇನೋ ಮಾತು ಆಡಲಿಕ್ಕೆ ಹತ್ತ್ಯಾರ್ರಿ !"

ಹೆದರಿಕೆಯ ಕಂಠದಲ್ಲಿಯೆ ಗೌರಮ್ಮ ಕೇಳಿದಳು :

" ಏನು ?....ಏನು ಮಾತಾಡಲಿಕ್ಕೆ ಹತ್ತ್ಯಾರ ?"

" ಹೂವಿನ ತ್ವಾಟದ ಬಂಗಲೆಯೊಳಗ ಯಾವಾಕಿಯೋ ಒಬ್ಬಾಕಿ ಹೆಣ್ಣುಮಗಳು ಬಂದಾಳಂತ. ಸಾರೋಟದ ಭೀಮಣ್ಣ, ಜೋನಗಾರ ಚಂಬಣ್ಣ ಹೋಗಿ, ಆಕಿನ್ನ ಕರಕೊಂಡು ಬಂದಾರಂತ. ನಿನ್ನೆ ರಾತ್ರಿ ಧಣಿಗಳು ಅಲ್ಲಿಗೇ ಹೋಗಿದ್ದರಂತ !"

ಗೌರಮ್ಮರಾಣಿಯು ಎದೆಗೆ ಒಮ್ಮೆಲೆ ಸಿಡಿಲುಬಡಿದಂತಾಯಿತು. ಏನು ಮಾತನಾಡಬೇಕೆಂಬುದೇ ತಿಳಿಯದಂತಾಯಿತು. ತೊತ್ತಿನ ಕಡೆಗೆ ದೈನ್ಯ ಭಾವದಿಂದ ನೋಡುತ್ತ ಸುಮ್ಮನೆ ಕುಳಿತಳು. ಮತ್ತೆ ದಾಸಿಯೇ ಹೇಳ ತೊಡಗಿದಳು :

" ಇನ್ನೂ ಏನೇನೋ ಜನದ ಮಾತರಿ ಅವ್ವನವರ ! ಬಂದಿರುವ ಆ ಹೆಣ್ಣುಮಗಳು ಆಟಾಮಾಡುವ ಚಿಮಣಾ ಅಂತ. ಮೊನ್ನೆ ನಂದನೂರಿನ ಜಾತ್ರ್ಯಾಗ ಆಕಿದ್ದ ಆಟ ಆಯ್ತಂತ. ಆಕಿನ್ನ ಕರಕೊಂಡು ಬಂದದ್ದರ ಸಲುವಾಗಿ ಸಾರೋಟದ ಭೀಮಣ್ಣನ ಹೆಣ್ತಿ ನಾಗವ್ವ, ಗಂಡನ್ನ ಬೈದ್ದಬೈತಾಳಂತ !"

ಗೌರಮ್ಮರಾಣಿಯ ಕಣ್ಣಿಂದ ಹನಿಗಳು ಇಳಿಯತೊಡಗಿದುವು. ಮನಸ್ಸು ಕೆರಳಿದುದು ಮುಖದ ಕೆಂಪಿನಲ್ಲಿ ಕಾಣತೊಡಗಿತು. ಬಹಳಹೊತ್ತು ಸುಮ್ಮಗೆ ಕುಳಿತಿದ್ದು ಆಮೇಲೆ ಬಿಸಿಯಾದ ಉಸಿರಿನೊಂದಿಗೆ ಹೇಳಿದಳು :

" ಅಯ್ಯೊ, ಹೆಣ್ಣಿನಿಂದ ಗಂಡುಬಯಸುವುದು ಇಷ್ಟನ್ನೇ ಏನು ?"

ತೊತ್ತು ಮತ್ತೆ ಮಾತನಾಡಿದಳು :

" ಆಕಿ ಬಾಳ ಚೆಲುವಿ ಇದ್ದಾಳಂತರಿ ! ಹಾಡು....ಕುಣತಾ....ಒಂದ-ರಾಗೂ ತಗಿಯೂ ಹಾಂಗ ಇಲ್ಲ ಅಂತರಿ! ಇನ್ನ ನಿಮ್ಮ ಗತಿ ಏನು ಅವ್ವನವರ?!"

“ದೇವರು ತೋರಿಸಿದ್ದೇ ಗತಿ!” ಎಂದು ಗೌರಮ್ಮರಾಣಿ ನಿರಾಶಾ-ಭಾವದಿಂದ ನುಡಿದಳು. ತೊತ್ತು ಸಂತಾಪದಿಂದ ಹೇಳಿದಳು :

“ನಮ್ಮ ಧಣಿಗಳಂದರ, ಎಂಥಾ ದೇವರಂಥಾ ಮನಿಶಾರು ! ಅವರ್‍ಯಾಕ ಇಂಥಾ ತಪ್ಪುದಾರೀ ತುಳಿದಿದ್ದಾರರಿ ಅವ್ವನವರ! ಅವರ ಮನಸ್ಸನ್ನ ಯಾರು ಕೆಡಿಸ್ಯಾರೋ ಏನೋರಿ....ಅವರ ಸಂತಾನ ನಿಸ್ಸಂತಾನ ಆಗಲಿ!”

ಗೌರಮ್ಮರಾಣಿ ಸುಮ್ಮಗೆ ಕುಳಿತಿದ್ದಳು. ತೊತ್ತು ಮತ್ತೆ ಏನು ವಿಚಾರ ಮಾಡಿದಳೋ ಏನೋ ! ಸಮಾಧಾನದ ಸ್ವರದಲ್ಲಿ ಹೇಳಿದಳು :

“ದೊಡ್ಡವರದೇನು, ಎಲ್ಲಾನೂ ದೊಡ್ಡ ಮಾತ಼ ಬಿಡ್ರಿ! ಇಬ್ಬರು ಮೂವರು ಹೆಂಡರನ್ನ ಮದಿವ್ಯಾಗಿ, ವ್ಯಾಲ ಸೂಳೆಯರನ್ನ ತಂದು ಇಟಗೊಳ್ಳೊ ಸಿರಿವಂತರೂ ಬೇಕಾದಷ್ಟು ಜನ ಇರತಾರ್‍ರಿ!”

ನಿಟ್ಟುಸಿರಿನೊಂದಿಗೆ ಗೌರಮ್ಮರಾಣಿ ಹೇಳಿದಳು :

“ಬ್ಯಾಡ ನನ್ನ ತಾಯಿಾ ! ನನಗ ಅಂಥಾ ಶ್ರೀಮಂತರೂ ಬೇಕಾಗಿಲ್ಲ; ಶ್ರೀಮಂತಕೀನೂ ಬೇಕಾಗಿಲ್ಲ!”

“ಬೇಕಾಗಿಲ್ಲ ಅಂದರ ಬಿಡತೈತಿ ಹ್ಯಾಂಗರಿ ! ನೀವ಼ ಹಿರಿಯ ಹೆಂಡರು! ಮುಂದ ದೇಸಾಯಿಧಣಿಗಳಾಗವರು ನಿಮ್ಮ ಹೊಟ್ಟೆಯಿಂದನ಼ ಹುಟ ಬರಬೇಕಲ್ಲರಿ !

“ಕೈಗೆ ಬಂದ ತುತ್ತ಼ ಬಾಯಿಗೆ ಬರಲಿಲ್ಲ! ಇನ್ನ ಮುಂದಿನ ಮಾತು ಏನದನೋ ಯಾರಿಗೆ ಗೊತ್ತು ! ದೇಸಾಯಿಧಣಿಗಳು ಆಟದ ಚಿಮಣಾನ್ನ ತಂದದ್ದ಼ ನಿಜ ಇದ್ದರ, ಆಕೀ ಮಗನೇ ಇನ್ನ ವ್ಯಾಲ ದೇಸಾಯಿಧಣಿ ಆಗಲಿ ! ಇಂಥಾ ಮೈಲಿಗಿಯೊಳಗ ಉಂಡುಕೊಂಡು ಇದ್ದು ಬಿಡಲಿಕ್ಕೆ, ನನ್ನಿಂದಂತೂ ಆಗೂದಿಲ್ಲ!”

“ಏನೇನು ನಿಜ ಐತ್ಯೋ ಏನೇನು ಸುಳ್ಳು ಐತ್ಯೋ ಇನ್ನೂ ತಿಳಕೊಳ್ರಿ ಅವ್ವನವರ ! ಸುಮ್ಮನ಼ ಜನದ ಮಾತು ನಂಬಿ ಜನ್ಮಾ ಕೆಡಿಸಿಗೋಬಾರದು !”

“ನೀನು ಆ ಸಾರೋಟದ ಭೀಮಣ್ಣನ್ನ ಬೋನಗಾರ ಚಂಬಣ್ಣನ್ನ ಇಲ್ಲಿ ಕರಕೊಂಡು ಬಾ ! ಖರೇ ಇದ್ದದ್ದು ಏಸು ದಿನ ಮುಚ್ಚತ಼ದ ?”

ತೊತ್ತು ಹೊರಟುಹೋದಮೇಲೂ ಗೌರಮ್ಮರಾಣಿ ಹಾಗೆಯೇ ಕುಳಿ

ತಿದ್ದಳು. ಆಕೆಯ ಮನಸ್ಸಿನಲ್ಲಿ ಒಂದರ ಹಿಂದೊಂದು ಯೋಚನೆಯ ತೆರೆಗಳು :

" ದೇವರಾಗಿ ಇರಬೇಕಾದವರು ದೈತ್ಯರಾದರೆ ಏನು ಮಾಡಬೇಕು ? ಗಂಡ-ಹೆಂಡಿರ ಸಂಬಂಧ ಬಿಡಲಾರದ ಸಂಬಂಧವೆ ?....ಬಿಡಲಾರದ ಸಂಬಂಧ ವಾಗಿಯೆ ಇರಲಿ, ಯಾರು ಬೇಡವೆನ್ನುತ್ತಾರೆ?....ಗಂಡನ ಸಂಬಂಧವಾಗಿ ತಾಳಿ-ಕುಂಕುಮಗಳು ಇರುವವು....ಅವಷ್ಟು ಸಾಕು !....ಅಯ್ಯೊ....ನನ್ನ ಮುದ್ದು-ಕಂದ ಬದುಕಿದ್ದರೆ !....ನನಗಿನ್ನು ಮುದ್ದುಕಂದನೂ ಬೇಡ........ಈ ದೇಸ-ಗತಿಯ ವೈಭವವೂ ಬೇಡ....ಅಯ್ಯೊ !"

ಗೌರಮ್ಮರಾಣಿ ಎಲ್ಲ ನಿಜಸಂಗತಿಯನ್ನೂ ತಿಳಿದುಕೊಂಡಳು. ತವರ ಮನೆಗೆ ಹೋಗಿಬರುವೆನೆಂದು ಗಂಡನಿಗೆ ಹೇಳಿಕಳುಹಿದಳು. ಆತನ ಸಮ್ಮತಿ-ಅಸಮ್ಮತಿಗಳ ದಾರಿಯನ್ನು ಕೂಡ ನೋಡದೆ, ದಾಸಿಯೊಬ್ಬಳನ್ನು ಜೊತೆಗೆ ಕರೆದುಕೊಂಡು, ಸ್ವಂತದ ಮೇಣೆಯಲ್ಲಿ ತವರಮನೆಗೆ ಹೊರಟು ನಡೆದಳು.

ಹೆಂಡತಿಯು ಒಮ್ಮೆಲೆ ಹೊರಟುಹೋದುದು ಸೋಮಪ್ಪ ದೇಸಾಯಿ ಯರ ಮನಸ್ಸಿಗೆ ನೊಣಕಡಿದಂತೆ ಎನಿಸಿತಾದರೂ, ಯಾವುದೋ ಹತ್ತಿರದ ಆಶೆ, ಆ ವಿಷಾದವನ್ನು ಬಹಳಹೊತ್ತಿನವರೆಗೆ ಇರಗೊಡಲಿಲ್ಲ. ದೇಸಾಯಿ-ಯರದು ವಿಲಾಸೀಸ್ವಭಾವ. ದೊಡ್ಡವರಾಗುವುದರಲ್ಲಿಯೆ ಅವರು ದೇಸಗತಿಯ ಗಾದೆಗೆ ಮಾಲಕರಾಗಿದ್ದರು. ಹರಯದ ಮೊದಲುದಿನಗಳಲ್ಲಿಯೆ ಗೌರಮ್ಮ-ರಾಣಿಯಂತಹ ಕುಲೀನೆಯೂ ಚೆಲುವೆಯೂ ಆದ ಹೆಂಡತಿಯ ಸಹಚಾರಿತ್ವ ದೊರೆತಿದ್ದಿತು. ಬಹಳ ದಿನಗಳ ವರೆಗೆ ಮಕ್ಕಳಾಗದೆ ಇದ್ದುದು ಆ ಗಂಡ-ಹೆಂಡಿರ ಪ್ರೇಮಜೀವನದಲ್ಲಿ ಯಾವ ಕೊರತೆಯನ್ನೂ ಉಂಟುಮಾಡಿದ್ದಿಲ್ಲ. ಗೌರಮ್ಮರಾಣಿಗೆ ಅದರ ಕೊರತೆಯೆನಿಸುತ್ತಿರಬಹುದಾದರೂ ಅದನ್ನು ಹೊರಗೆ ತೋರಗೊಡುತ್ತಿರಲಿಲ್ಲ. ದೇಸಾಯಿಯರಿಗೆ ಅದರ ಯೋಚನೆಯೇ ಇರಲಿಲ್ಲ. ಬಹಳ ದಿನಗಳ ತರುವಾಯ ಗೌರಮ್ಮರಾಣಿ ಬಸಿರೆಯಾದುದು, ಅವರ ಉತ್ಸಾಹ ವನ್ನೇನೂ ಹೆಚ್ಚಿಸಲಿಲ್ಲ. ಇಷ್ಟೇ ಅಲ್ಲ, ಆಕೆ ಹೆರಿಗೆಗಾಗಿ ತವರಮನೆಗೆ ಹೋದುದೂ, ಮರಳಿ ಬಂದಮೇಲೆ ಮಗುವಿನ ಮುದ್ದಿನಲ್ಲಿಯೆ ಹಗಲಿರುಳು ಗಳನ್ನು ಕಳೆಯುವುದೂ ಅವರಿಗೆ ಬೇಸರದ ವಿಷಯಗಳಾಗಿದ್ದುವು. ಮಗುವು

ಸತ್ತುಹೋದ ಮೇಲೆ, ನೊಂದು ಬೆಂದ ತಾಯ ಕರುಳು ವ್ಯಥೆಯಲ್ಲಿ ವೇಳೆ ಕಳೆಯುತ್ತಿರುವುದಂತೂ ಅವರ ಬೇಸರವನ್ನು ಇನ್ನಿಷ್ಟು ಹೆಚ್ಚಿಸಿತು. ತಮ್ಮ ಐಶ್ವರ್ಯದ ಬಾಳಿನಲ್ಲಿಯೂ ಎಂತಹದೋ ಕೊರತೆ ತುಂಬಿದೆಯೆಂದು ಅವರಿಗೆ ಎನಿಸತೊಡಗಿತು. ನಂದನೂರಿನ ಜಾತ್ರೆಯ ಕಾಲದ ಆಟದಲ್ಲಿಯ ಗಂಗಾ-ಸಾನಿಯನ್ನು ಕಂಡಮೇಲೆ, ತಮ್ಮ ಕೊರತೆಯನ್ನು ಕಡಿಮೆಮಾಡಿಕೊಳ್ಳುವ ವಿಚಾರದ ಮಿಂಚುಮೂಡಿದಂತಾಯಿತು. ಸಾರೋಟದ ಸಾರಥಿ, ಬೋನಗಾರ ಇಬ್ಬರೂ ಕೂಡಿ, ಅವರ ವಿಚಾರದ ಮಿಂಚಿಗೆ ಒಂದು ಸ್ಥೈರ್ಯವನ್ನು ತಂದುಕೊಟ್ಟರು. ಅವರ ಸಲಹೆಗಳು ದೇಸಾಯಿಯರ ಮನದೆದುರು ಹಲ-ವಾರು ಮಧುರವಾದ ಸ್ವಪ್ನಗಳನ್ನು ತಂದು ತಂದು ನಿಲ್ಲಿಸಿದುವು. ಗಂಗಾಸಾನಿ ಗವುಳಿಗಿತ್ತಿಯಾಗಿ ಬಾಲಗೋಪಾಲನೊಂದಿಗೆ ಆಡಿದ ಶೃಂಗಾರಲೀಲೆಯೂ, ನಾಯಿಕೆಯಾಗಿ ಗಲ್ಫೋಜಿಯೊಂದಿಗೆ ಆಡಿದ ಪ್ರೇಮವಿಲಾಸಗಳೂ—ಆ ಸುಖ-ಸ್ವಪ್ನಗಳಿಗೆ ಸಹಾಯಕವಾಗಿ ನಿಂತುವು. "ಗಂಡು ನಿಜವಾಗಿಯೂ ಬಯಸು ವಂತಹ ಹೆಣ್ಣು ಗಂಗಾಸಾನಿ!" ಎಂದು ದೇಸಾಯಿಯರು ಖಂಡಿತವಾಗಿ ನಂಬಿದರು. ದೇಸಾಯಿಯರಂತಹರು ಬೇಕೆಂದರೆ, ಗಂಗಾಸಾನಿಯಂತಹ ಬೀದಿಯ ಆಟಗಾತಿ ಸಿಕ್ಕದೆ ಇರುವಳೆ? ಚತುರನಾದ ಭೀಮಣ್ಣ, ಧೂರ್ತ-ನಾದ ಚಂಬಣ್ಣ ಹೋಗಿ ಗಂಗಾಸಾನಿಯನ್ನು ದೇಸಾಯಿಯರಲ್ಲಿಗೆ ಕರೆದು ತಂದೇಬಿಟ್ಟಿದ್ದರು.

ಸಾರೋಟದಲ್ಲಿ ಕುಳಿತು ದೇಸಾಯಿಯರು ಹೂವಿನ ತೋಟದ ಬಂಗಲೆಗೆ ಹೋದರು. ಇದ್ದುದರಲ್ಲಿಯೆ ಅಚ್ಚುಕಟ್ಟಾಗಿ ಕಟ್ಟಿಸಿದ ತೋಟದ ಮನೆ-ಯದು. ಇಷ್ಟವೆನಿಸಿದಾಗ ದೇಸಾಯಿಯರು ಬಂದು, ಆ ಮನೆಯಲ್ಲಿ ಒಂದೆರಡು ದಿನ ಇರುತ್ತಿದ್ದರು. ಆದುದರಿಂದಲೇ ಜನರೆಲ್ಲರೂ ಅದನ್ನು 'ಹೂವಿನ ತೋಟದ ಬಂಗಲೆ' ಎಂದು ಕರೆಯುತ್ತಿದ್ದರು. ಗಂಗಾಸಾನಿಯ ಬೀಡಾರವನ್ನಾಗಿ ಅದನ್ನು ಮಾಡಬೇಕೆಂದು ಗೊತ್ತಾದಾಗ, ಹೊಸತಾಗಿ ಅದಕ್ಕೆ ಸುಣ್ಣ-ಬಣ್ಣ ಗಳನ್ನು ಹಚ್ಚಿಸುವ ಏರ್ಪಾಡಾಗಿತ್ತು. ಮುಂಗಡೆಯಲ್ಲಿಯೆ ಗುಲಾಬಿಯ ಗಿಡಗಳ ಸಾಲು ಅರಳಿ ನಗುತ್ತಿರುವ ಹೂಗಳನ್ನು ಹೊತ್ತುಕೊಂಡು ನಿಂತಿರು ವುದು. ಮುಂಬಾಗಿಲಿಗೆ ಕಟ್ಟಿದ ಹಂದರದ ಮೇಲೆ, ಬೇಸಗೆಮಲ್ಲಿಗೆಯ ಕಂಟಿ

ಯನ್ನು ಹಬ್ಬಿಸಲಾಗಿತ್ತು. ಕಂಟೆಯಲ್ಲಿ ಅರಳಿದ ಹೂಗಳ ಕಂಪು ಬಂಗಲೆಯ ಒಳಗೂ ಹೊರಗೂ ಹರಡಿರುವುದು.

ದೇಸಾಯಿಯರು ಹೋದಾಗ ಗಂಗಾಸಾನಿ, ಪಡಸಾಲೆಯಲ್ಲಿಯೆ ಒಂದು ಕುರ್ಚಿಯ ಮೇಲೆ ಕುಳಿತುಕೊಂಡಿದ್ದಳು; ಅವರು ಬಂದೊಡನೆಯೆ ಎದ್ದು-ನಿಂತು ಮೆಲುನಗೆಮೊಗದಿಂದ ಸ್ವಾಗತಿಸಿದಳು. ದೇಸಾಯಿಯರು ನೇರವಾಗಿ ಹೋಗಿ, ರತ್ನಗಂಬಳಿಯ ಮೇಲೆ ಇರಿಸಿದ ಲೋಡಿಗೆ ಆತುಕೊಂಡು ಕುಳಿ-ತರು. ಗಂಗಾಸಾನಿ ನಿಂತುಕೊಂಡೇ ಇದ್ದಳು. ಅವಳು ಉಟ್ಟತೊಟ್ಟ ಬಟ್ಟೆಗಳ ಬೆಡಗು, ಮೂಗಿನಲ್ಲಿಯ ಹರಳಿನ ಚುಕ್ಕೆಯ ಹೊಳಪು, ಕಟ್ಟಿಕೊಂಡ ಮುಡಿಯ ಸೊಗಸು ದೇಸಾಯಿಯರ ಕಣ್ಣು-ಮನಗಳನ್ನು ಮಂಕುಗೊಳಿಸಿದುವು. ಒಂದೆರಡು ನಿಮಿಷ ಅವಳನ್ನು ಅಡಿಯಿಂದ ಮುಡಿಯ ವರೆಗೂ ನೋಡಿಯೇ ನೋಡಿದರು. ಆ ಮೇಲೆ ಎಚ್ಚರು ಮೂಡಿದವರಂತಾಗಿ ನುಡಿದರು :

" ನಿಂತುಕೊಂಡsಬಿಟ್ಟೆದಿಯಲ್ಲಾ ಗಂಗಾ ! ಬಾಬಾ, ಕೂತುಕೋ ಬಾ ಇಲ್ಲೆ !"

ಒನಪಿನ ನಡಿಗೆಯಲ್ಲಿಯೆ ಒಂದೆರಡು ಹೆಜ್ಜೆ ನಡೆದು ಬಂದು, ಹಾಸಿದ್ದ ರತ್ನಗಂಬಳಿಯ ಮೇಲೆ, ತುಸು ದೂರದಲ್ಲಿಯೆ ಗಂಗಾಸಾನಿ ಕುಳಿತುಕೊಂಡಳು. ಯಾಚನಾಭಾವವನ್ನು ಮುಖದಲ್ಲಿ ಮೂಡಿಸಿಕೊಂಡು ದೇಸಾಯಿಯರು ಕೇಳಿದರು :

" ಏನು ? ಎಲ್ಲಾ ಆರಾಮ ಅದs ಇಲ್ಲೊ ?"

ಗಂಗಾಸಾನಿ ಆಟಗಾರ್ತಿಯ ರೀತಿಯಲ್ಲಿಯೆ ಹೇಳಿದಳು :

"ದೊಡ್ಡ ಧಣ್ಯಾರ ನೆರಳಾಗs ಬಂದು ಇದ್ದೀನಿ. ಇಲ್ಲಿ ನನಗ ಏನು ಕೊರತಿ ಅನಿಸಬೇಕು ? ಎಲ್ಲಾ ರೀತಿಂದನೂ ಆರಾಮ ಇದ್ದೀನಿ. ಧಣಿಗಳದು ದೊಡ್ಡ ಮನಸು ! ಇಲ್ಲದಿದ್ದರ, ನಮ್ಮಂಥವರನ್ನ ಯಾರು ಮುಂದ ಕರೀತಾರ ಹೇಳ್ರಿ!

" ಹಹಹಹ !" ಸಂತೃಪ್ತಿಯ ನಗೆಯನ್ನು ನಕ್ಕರು ದೇಸಾಯಿಯರು. ಗಂಗಾಸಾನಿಯು ಮನೆಯನ್ನೆಲ್ಲ ಮೇಲೆ ಕೆಳಗೆ ನೋಡಿದಂತೆ ಮಾಡಿ ಹೇಳಿದಳು :

" ಬಂಗಲೇ ಕಟ್ಟಿಸಲಿಕ್ಕೆ ಜಾಗಾ ಮಾತ್ರ ಬಹಳ ಪಸಂದ್ ಆರಿಸೀದೀರಿ ನೋಡ್ರಿ ಧಣೇರs !"

" ಯಾಕ ? ಈ ಜಾಗಾ ನಿನ್ನ ಮನಸ್ಸಿಗೆ ಮೆಚ್ಚಿಗಿ ಆತs ?"

" ಯಾರಿಗೆ ಮೆಚ್ಚಿಗಿ ಆಗಲಿಕ್ಕಿಲ್ಲ ದೇವರು ! ಹನ್ನೆರಡೂ ತಿಂಗಳು ಇಲ್ಲೇ ಇದ್ದು ಬಿಡಬೇಕಂತ ಅನಿಸತೈತಿ ನೋಡ್ರಿ, ಮನಸಿಗೆ !"

" ಅನಿಸಿದರ ಇಲ್ಲೇ ಇದ್ದು ಬಿಡು ಆಯ್ತು ! ಇಲ್ಲೇ ಇರಲಿಕ್ಕೆ ನಿನಗ ಬ್ಯಾಡ ಅನ್ನವರು ಯಾರು ?"

" ನಾನs....ದೇವರು,....ಇಲ್ಲೇ ಇದ್ದು ಬಿಡಬೇಕಂತೀರಾ ?"

" ಮತ್ತ........ನಿನ್ನ ಬರಮಾಡಿಕೊಂಡಾದ್ದ್ಯಾಕ ? ಇನ್ನಮ್ಯಾಲ ನೀನು ಎಲ್ಲಿಯೂ ಹೋಗುವ ಕಾರಣಿಲ್ಲ !"

ಒಮ್ಮೆಲೆ ಗಂಗಾಸಾನಿ ದೊಡ್ಡದಾಗಿ ನಕ್ಕು ಹೇಳಿದಳು :

" ನಾ ಇಲ್ಲೇ ಇದ್ದು ಬಿಟ್ಟರ, ನನ್ನ ಆಟದ ಗತಿಯೇನು ?"

" ಇನ್ನ ಯಾತಕ್ಕ ಬೇಕಾಗೇದ ನಿನಗ ಆಟ ? ಈ ಹಿರಿಯೂರ ದೇಸಗತಿ ಯೊಳಗ ಇದ್ದು ಬಿಟ್ಟರ, ನಿನಗ ಯಾವುದಕ್ಕ ಕೊರತಿ ಆದೀತೂ ಅಂತ ತಿಳಿದೀದಿ ?"

" ತಮ್ಮ ದೊಡ್ಡ ಮನಸಿಗೆ ಕೈಮುಗೀಬೇಕು ಧಣೇರ ? ಹೇಳಿ ಕೇಳಿ ನಾನು ಹೆಣ್ಣುಹೆಂಗುಸು ! ದೇಸಗತಿಗೆ ನನ್ನಿಂದ ಏನು ಪ್ರಯೋಜನ ಆದೀತು?"

ಆಶೆಯ ನುಡಿಗಳಲ್ಲಿ ದೇಸಾಯಿಯರು ಹೇಳಿದರು :

" ಪ್ರಯೋಜನ ಆಗತsದs ಅಂತs ಅಲ್ಲವೇನು ನಿನ್ನ ಇಲ್ಲಿಗೆ ಕರೆಸಿ ಕೊಂಡದ್ದು !"

ಗಂಗಾಸಾನಿ ಹೇಳಿದಳು :

" ನಾನು ಆಟಮಾಡುತ್ತ ಊರೂರು ತಿರಗುವ ಹೆಣ್ಣು ! ನಾನು ಇಲ್ಲಿ ಇರೂದರಿಂದ, ನಿಮಗ ಯಾವ ಸುಖ-ಸಮಾಧಾನಗಳೂ ಸಿಗೂದಿಲ್ಲಾ- ಅಂಬೂದು ನನಗ ಗೊತ್ತದ !"

" ಅದರದೆಲ್ಲಾ ವಿಚಾರ ನಾನು ಮಾಡೇ ನಿನ್ನ ಇಲ್ಲಿಗೆ ಕರಿಸಿಕೊಂ- ಡೀನಿ. ನಿನ್ನಿಂದ ಅಲ್ಲದೆ, ಇನ್ನ್ಯಾರಿಂದ ನನಗ ಸುಖ-ಸಮಾಧಾನ ಸಿಕ್ಕೀತು ?

ಹುಚ್ಚಿಯ ಹಾಂಗ ಏನೇನರೇ ಕಲ್ಪನಾ ಮಾಡಿಕೊಂಡು ಮಾತಾಡಬ್ಯಾಡ !"

" ಹೀಂಗರೇ ! ಆಗಲಿ, ನಿಮ್ಮ ಮಾತಿನಂತೇ ಆಗಲಿ ! ಇಲ್ಲಿ ನಾನು ಏನೂ–ಅಂತ ಆಗಿ ಇರಬೇಕಂತೀರಿ....ಹೇಳ್ರಿ !"

" ಯಾಕ ? ನನಗ ಬೇಕಾದವಳೂ— ಅಂತ ಆಗಿ ಇರಬೇಕು !"

" ಬೇಕಾದವಳ ?....ಒಂದು ಮಾತನ್ನ ನೀವು ಮರೀಬ್ಯಾಡ್ರಿ ಧಣೇರ ! ನೀವು ಗಂಡಸರು....ನಾನು ಹೆಂಗಸು !"

" ಅದಕ್ಕs ನೀನು ಇರಬೇಕು—ಅನ್ನೂದು !"

" ಇದ್ದೀನ ಬಿಡ್ರಿ, ಅದೇನು ದೊಡ್ಡ ಮಾತು?....ಆದರ ನಾ ಇಲ್ಲಿ ಇದ್ದರ, ಜನರೆಲ್ಲಾ ನನ್ನ ಏನು ತಿಳಕೋತಾರಂತೀರಿ ? "

" ಜನರು ತಿಳುಕೊಳ್ಳೂದನ್ನ ತೊಗೊಂಡು ಏನು ಮಾಡತೀ ನೀನು ? ಇದ್ದ ಮಾತನ್ನ ಇದ್ಹಾಂಗ ತಿಳಕೊಂಡಾರು ! "

" ಅದs ನನಗ ಬ್ಯಾಡ ದೇವರು ! 'ದೇಸಾಯರ ಸೂಳಿ' ಅಂತ ಕರಿಸಿಕೊಳ್ಳಲಾಕ ನನ್ನ ಮನಸು ಎಂದೂ ಒಪ್ಪೂದಿಲ್ಲ ! "

ಗಾಬರಿಯ ಧ್ವನಿಯಲ್ಲಿ ದೇಸಾಯಿಯರು ಕೇಳಿದರು :

" ಅಂದರ? ಆಟಗಾರ್ತಿ ಆಗಿ ಊರೂರು ತಿರುಗೂದಕ್ಕಿಂತಾ ಇದು ಕೀಳು ಅಂತ ತಿಳಕೊಂಡಿದಿಯೇನು ನೀನು ? "

ನಿಶ್ಚಯದ ಸ್ವರದಲ್ಲಿ ಗಂಗಾಸಾನಿ ಹೇಳಿದಳು :

" ನಿಮ್ಮ ರೀತಿಯಿಂದ ಆಟಗಾರ್ತಿ ಆಗಿ ಊರೂರು ತಿರುಗೂದು ಕೀಳು ಇರಬಹುದು....ನಾನು ಒಪ್ಪತೀನಿ. ಆದರ ಅದರೊಳಗs ನಾನು ಇದುವರೆಗೂ ಒಂದು ಆನಂದ—ಸಮಾಧಾನ ಕಾಣತs ಬಂದೀನಿ. ಮದಿವೀ ಮಾಡಿ-ಕೊಂಡು ಒಬ್ಬರನ್ನs ಮೆಚ್ಚಿಸಿ ಬದುಕುವಂಥಾ ಕುಲದೊಳಗ ನಾನು ಹುಟ್ಟಿ-ಬಂದಿಲ್ಲ. ಅದು ನನ್ನ ಪೂರ್ವಜನ್ಮದ ಕರ್ಮದ ಫಲಾ ಅಂತ ಅನ್ರಿ ! ಅದಕ್ಕ ಯಾರು ಏನು ಮಾಡೂದು ಐತಿ? ಏನೋ ದೇವರು ಒಂದಿಷ್ಟು ಕಲಾ ನನಗ ದಯೆಪಾಲಿಸ್ಯಾನ. ಅದನ್ನ ಹತ್ತು ಮಂದಿಗೆ ತೋರಿಸಿ 'ಹೌದು' ಅನಿಸಿಕೊಳ್ಳೂದರೊಳಗ, ಒಂದು ರೀತಿ ಆನಂದ ಅನಿಸತೈತಿ ನನಗ! ಆ ಆನಂದ ದೊಳಗ ನಾನು ನನ್ನ ಎಲ್ಲಾ ಕೊರತೀನೂ ಮರೆತುಬಿಡತೀನಿ. 'ಆಟಗಾರ್ತಿ

ಗಂಗಾಸಾನಿ' ಅಂತ ನನ್ನ ಜನರು ಗುರುತಿಸಿದರ, ನನ್ನ ಮನಸಿಗೆ ಏನೂ ನೋವು ಆಗೂದಿಲ್ಲ; ಆದರ....'ದೇಸಾಯರ ಸೂಳಿ' ಅಂತ ಜನಾ ಗುರುತಿ-ಸೂದನ್ನ ಮಾತ್ರ ನನ್ನಿಂದ ತಾಳಿಕೊಳ್ಳಲಾಕ ಆಗೂದಿಲ್ಲ!"

ದೇಸಾಯಿಯರು ದಿಮ್ಮು ಹಿಡಿದವರಂತೆ ಸುಮ್ಮನೆ ಕುಳಿತುಕೊಂಡರು. ಸ್ವಲ್ಪ ವೇಳೆ ತಡೆದು ಗಂಗಾಸಾನಿ ಮಾತನಾಡತೊಡಗಿದಳು :

"ಇನ್ನೂ ಒಂದು ಮಾತು ಧಣೇರs! ನಾನು ಬಂದ ಸುದ್ದೀಕೇಳಿ, ತಮ್ಮ ಅವ್ವನವರು ಇಂದs ತವರ ಮನಿಗೆ ಹೊಂಟುಹೋದರಂತ ವರ್ತಮಾನ ಕೇಳಿದೆ!"

ಒಣಗಿದ ಕಂಠದಲ್ಲಿ ದೇಸಾಯಿಯರು ಹೇಳಿದರು :

"ಹುಂ....ಹೌದು, ಹೋದದ್ದು ಖರೆ!"

"ಒಂದು ವ್ಯಾಳ್ಯೆಕ್ಕ ನಾನು ಇಲ್ಲಿ ಇರಲಿಕ್ಕೆ ಒಪ್ಪಿಕೊಂಡೇ....ಅಂತ ಅನ್ರಿ! ಅವರು ತಿರುಗಿ ಇಲ್ಲಿಗೆ ಬಂದಾರೇನ್ರಿ?"

ಸಿಡುಕುಧ್ವನಿಯಲ್ಲಿ ನುಡಿದರು ದೇಸಾಯಿಯರು :

"ತಿರುಗಿ ಬರದಿದ್ದರ ಬಿಡಲಿ....ತವರ ಮನ್ಯಾಗs ನಿಂತುಕೊಳ್ಳಲಿ!"

"ಅವರ ಕೂಡಾ ನೀವು ಈಗ ಹತ್ತು ಹನ್ನೆರಡು ವರ್ಷ ಸಂಸಾರ ಮಾಡೀರಿ ಅಲ್ಲs?"

ದೇಸಾಯಿಯರು ಉತ್ತರ ಕೊಡಲಿಲ್ಲ. ಸುಮ್ಮನೆ ಕುಳಿತಿದ್ದರು; ಗಂಗಾಸಾನಿಯೇ ಮತ್ತೆ ಹೇಳಿದಳು :

"ಅವ್ವನವರು ದೊಡ್ಡ ಮನಿತನದೊಳಗ ಹುಟ್ಟಿದವರು! ನನಗಿಂತಾ ಅವರಿಗೆ ಕಡಿಮಿ ಚೆಲುವಿಕೇನೂ ಇಲ್ಲಾ ಅಂತ ಕೇಳೀನಿ. ಅವರು ಕೈಹಿಡಿದ ಧರ್ಮದ ಹೆಂಡತಿ! ನಾನು ಊರೂರು ತಿರುಗುವ ಆಟಗಾರ್ತಿ! ಮಳೀನೀರ ಬಿಟ್ಟು ಮಂಜಿನ ನೀರಿಗೆ ಬಾಯಿಬಿಡತಾ ಹೋಗೂದೊಂದು ಲೋಕದ ಮೋಜs ಐತಿ! ಧಣೇರs ಹೆಣ್ಣೊಂದರೂನೂ ಒಂದು ಹೂ ಇದ್ದ್ಹಾಂಗ. ಗಾಸಿ ಆಗದ್ಹಾಂಗ ಅದರ ಜೋಡಿ ನಡಕೊಂಡರನs ಅದು....ಈ ಮಲ್ಲಿಗೀ ಹೂವಿನ್ಹಾಂಗ ಬಾಳಿಗೆಲ್ಲಾ ಕಂಪುಕೊಡತೈತಿ! ಅದನ್ನ ಗಾಸಿ ಮಾಡಿದರ, ಯಾವುದೂ ಫಲಾ ಕೊಡದೆ ಒಣಗಿಹೋಗತೈತಿ! ಇಲ್ಲಿಯ ಮಲ್ಲಿಗೀ ಬಳ್ಳೀ

ಕಿತ್ತಿ ಬ್ಯಾರೇ ಮಲ್ಲಿಗಿಬಳ್ಳೀನ ಹಚ್ಚಿಸಬೇಕಾದರ, ಎಷ್ಟೆಷ್ಟು ಮಾತಿನ ವಿಚಾರ ಮಾಡಬೇಕಾಗತೈತೆಂಬೂದನ್ನ ನಾನು ನಿಮಗ ಬ್ಯಾರೇ ಹೇಳಬೇಕಾಗೈತೇನು? ಸಿಟ್ಟಿಗೆ ಬರಬ್ಯಾಡ್ರೀ ನನ್ನ ಮ್ಯಾಲ ! "

ಬಹಳ ಹೊತ್ತಿನವರೆಗೆ ಸುಮ್ಮನೇ ಕುಳಿತಿದ್ದು ಆಮೇಲೆ ದೇಸಾಯಿಯರು ನಿರುಪಾಯದ ಧ್ವನಿಯಲ್ಲಿ ಕೇಳಿದರು :

"ಒಟ್ಟಿನ ಮ್ಯಾಲ ನಿನ್ನ ಮನಸಿನೊಳಗ ಇದ್ದದ್ದು ಏನು ಅಂತೀ ನೀನು?"

" ಇನ್ನೂ ಒಡೆದು ಹೇಳಬೇಕೇನ್ರಿ ನಿಮಗs! ಇಂದ ಶನಿವಾರ ಅಲ್ರೀ ? ನಾಳೆ ಬರುವ ಮಂಗಳವಾರ ದಿನಕ್ಕ, ಚಿನ್ನಗೇರಿ ಊರ ಆಟದ ಅಡಿಕೀ ಹೀಡಿದೀನ್ರಿ ನಾನು. ಯಾಕ ಬರಲಿಲ್ಲಾ ಅಂತ ನಮ್ಮ ಮ್ಯಾಳದ ಮಂದಿ ಯೆಲ್ಲಾ ನನ್ನ ದಾರೀ ನೋಡತs ಕೂತಿದ್ದಾರು. ನನ್ನ ಲಗೂನs ನಮ್ಮ ಊರಿಗೆ ಕಳಿಸಿಬಿಡ್ರಿ ! "

ದೇಸಾಯಿಯರು ಸ್ವಲ್ಪ ಸಂತಾಪದ ಸ್ವರದಲ್ಲಿ ಹೇಳಿದರು :

" ಬಾಗಿಲಿಗೆ ನಡೆದುಬಂದಿರುವ ಭಾಗ್ಯವನ್ನ ಒದ್ದು ಹೋಗಬೇಕಂತೀ ನೀನು, ತಿಳೀತೇನು ? "

ಸಮಾಧಾನದ ಸ್ವರದಲ್ಲಿಯೆ ಗಂಗಾಸಾನಿ ಹೇಳಿದಳು :

" ನಿಮ್ಮ ಭಾಗ್ಯವನ್ನು ಉಣ್ಣುವ ದೇವತಿ ಬ್ಯಾರೇ ಇದ್ದಾಳ ಧಣೇರs! ನನಗ ಅಂಥಾ ಯೋಗ್ಯತಾ ಇಲ್ಲ. ಊರೊಳಗs ಇದ್ದರ, ಆ ದೇವತಿನ್ನ ಕಣ್ಣಾರೆಕಂಡೇ, ಕಾಲಿಗೆಬಿದ್ದು ಹರಿಕೀ ಪಡಕೊಂಡು ಹೋಗತಿದ್ದೆ; ಆದರ ಈಗೇನು ಮಾಡೂದೈತಿ? ಆ ಹೆಣ್ಣುಮಗಳ ನೊಂದ ಮನಸು ನನಗ ಎಷ್ಟೆಷ್ಟು ಶಾಪಾ ಕೊಡಲಾಕ ಹತ್ತೈತ್ಯೋ ಯಾರು ಬಲ್ಲರು? ಆಯ್ತು, ನಾನು ತಪ್ಪುಗಾರ್ತಿ ಅಲ್ಲಾ ಅಂತ ತಿಳಿದಮ್ಯಾಲ, ಅವರು ತಮ್ಮ ಶಾಪಾನೆಲ್ಲಾ ಹಿಂದಕ್ಕ ತಕ್ಕೊಂಡು, ತುಂಬಿದ ಎದಿಯಿಂದ ನನಗ ಆಶೀರ್ವಾದ ಕೊಡದೇ ಬಿಡೂದಿಲ್ಲಾ ಅಂಬೂದು ನನಗ ಗೊತ್ತು ! ಧಣೇರs! ದಯಿಮಾಡಿ ನನ್ನ....ನಾಳಿನ ದಿನಾನs ನಮ್ಮ ಊರಿಗೆ ಮುಟ್ಟಿಸಿಬಿಡ್ರಿ ! "

ದೇಸಾಯಿಯರು ಅಪ್ರತಿಭರಂತಾಗಿದ್ದರು ಹೊಯ್ದಾಡುವ ಮನಸ್ಸಿನಿಂದಲೇ ಅವರು ಎದ್ದುನಿಂತರು. ಕಿರುನಗೆಯ ಮೊಗದವಳಾಗಿ ಕುಳಿತ

ಗಂಗಾಸಾನಿಯನ್ನು ಕಣ್ಣರಳಿಸಿ ಅರೆನಿಮಿಷ ನೋಡಿದರು ದೀರ್ಘವಾ ಒಂದು ಉಸಿರನ್ನು ಹೊರಗೆ ಹಾಕಿ ಹೇಳಿದರು :

" ಈಗ ನಾನು ಹೋಗತೀನಿ ! ನೀನೂ ಊಟಾ-ಪಾಟಾ ಆರಾಮರೀ ಯಿಂದ ತೀರಿಸಿಕೊ! ಸಂಜೀಕಡೆಗೆ ನಾನು ಮತ್ತೆ ಬರತೀನಿ ! "

" ಧಣಿಗಳ ಅಪ್ಪಣಿ ! " ಎಂದು ಗಂಗಾಸಾನಿಯೂ ಎದ್ದುನಿಂತಳು. ದೇಸಾಯಿಯರನ್ನು ಹೊರಬಾಗಿಲವರೆಗೆ ಕಳುಹಲು ಬಂದಳು. ಅವರು ಸಾರೋಟದಲ್ಲಿ ಕುಳಿತುಕೊಳ್ಳುವವರೆಗೂ ಬಾಗಿಲಲ್ಲಿ ನಿಂತು ನೋಡಿದಳು. ದೇಸಾಯಿಯರ ಮುಖವು ಬಾಡಿದಂತಾಗಿತ್ತು. ಸಾರೋಟ ಮುಂದುವರಿ ದೊಡನೆಯೆ ಒಳಗೆ ಮರಳಿದಳು; ಆಗ ಗಂಗಾಸಾನಿ ತನ್ನೊಳಗೆ ತಾನೇ ಎಂದುಕೊಂಡಳು :

" ದೇಸಾಯರಾದರೇನು, ರಾಜರಾದರೇನು ? ಲೋಕವನ್ನು ತಿಳಿಯದ ಗಂಡಸರ ಹಣೇಬರೆಹವೇ ಹೀಂಗ ! "

೭

ಹಿರಿಯೂರಿಂದ ಸಾರೋಟ ಬಂದಿದೆಯೆಂಬುದನ್ನು ಕೇಳಿ ಗೌರಮ್ಮ-ರಾಣಿಗೆ ದುಃಖದಲ್ಲಿಯೇ ಅಚ್ಚರಿಯೆನಿಸಿತು. ಸೋಮಪ್ಪ ದೇಸಾಯಿಯರು ಸ್ವತಃ ಬಂದಿದ್ದಾರೆಂಬುದನ್ನು ಕೇಳಿದಾಗಲಂತೂ ಅವಳ ದುಃಖ, ಅಚ್ಚರಿ— ಎರಡೂ ಇಲ್ಲದಂತಾಗಿ, ಅವುಗಳ ಸ್ಥಳವನ್ನು ಆಶೆ-ಕುತೂಹಲಗಳು ಆಕ್ರಮಿಸಿ-ದುವು. ಅಳಿಯದೇವರು ಬಂದುದರಿಂದ, ಮಾವನವರ ಮನೆಯಲ್ಲಿ ಗಡಿ-ಬಿಡಿಯೇ ಗಡಿಬಿಡಿ. ಅವರಿಗೆ ತಕ್ಕುದಾದ ಸ್ವಾಗತ, ಆದರೋಪಚಾರಗಳು ನಡೆದುವು. ರಾತ್ರಿಯಲ್ಲಿ ಸಂಭ್ರಮದ ಸವಿಯೂಟ ಜರುಗಿತು. ಸಾರೋಟದ ಭೀಮಣ್ಣ ದೇಸಾಯಿತಿಯನ್ನು ಮೊದಲೇ ಕಂಡು ಏನೇನು ಹೇಳಿದ್ದನೇನೋ! ಗೌರಮ್ಮರಾಣಿ ತನ್ನ ದುಃಖದ ಕಿರುಮನೆಯನ್ನು ಬಿಟ್ಟು ಹೊರಬಿದ್ದಿದ್ದಳು. ಮುಖದಲ್ಲಿ ಉಲ್ಲಾಸದ ಕಿರುನಗೆಯು ತೋರುತ್ತಲಿದ್ದಿತು. ಅಂದವಾದ ಉಡಿಗೆ-ತೊಡಿಗೆಗಳನ್ನು ಧರಿಸಿಕೊಂಡು, ಉತ್ಸಾಹದಿಂದ ಒಳಗೆ ಹೊರಗೆ ಸುಳಿದಾಡುತ್ತಿದ್ದಳು. ಮಗಳ ಈ ನೂರ್ಪಾಡು ಆಕೆಯ ತಂದೆ-ತಾಯಿಗಳಿಗೆ ಹೊಸ ಜೀವವನ್ನೇ ತಂದುಕೊಟ್ಟಂತಾಗಿತ್ತು. ಅವರು ಅಳಿಯದೇವರನ್ನು

ಎಂದೂ ಇಲ್ಲದಂತಹ ಪ್ರೀತಿ-ವಿಶ್ವಾಸಗಳಿಂದ ಕಂಡರು. ಈ ವಾತಾವರಣ ಸೋಮಪ್ಪದೇಸಾಯಿಯರಿಗೆ ತುಂಬ ಹೊಸದೆನಿಸಿತು; ಬಹಳ ಹಿತವೂ ಎನಿಸಿತು.

ರಾತ್ರಿ ಮಲಗುಮನೆಯಲ್ಲಿ ಮೊದಲು ಬೆಟ್ಟಿಯಾದಾಗ ದೇಸಾಯಿಯರು ಗೌರಮ್ಮರಾಣಿಗೆ ಹೇಳಿದರು :

" ನಿನ್ನನ್ನು ಕರೆದುಕೊಂಡು ಹೋಗಬೇಕೆಂದು ನಾನೇ ಹೊರಟು ಬಂದೆ. ನಾನು ತಪ್ಪುಗಾರ ! ನನ್ನನ್ನು ನೀನು ಕ್ಷಮಿಸಬೇಕು !"

ಗೌರಮ್ಮರಾಣಿಯೆಂದಳು :

" ನನ್ನ ದೇವರು ತಾವು. ಹಾಂಗ ಅನ್ನಬಾರದು !"

" ಇಲ್ಲ ರಾಣೀ ! ನಿಜವಾಗಿಯೂ ಒಂದು ದೊಡ್ಡ ಅಪರಾಧ ನನ್ನಿಂದ ಘಟಿಸತಿತ್ತು !"

" ಹೋದಳೇ ಆ ಆಟಗಾರ್ತಿ ?"

" ಅವಳನ್ನು ಊರಿಗೆ ಕಳುಹಿಯೇ ಇಲ್ಲಿಗೆ ಬಂದೆ ರಾಣಿ ! ಆಕೆ ಬರೀ ಒಬ್ಬ ಆಟಗಾರ್ತಿಯಲ್ಲ ! ಒಬ್ಬ ದೇವತಿ ! ಆಕಿ ನನ್ನ ಕಣ್ಣುಗಳನ್ನ ಚೆನ್ನಾಗಿ ತೆರೆಸಿದಳು !"

" ಪಾಪ ! ಕೆಸರಿನೊಳಗ ಕಮಲಗಳೂ ಹುಟ್ಟತಿರತಾವ. ನಾನು ಆಕಿನ್ನ ಒಮ್ಮೆ ನೋಡಬೇಕಾಗಿತ್ತು. ತಪ್ಪು ತಿಳಿವಳಿಕೀ ಮಾಡಿಕೊಂಡು, ಹಾಂಗs ಹೊರಟುಬಂದುಬಿಟ್ಟೆ !"

" ಆಕೀನೂ ಹೀಂಗs ಅಂತಿದ್ದಳು. ನೀನು ಅಲ್ಲಿಯೆ ಇದ್ದಿದ್ದರ, ನಿನ್ನನ್ನು ಕಂಡು ಕಾಲಿಗೆ ಬಿದ್ದು ನಿನ್ನ ಆಶೀರ್ವಾದ ಪಡಕೊಂಡು ಹೋಗಬೇಕಂತ ಅವಳ ಆಶಾ ಇತ್ತು !"

" ದೇವರು ದೊಡ್ಡಂವ ! ಇಷ್ಟು ಬ್ಯಾಗನs ತಮ್ಮನ್ನ ಕಾಣತೀನಂತ ನಾಯೇನೂ ತಿಳಿದಿದ್ದಿಲ್ಲ !"

" ನಾನೂ ಏನೇನೋ ಹುಚ್ಚುಹುಚ್ಚು ಕನಸಿನ ಮಂಟಪಾ ಕಟ್ಟಿ ಕೊಂಡಿದ್ದೆ. ಆದರ ಆ ಆಟದ ಹೆಣ್ಣು, ಗೋಪಾಲಗ—ಗಲ್ಲೊಜಿಗೆ—

ಒಲಿದ್ಹಾಂಗ ನನಗ ಒಲೀಲಿಲ್ಲ. ನನ್ನ ಕನಸಿನ ಹುಚ್ಚು ಎಂಥಾದಂಬೂದನ್ನ ತೋರಿಸಿ, ನಿನ್ನ ಕಡೆಗೆ ನನ್ನ ಮನಸನ್ನ ಒಲಿಸಿ ಹೋದಳು !"

" ನನ್ನ ದೇವರು ನನ್ನದೊಂದು ಆಶಾ ಪೂರ್ಣಮಾಡಬೇಕು !"

" ಅದೇನು ? ಯಾವ ಆಶಾ ನಿನ್ನದು ?"

" ಮುಂದಿನ ಸಲದ ನಂದನೂರ ಜಾತ್ರಿಗೆ....ಮತ್ತ ಆ ಗಂಗಾಸಾನೀ ಆಟವನ್ನೇ ತರಿಸಿರಿ. ನಾನೂ ಜಾತ್ರಿಗೆ ಬರತೀನಿ. ಆಕಿನ್ನ ಪ್ರತ್ಯಕ್ಷ ಕಂಡು, ಆಕೀ ಕಾಲಿಗೆ ಬಿದ್ದು, ಆಕೀ ಆಶೀರ್ವಾದ ಪಡಕೋತೀನಿ !"

" ಚೆಲೋ ಕೆಲಸ ! ಆಯ್ತು ನೀನು ಆಕೀ ಕಾಲು ಬೀಳು; ಆಕಿ ನಿನ್ನ ಕಾಲಿಗೆ ಬೀಳ್ತಾಳ. ಇಬ್ಬರೂ ಒಬ್ಬರಿಗೊಬ್ಬರು ಆಶೀವಾದ ಮಾಡಿರಿ !"

ಗೌರಮ್ಮರಾಣಿಯ ಮುಖದಿಂದ ತುಂಬುನಗೆಯು ಹೊರಹೊಮ್ಮಿತು ಮಗು ಸತ್ತುಹೋದ ನೆನಪೇ ಅವಳಿಗಾಗ ಉಳಿದಿರಲಿಲ್ಲ.

